ನವಕರ್ನಾಟಕ ಪ್ರಕಾಶನ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ಆಗಸ್ಟ್ ೨೦೦೨
ಬೆಲೆ : ರೂ. ೧೦





## ಶ್ರೀಲಂಕಾ ಭೇಟಿ : ಕೆಲವು ಅನುಭವಗಳು

- ಡಾ॥ ಸಿ. ಆರ್. ಸಿ.

# GLIMPSES OF AL-AMEEN MOVEMENT

## Al-Ameen Group of Educational Institutions

In 1966, he had a dream.... the man Dr. Mumtaz Ahmed Khan, visionary, scholar and educationist. The mission-providing self-actualization and self-esteem to an ignorant Indian Muslim Community through higher education.

The founder's zeal, backed by a small, but faithful following, grew into a nationwide movement – Al-Ameen, headquartered in Bangalore, India's Garden City. The Al-Ameen movement is widely hailed as the Muslim Renaissance in Education, not to mention, areas as diverse as Banking, Finance, Health & Mass Communication. Right from the very first institution - the Al-Ameen Arts, Science & Commerce College in Bangalore, to the 166 institutions existing today, the thrust has been on imparting quality education. The pride of Al-Ameen's institutions is the six professional colleges, housed in the Bangalore Campus situated next to the beautiful Lalbagh Garden.

- **Al-Ameen Arts, Science & Commerce College**
- **Al-Ameen College of Pharmacy**
- **Al-Ameen College of Education**
- **Al-Ameen College of Law**
- **Al-Ameen Institute of Management Studies**
- **Al-Ameen Institute of Information Technonology**

Al-Ameen is founded on the belief that education knows no barriers. In keeping with this, Al-Ameen education is freely accessible to both Indians and Foreign nationals.

### STATISTICAL DATA 2002-2003

| Sl. No. | Institutions | Total No. | Number of Students |
|---|---|---|---|
| 1. | **SCHOOLS :** | | |
| | a) Madrassas | 06 | 189 |
| | b) Nursery & Primary Schools | 64 | 20,204 |
| | c) Model Primary School | 01 | 119 |
| | d) Higher Primary Schools | 27 | 13,509 |
| | e) High Schools | 26 | 5,711 |
| | f) Destitute Home | 01 | 50 |
| | g) Al-Ameen Residential School, Hosakote | 01 | 301 |
| 2. | **INSTITUTES :** | | |
| | a) Teachers' Training Institute | 01 | 105 |
| | b) Tailoring Institutes | 15 | 276 |
| 3. | **COLLEGES :** | | |
| | a) Junior Colleges | 08 | 3,510 |
| | b) Junior Colleges (Vocational courses) | 06 | 361 |
| | c) First Grade Colleges | 05 | 2,753 |
| | d) College of Pharmacy | 01 | 347 |
| | e) College of Education | 01 | 99 |
| | f) College of Law | 01 | 273 |
| | g) Post Graduate Diploma (Evening) | 01 | 137 |
| | h) Institute of Management | 01 | 329 |
| | i) Institute of Information Technology | 01 | 3,000 |
| 4. | **OTHERS :** | | |
| | National Open School, New Delhi (Study Centre) | 01 | 143 |
| | Indira Gandhi National Open University (Study Centre) | 01 | 1,619 |
| | **TOTAL** | **169** | **53,035** |

| PROFESSIONAL COLLEGES | COURSES OFFERED |
|---|---|
| **Al-Ameen College of Pharmacy** | Diploma in Pharmacy<br>Bachelor of Pharmacy<br>Master of Pharmacy<br>Research in Pharmacy (Ph.D) |
| **Al-Ameen College of Education** | Bachelor of Education |
| **Al-Ameen College of Law** | Bachelor of Law |
| **Al-Ameen Institute of Management Studies** | Bachelor of Business Management<br>Master of Business Administration |
| **Al-Ameen Arts, Science & Commerce College** | Bachelor of Computer Application<br>Bachelor of Biotechnology<br>Bachelor of Microbiology<br>B.Com with Computer Science<br>Master of Science in Microbiology<br>Master of Computer Application<br>Master of Biotechnology |

## Al-Ameen Group of Institutions

Ground Floor, Administrative Block, Al-Ameen Campus,
Hosur Road (Near Lalbagh Main Gate), Bangalore-560 027
Tel : 080-2235626, 2222402, 2278468, 2234861 Fax : 91-80-2278464
E-mail : AIITCE@yahoo.com Website : www.bangaloreonline.com

# ಹೊಸತು

## ಒಳಗೇನಿದೆ.....




*ಚಿತ್ರಗಳು : ಮಕಾಳಿ, ಮೋನಪ್ಪ, ಬಿ. ವಿಲ್ಸನ್, ಜಿ. ಎಂ. ಬೊಮ್ಮಳ್ಳಿ, ರಾಮಕೃಷ್ಣ*
*ಮುಖಚಿತ್ರ: ಸ್ವಾತಂತ್ರ್ಯ ಮಂಟಪ, ಕೊಲಂಬೊ ಚಿತ್ರ: ಡಾ॥ ಸಿ. ಆರ್. ಚಂದ್ರಶೇಖರ್*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**'ಹೊಸತು'** ನಾಲ್ಕನೆಯ ವರ್ಷಕ್ಕೆ ಕಾಲಿಟ್ಟಿದೆ. ನಮ್ಮ ಓದುಗರು, ಲೇಖಕರು ಹಾಗೂ ಜಾಹಿರಾತುದಾರರನ್ನು ಈ ಸಂದರ್ಭದಲ್ಲಿ ನಲ್ಮೆಯಿಂದ ನೆನೆಯುತ್ತೇವೆ ಮತ್ತು ಅವರ ಸಹಕಾರವನ್ನು ಇತೋಪ್ಯತಿಶಯವಾಗಿ ಕೋರುತ್ತೇವೆ. ಇಂದಿನ ಸಾಂಸ್ಕೃತಿಕ-ರಾಜಕೀಯ ಸನ್ನಿವೇಶದಲ್ಲಿ 'ಹೊಸತು' ಪತ್ರಿಕೆಯ ಬಳಗಕ್ಕೆ ವಿಶೇಷವಾದ ಜವಾಬ್ದಾರಿ ಇದೆ. ನಾವೆಲ್ಲಾ ಒಟ್ಟಾಗಿ ಸೇರಿ ಆ ಜವಾಬ್ದಾರಿಯನ್ನು ನಿರ್ವಹಿಸೋಣ; ದೇಶದಲ್ಲಿ ವಿಪರೀತವಾಗಿ ತಲೆ ಎತ್ತುತ್ತಿರುವ ಜನವಿರೋಧಿ ಶಕ್ತಿಗಳನ್ನು ಹಿಮ್ಮೆಟ್ಟಿಸೋಣ ಮತ್ತು ನಮ್ಮ ರಾಷ್ಟ್ರದ ಸ್ವಾತಂತ್ರ್ಯ-ಸಾರ್ವಭೌಮತ್ವವನ್ನು ಉಳಿಸಿಕೊಂಡು ಬೆಳೆಸೋಣ.

ಈ ತಿಂಗಳು ನಮ್ಮ ದೇಶಕ್ಕೆ ಹೊಸ ರಾಷ್ಟ್ರಾಧ್ಯಕ್ಷರ ಆಯ್ಕೆಯಾಗಿದೆ. ''ಹಸು ಕೊಂದು ಚಪ್ಪಲಿ ದಾನ ಮಾಡುವ'' ಸಂಪ್ರದಾಯದಿಂದಾಗಿ ಅವರು ಗದ್ದುಗೆಯನ್ನೇರಿದ್ದಾರೆಂದರೆ ಅವರ ವರ್ಚಸ್ಸನ್ನು ಪ್ರಶ್ನಿಸುವ ಮಾತಾಗುವುದಿಲ್ಲ. ಅಸಂಖ್ಯಾತ ಅಲ್ಪಸಂಖ್ಯಾತರನ್ನು ಆಹುತಿ ತೆಗೆದುಕೊಂಡು ಆಮೇಲೆ ಅಲ್ಪಸಂಖ್ಯಾತನೊಬ್ಬನನ್ನು ಉನ್ನತ ಪಟ್ಟಕ್ಕೇರಿಸುವ ಬುದ್ಧಿವಂತಿಕೆ ಅಸಾಧಾರಣವಾದುದೆನ್ನಲು ಅಡ್ಡಿಯಿಲ್ಲ. ಚುನಾವಣೆಯ ದಿನದಂದು (೧೫.೭.೨೦೦೨) ಶ್ರೀ. ಕಲಾಂ ಲೋಕಸಭಾ ಭವನಕ್ಕೆ ಭೇಟಿಯಿತ್ತಾಗ ಅವರನ್ನು ಎದುರುಗೊಂಡು ಒಳಕ್ಕೆ ಕರೆದೊಯ್ಯಲು ನೇಮಿಸಲ್ಪಟ್ಟಿದ್ದ ವ್ಯಕ್ತಿ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿ. ಇದು ಭಾರತೀಯ ಜನತಾ ಪಕ್ಷದ ನಾಯಕರ ಯೋಜನೆಯೇ ಹೊರತು ಕಾಕತಾಳೀಯವಾದ ಘಟನೆಯಲ್ಲ. ಗುಜರಾತಿನ ಹತ್ಯೆಗಳನ್ನು ತೀವ್ರವಾಗಿ ಖಂಡಿಸದಿದ್ದುದು ಅವರಿಗೆ ರಾಷ್ಟ್ರಪತಿ ಭವನ ಪ್ರವೇಶಿಸಲು ರಹದಾರಿ ಕಲ್ಪಿಸಿಕೊಟ್ಟಿತೆಂಬುದನ್ನು ಸೂಚ್ಯವಾಗಿ ತಿಳಿಸಲು ಈ ಏರ್ಪಾಟು ಮಾಡಲಾಗಿತ್ತು. ಮೋದಿ ಎಂತಹ ಸಭ್ಯನೆಂಬುದನ್ನು ವಿಶ್ವಕ್ಕೆ ಸಾರಿ ಹೇಳಲು ವಾಜಪೇಯಿಯವರ ಉದ್ದೇಶವೂ ಇದರಲ್ಲಡಗಿತ್ತು. ಅದನ್ನು ಅರ್ಥಮಾಡಿಕೊಳ್ಳಲು ಸಿದ್ಧರಿಲ್ಲದ ಚಂದ್ರಬಾಬು, ಕರುಣಾನಿಧಿ, ಮಮತಾ ಮತ್ತಿತರರು ಫ್ಯಾಸಿಸ್ಟ್ ಕೂಟದ ಸರ್ವಾಧಿಕಾರಕ್ಕೆ ಮಣೆ ಹಾಕುತ್ತಿದ್ದಾರೆ. ಸ್ವತಃ ನರೇಂದ್ರ ಮೋದಿಯೊಡನೆ ಇವರೆಲ್ಲಾ ಗುಜರಾತಿನ ಸರ್ಕಾರ ಸದ್ಯದಲ್ಲೇ ಸ್ಥಾಪಿಸುತ್ತದೆಯೆನ್ನಲಾದ ಅಹಿಂಸಾ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಾರ್ಥಿಗಳಾಗಿ ಪ್ರವೇಶ ಪಡೆಯಬಹುದು. ಚರಿತ್ರೆಯ ವ್ಯಂಗ್ಯವೆಂದರೆ ಇದು : ಬಡೋರ್ಲಿ ಸತ್ಯಾಗ್ರಹವನ್ನು ಚರಿತ್ರಾರ್ಹವಾಗಿ ಮುನ್ನಡೆಸಿದ ಗಾಂಧೀಜಿ ಸ್ಥಾಪಿಸದಿದ್ದ ಅಹಿಂಸಾ ವಿಶ್ವವಿದ್ಯಾಲಯವನ್ನು ಗುಜರಾತಿನ ಮನೆ-ಮಠಗಳನ್ನು ರಕ್ತಸಿಕ್ತವಾಗಿಸಿದ ಮೋದಿ ಸರ್ಕಾರ ಸ್ಥಾಪಿಸುತ್ತದೆ ! ನಮ್ಮ ರಾಜಕೀಯ ಸ್ವಾತಂತ್ರ್ಯದ ೫೫ನೇ ವರ್ಷದಲ್ಲಿ ಇಂತಹ ಕುಹಕಗಳನ್ನು ಕಾಣುವ ಸೌಭಾಗ್ಯ ನಮ್ಮದು.

ಇಂದಿನ ಪ್ರಧಾನಿಯನ್ನು ಗೌಣವಾಗಿಸಿ, ಮುಂದಿನ ಪ್ರಧಾನಿಯೂ ಆಗುವ ಭರವಸೆಯುಳ್ಳ ಅದ್ವಾನಿ ಈಗ ದೇಶದ ಉಪಪ್ರಧಾನಿಯಾಗಿದ್ದಾರೆ. ನಮ್ಮೆಲ್ಲ ಅನಿಷ್ಟಗಳಿಗೂ ಪಾಕಿಸ್ತಾನದ ಪಾತಕಿಗಳೇ ಕಾರಣವೆಂಬ ನಿತ್ಯನೂತನ ಸಂಶೋಧನೆಯೊಂದನ್ನು ಬಿಟ್ಟು ಕಳೆದ ಒಂದು ಸಾವಿರ ದಿನಗಳಲ್ಲಿ ಅವರ ಸಾಧನೆಯೇನೆಂಬುದನ್ನು ಅತ್ಯಂತ ಗೋಪ್ಯವಾಗಿ ಇಟ್ಟಿರುವ ಗೃಹಮಂತ್ರಿ ಅದ್ವಾನಿಯವರು ಅಶೋಕ ಸಿಂಘಾಲರನ್ನು ಅಡ್ಡಡ್ಡ ನುಂಗುವ ಸಾಮರ್ಥ್ಯ ಉಳ್ಳವರು. ಹಿಂದು ಧರ್ಮವನ್ನು ಭೋಗ್ಯಕ್ಕೆ ಹಾಕಿಕೊಂಡಿರುವ ಸಿಂಘಾಲರು ಅಲ್ಪಸಂಖ್ಯಾತ ಮುಸಲ್ಮಾನರಿಗೆ ಎಚ್ಚರ ನೀಡಿದರು : ನಾವು ಹೇಳಿದಂತೆ ಕೇಳಿಕೊಂಡು ಇರದಿದ್ದರೆ ನೀವೆಲ್ಲರೂ ಶಾಶ್ವತವಾಗಿ ಕ್ಯಾಂಪುಗಳಲ್ಲೇ ಇರಬೇಕಾದೀತು, ಜೋಕೆ ! ಪೋಟಾ ಪೋಟಾ ಇತ್ಯಾದಿ ಭಯಂಕರ ಕಾನೂನು ಬತ್ತಳಿಕೆಯನ್ನುಳ್ಳ ಅದ್ವಾನಿ ತುಟಿಪಿಟಕ್ಕೆನ್ನಲಿಲ್ಲ, ಗೋಪಾಲಸ್ವಾಮಿ ಯಾಗಿದ್ದ ವೈಕೋ ಎಂಬ ಭಯೋತ್ಪಾದನಾ ಸಮರ್ಥಕನನ್ನು ದಸ್ತಗಿರಿ ಮಾಡಿದಾಗ ಮಾತ್ರ ಹೀಗೆ ಪೋಟಾ ದುರ್ಬಳಕೆ ಸಲ್ಲದೆಂಬ ನುಡಿಮುತ್ತುಗಳನ್ನು ಅದ್ವಾನಿ ಉದುರಿಸಿದರು. ವೈಕೋ ಬಗೆಗಿನ ಜಾಣ ಸಮರ್ಥನೆಯನ್ನು ಸೂಕ್ಷ್ಮವಾಗಿ ಗಮನಿಸಬೇಕು : ''ಆತ ಶ್ರೀಲಂಕಾದ ಉಗ್ರರ ಪರವಾಗಿ ಭಾಷಣಗಳನ್ನು ಮಾಡಿದ್ದಾರಾದರೂ ಸ್ವತಃ ಯಾವ ಭಯೋತ್ಪಾದನಾ ಕೃತ್ಯದಲ್ಲೂ ತೊಡಗಿಲ್ಲ; ಆದ್ದರಿಂದ ಪೋಟಾ ಅನ್ವಯ ಅವರ ಮೇಲೆ ಕ್ರಮ ಜರುಗಿಸುವುದು ಅಕ್ರಮವಾಗಿದೆ.'' ನಕ್ಸಲೀಯರ ಪರವಾಗಿ ಯಾರಾದರೂ ಪ್ರಚಾರ ಕೈಗೊಂಡರೆ ಇದೇ ಮಾತನ್ನು ಉಚ್ಚರಿಸುತ್ತಾರೋ ಅಥವಾ ಕಾರಾಗೃಹಕ್ಕೆ ಎಳೆದೊಯ್ಯುತ್ತಾರೋ ಎಂಬುದರ ಬಗ್ಗೆ ಯಾವ ಶಂಕೆಯೂ ಬೇಡ. ಅಂದರೆ, ವಾಜಪೇಯಿ ಸರ್ಕಾರವು ಸ್ವತಂತ್ರವಾಗಿ ಬಹುಮತ ಗಳಿಸಿಕೊಳ್ಳುವವರೆಗೆ ಅದಕ್ಕೆ ಯಾರು ಸಮರ್ಥನೆ ನೀಡುತ್ತಾರೋ ಅವರು ಮಹಾಮಾನ್ಯರು. ನಮ್ಮ ಸ್ವಾತಂತ್ರ್ಯದ ೫೫ನೆಯ ವರ್ಷದಲ್ಲಿ ಪ್ರಜಾಪ್ರಭುತ್ವದ ಲಕ್ಷಣವನ್ನು ಹೀಗೆ ವ್ಯಾಖ್ಯಾನಿಸಲಾಗುತ್ತಿದೆ.

೬ನೇ ಪುಟಕ್ಕೆ

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೪ ಸಂಚಿಕೆ - ೧ ಆಗಸ್ಟ್ ೨೦೦೨



*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೮೪೨೬

*ಹೊಸತು ಕಚೇರಿಯ ವಿಳಾಸ*

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

## ಸಂಪಾದಕೀಯ

# ಸ್ವಾತಂತ್ರ್ಯದ ವಿಕಾಸಕ್ಕೆ ಹಾದಿ

ನೈಸರ್ಗಿಕ ನಿಯಮಗಳನ್ನು ಮೀರಿ ಯಾರೂ ಸ್ವಾತಂತ್ರ್ಯದ ಆಶಯಗಳನ್ನು ಪೂರೈಸಿಕೊಳ್ಳಲಾರರು. ಉಸಿರಾಡದೆಯೇ ಬದುಕಿರಬೇಕೆಂದು ಎಷ್ಟು ಸಾಹಸ ಮಾಡಿದರೂ ನಾವು ಅದನ್ನು ಸಾಧಿಸಲಾರೆವು; ವಿಷವನ್ನು ಜೀರ್ಣಿಸಿಕೊಳ್ಳುವ ನೀಲಕಂಠರೂ ನಾವಾಗಲಾರೆವು. ಆದರೆ ಪ್ರಕೃತಿಯ ನಿಯಮಗಳನ್ನು ಕ್ರಮೇಣ ತಿಳಿದುಕೊಳ್ಳುತ್ತಾ, ಅವನ್ನು ಧಿಕ್ಕರಿಸುವ ಬದಲು ಅಳವಡಿಸಿಕೊಳ್ಳುವತ್ತ ಮುನ್ನಡೆದರೆ ನಮ್ಮ ಸ್ವಾತಂತ್ರ್ಯದ ಪರಿಮಾಣವನ್ನು ಹಿಗ್ಗಿಸಿಕೊಳ್ಳಬಹುದು. ಪ್ರಕೃತಿಗೇ ಬಾಧೆಯುಂಟುಮಾಡುವ ದುರುಳತನ ತೋರಿದರೆ ಅಥವಾ ಪ್ರಕೃತಿಯನ್ನು ಸೆರೆಹಿಡಿಯುವ ದರ್ಪ ಪ್ರದರ್ಶಿಸಿದರೆ ಮಾನವನ ಸ್ವಾತಂತ್ರ್ಯಕ್ಕೆ ಧಕ್ಕೆ ಅನಿವಾರ್ಯ. ಪ್ರಕೃತಿ ನಿಯಮಗಳ ಜ್ಞಾನ ಪಡೆದು ಪ್ರಜ್ಞಾಪೂರ್ವಕವಾಗಿ ಮಧ್ಯಪ್ರವೇಶ ಮಾಡಬಹುದಾದ ವ್ಯವಸ್ಥೆಯಲ್ಲಿ ಮಾತ್ರವೇ ಸ್ವಾತಂತ್ರ್ಯದ ಪರಿಮಿತಿಯ ವಿಕಾಸ ಸಾಧ್ಯ. ಆ ವ್ಯವಸ್ಥೆಯು ದೃಢಗೊಳಿಸುವ ಸ್ವಾತಂತ್ರ್ಯಕ್ಕೂ ಎಲ್ಲೆಗಳಿರುತ್ತವೆ. ಅನಕ್ಷರತೆಯನ್ನು ತೊಲಗಿಸುವ ಮಾರ್ಗ ತಿಳಿದಿದ್ದೂ ಅದಕ್ಕೆ ಬೇಕಾದ ವ್ಯವಸ್ಥೆಯನ್ನು ನಾವು ಕಲ್ಪಿಸಿಕೊಳ್ಳದಿದ್ದರೆ ಅದು ಸ್ಥಿರವಾಗಿ ನಮ್ಮ ಮಧ್ಯೆ ಉಳಿದೇ ತೀರುತ್ತದೆ. ಬೇರೆಲ್ಲದಕ್ಕೂ ಇದು ಅನ್ವಯವಾಗಬಹುದು.

ಜ್ಞಾನವೆಂಬುದು ಸಹ ಕೇವಲ ಅಮೂರ್ತವಾದ ಯಾವುದೋ ಗಹನ ತತ್ತ್ವವಲ್ಲ. ಅದು ಸದಾ ವಿಕಾಸ ಹೊಂದುವ ಗುಣವನ್ನುಳ್ಳದ್ದೇ ವಿನಾ ಯಾವ ಕಾಲಘಟ್ಟದಲ್ಲೂ ಪರಿಪೂರ್ಣವಲ್ಲ. ಆಯಾ ಕಾಲಘಟ್ಟದ ಜ್ಞಾನಭಂಡಾರದ ಪ್ರಮಾಣವನ್ನು ಲೆಕ್ಕಿಸದೆ ಸ್ವಾತಂತ್ರ್ಯದ ಲಾಲಸೆಯನ್ನು ಸಫಲಗೊಳಿಸಿಕೊಳ್ಳುವುದು ಆಗದ ಮಾತು. ಕೃಷಿಯ ಜ್ಞಾನ ಪಡೆಯುವ ಮೊದಲು ಮಾನವ ಜನಾಂಗವು ಅಲೆಮಾರಿ ಜೀವನ ನಡೆಸಬೇಕಾಗಿದ್ದುದು ಅನಿವಾರ್ಯವಾಗಿದ್ದಿತಲ್ಲ, ಹಾಗೆ. ತಾನು ಪಡೆದ ಸ್ವಾತಂತ್ರ್ಯವನ್ನು ಮಾನವನು ಚಲಾಯಿಸುವುದರಿಂದ ಮಾತ್ರವೇ ಅದು ಭದ್ರವಾಗಿ ನೆಲೆಗೊಳ್ಳುತ್ತದೆ, ವಿಕಾಸ ಹೊಂದುತ್ತದೆ. ಬದಲಾವಣೆಯ ಹರಿಕಾರನಾಗುವುದೆಂದರೆ ಮಧ್ಯಪ್ರವೇಶ ಮಾಡುವವನಾಗುವುದೆಂದೇ ಹೇಳಬೇಕು.

ಜ್ಞಾನ, ಪ್ರಜ್ಞಾಪೂರ್ವಕ ಮಧ್ಯಪ್ರವೇಶ, ಬದಲಾವಣೆ, ಸ್ವಾತಂತ್ರ್ಯದ ವಿಕಾಸ, ಇವು ಒಂದು ಸೂತ್ರದ ಕ್ರಮಾಗತ ಹಂತಗಳು. ಗುಜರಾತಿನ ಮತೀಯ ದೌರ್ಜನ್ಯಗಳಲ್ಲಿ ಮಡಿಯುವುದಾಗಲಿ, ಝಾರ್ಖಂಡ್‌ನ ಕ್ಷಾಮದಲ್ಲಿ ಅಸು ನೀಗುವುದಾಗಲಿ ಮಾನವನ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಅಂಶಗಳಿಗೆ ನಿದರ್ಶನಗಳಾಗುತ್ತವೆ. ಅಲ್ಲಿನ ಸಮಕಾಲೀನ ಸನ್ನಿವೇಶದಲ್ಲಿ ಕೆಲವರು ಸಾಯುವ ಸ್ವಾತಂತ್ರ್ಯವನ್ನು ಅನುಭವಿಸುವುದು ಹೇಯವೆನಿಸಿದರೂ ವಾಸ್ತವಿಕವಾಗಿ ಅದು ಜರುಗಿಹೋಗಿದೆ. ನಾವು ರಚಿಸಿಕೊಂಡಿರುವ ವ್ಯವಸ್ಥೆ ಅಂಥದು, ನಿರ್ಮಿಸಿಕೊಂಡಿರುವ ವಾತಾವರಣ ಅಂಥದು, ಮತ್ತು ಮಧ್ಯಪ್ರವೇಶದ ಸೀಮಿತತೆ ಅಂಥದು. ಇದಕ್ಕೆ ಪರ್ಯಾಯವಾದ ಸನ್ನಿವೇಶಕ್ಕೆ ಹಾತೊರೆಯುವವರು ಕೈಕಟ್ಟಿ ಕೂತು ನಿಟ್ಟುಸಿರಿಟ್ಟರೆ ಪರಿಸ್ಥಿತಿ ಬದಲಾಯಿಸುವುದಿಲ್ಲ; ಅದಕ್ಕೆ ಸಾಮೂಹಿಕ ಮಧ್ಯಪ್ರವೇಶವೊಂದೇ ಮದ್ದು, ಅಸಹಾಯಕತೆ-ನಿಷ್ಕ್ರಿಯತೆ-ಸಿನಿಕತನಗಳಲ್ಲ.

ನಮ್ಮ ದೇಶವು ರಾಜಕೀಯ ಸ್ವಾತಂತ್ರ್ಯ ಗಳಿಸಿದ ಮೊದಲ ಎರಡು ದಶಕಗಳಲ್ಲಿ ಯಾವ ಮಹತ್ತರ ಸಾಧನೆಗಳೂ ಆಗಲಿಲ್ಲವೆಂದು ಮೂಗುಮುರಿಯುವ ಮಂದಿ ನಮ್ಮಲ್ಲಿದ್ದಾರೆ. ಹೊಸ ಉದ್ದಿಮೆಗಳನ್ನು ಸ್ಥಾಪಿಸಿ ಉತ್ಪಾದನಾ ಶಕ್ತಿಯನ್ನೂ ವ್ಯಾಪಕತೆಯನ್ನೂ ಅಂದು ಸಾಧಿಸಿಲ್ಲದಿದ್ದರೆ ದೇಶದ ಜನರ ಸ್ವಾತಂತ್ರ್ಯವು ಯಾವ ಮಟ್ಟದಲ್ಲಿರುತ್ತಿತ್ತೆಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದು ಆರೋಗ್ಯಕರ. ಮುಂದಿನ ಎರಡು ದಶಕಗಳಲ್ಲಿ ಹೇಳಿಕೊಳ್ಳಬಹುದಾದ ಉತ್ಪಾದನಾ ಘಟಕಗಳು ಹೆಚ್ಚದಿದ್ದರೂ ಇದ್ದವುಗಳನ್ನು ವಿನಾಶದ ಅಂಚಿಗೆ ಕೊಂಡೊಯ್ಯಲಿಲ್ಲವೆಂಬುದು ಗಮನಾರ್ಹ. ದಾಸ್ತಾನು ಮಳಿಗೆಗಳಲ್ಲಿದ್ದ ಆಹಾರವು ಎಲ್ಲ ಹಸಿದ ಹೊಟ್ಟೆಗಳಿಗೂ ಮುಟ್ಟಲಿಲ್ಲ, ನಿಜ; ಆದರೆ ಕೃಷಿಯೋಗ್ಯವಾದ ಭೂಮಿಯನ್ನು ಬರಡಾಗಿಸುವ ಉಪದ್ರವ ನಮ್ಮನ್ನಿನ್ನೂ ತಟ್ಟಿರಲಿಲ್ಲ. ಇದಕ್ಕೆ ಭಿನ್ನವಾದ ಪ್ರಕ್ರಿಯೆ ಆರಂಭವಾಗಿದ್ದು ೧೯೯೦ರ ದಶಕದಲ್ಲಿ. ನಮ್ಮ ದೇಶದ ಸಾರ್ವಭೌಮತ್ವವು ಕ್ರಮಿಸಿರುವ ಹಾದಿಗೂ ನಮ್ಮ ಆರ್ಥಿಕ ವಿಕಾಸ ಇಲ್ಲವೆ ಮುಗ್ಗರಿಸುವಿಕೆಯು ಕ್ರಮಿಸಿರುವ ಹಾದಿಗೂ ನೇರವಾದ ಸಂಬಂಧವಿದೆ. ದೆಹಲಿಯ ಕೆಂಪುಕೋಟೆಯಿಂದ ದೇಶದ ಜನರನ್ನುದ್ದೇಶಿಸಿ ಮಾತನಾಡಿ ಸಂದೇಶಗಳನ್ನು ನೀಡುವ ಯಾವ ಪ್ರಧಾನಿಯೂ ಈ ಹೂರಣವನ್ನು ಸ್ಪಷ್ಟವಾಗಿ ತೆರೆದಿಡುವುದಿಲ್ಲ. ಆದರೆ ಅದನ್ನು ತಿಳಿಯದೆ ನಮ್ಮ ಸ್ವಾತಂತ್ರ್ಯದ ವಿಕಾಸವೂ ಸಾಧ್ಯವಿಲ್ಲ. ಸಾವಿರಾರು ಉದ್ದಿಮೆಗಳನ್ನು ಮುಚ್ಚಿ ಕೆಲಸಗಾರರನ್ನು ಬೀದಿಗೆ ನೂಕುವ ''ಸಾಧನೆ'' ಗಳಿಸಿದ್ದು ಜಾಗತೀಕರಣ-ಉದಾರೀಕರಣ-ಖಾಸಗೀಕರಣದ ತಿಮಿಂಗಿಲದ ಛಾಯೆಯಲ್ಲಿ. ಇದು ಪರಿಶುದ್ಧವಾದ ತ್ರಿವೇಣೀ ಸಂಗಮ, ಇದೇ ನಮ್ಮ ಮೋಕ್ಷಕ್ಕೆ ದಾರಿ ಎಂಬ ಭ್ರಮೆಯ ಸ್ಥಾನದಲ್ಲಿ ವಸ್ತುನಿಷ್ಠ ತಿಳಿವಳಿಕೆಯ ಅಗತ್ಯ ಇಂದು ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಸಾರ್ವಜನಿಕ ಸ್ವತ್ತನ್ನು ಬೇಕಾಬಿಟ್ಟಿಯಾಗಿ ಖಾಸಗಿಯವರಿಗೆ ಹಸ್ತಾಂತರಿಸುವುದರಲ್ಲಿ ವಾಜಪೇಯಿ ಸರ್ಕಾರ ದಾಖಲೆಯನ್ನು ಸ್ಥಾಪಿಸಿದೆ. ''ಸಿಕ್ಕಿದವರಿಗೆ ಸೀರುಂಡೆ'' ಎಂಬಂತೆ ವಾಜಪೇಯಿ ಪಕ್ಷದ ವಲಯದವರು ನಮ್ಮ ಉದ್ಯಮಗಳನ್ನು ಬಾಚಿಕೊಳ್ಳುತ್ತಿದ್ದಾರೆ, ಹೊಟೇಲ್‌ಗಳನ್ನು ನುಂಗುತ್ತಿದ್ದಾರೆ, ಬ್ಯಾಂಕುಗಳನ್ನು ಖಾಲಿ ಮಾಡುತ್ತಿದ್ದಾರೆ. ಎಲ್ಲ ಕ್ಷೇತ್ರಗಳಲ್ಲೂ ಹಾಹಾಕಾರ ಉಂಟಾಗಲು ಇನ್ನು ಬಹಳ ದಿನ ಬೇಕಿಲ್ಲ. ಕಾರ್ಮಿಕರಿಗೆ ಸಂಬಂಧಿಸಿದ ಕಾನೂನನ್ನು ತಿದ್ದಿ ಅವರನ್ನು ಬೀದಿಗೆ ತಳ್ಳಲು ಮಾಲಿಕರಿಗೆ ಸರ್ವಾಧಿಕಾರ ನೀಡಲಾಗುತ್ತಿದೆ. ಅದೂ ಕಾರ್ಮಿಕರ ಹಿತಕ್ಕಾಗಿಯೇ ಎಂದು ಪ್ರಧಾನಿ ಅಪಲಪಿಸಿದ್ದಾರೆ.

ಕ್ಯಾಸ್ಟ್ರೋ, ಸದ್ದಾಂ, ಮುಂತಾದವರನ್ನು ಅಧಿಕಾರದಿಂದ ಕೆಳಗಿಳಿಸುವುದು ತನ್ನ ಹಕ್ಕೆಂದು ವಾದಿಸುವ ಅಮೆರಿಕಾದ ಭಂಟನಾಗಿ ಭಾರತ ಸೊರಗಿಹೋಗುತ್ತಿದೆ. ಭಾರತದಲ್ಲಿ ಮಳೆ ಬರದಿದ್ದರೆ ಅದಕ್ಕೂ ಮುಷಾರಫ್ ಕಾರಣನಿರಬೇಕೆಂದೂ, ಅದಕ್ಕಾಗಿ ಅಮೆರಿಕಾ ಆತನನ್ನು ನಿಗ್ರಹಿಸಬೇಕೆಂದೂ ಅಂಗಲಾಚುವ ದಿನಗಳು ಬಂದರೆ ಆಶ್ಚರ್ಯವಿಲ್ಲ. ಅಮೆರಿಕಾ ರಚಿಸುವ ಷಡ್ಯಂತ್ರಗಳಲ್ಲಿ ಭಾಗಿಯಾಗಲು ಮುನ್ನುಗ್ಗಿದರೆ ಭಾರತದ ಭವಿಷ್ಯ ನೆಟ್ಟಗಿರುವುದಿಲ್ಲ. ನಮ್ಮ ಸಂದರ್ಭದಲ್ಲಿ ಇದನ್ನು ಒಪ್ಪಿಕೊಳ್ಳಲು ಇನ್ನೂ ಮಾನಸಿಕ ಸಿದ್ಧತೆ ಇಲ್ಲದಿರುವವರು ಅಮೆರಿಕಾದ ಸನಿಹದಲ್ಲೇ ಇರುವ ವೆನಿಝೂಲಾದತ್ತ ಕಣ್ಣು ಹಾಯಿಸುವುದೊಳ್ಳೆಯದು. ಅಲ್ಲಿ ಅಮೆರಿಕಾ ಹೇಗೆ ಮೂಗು ತೂರಿಸುತ್ತಿದೆಯೆಂದು ತಿಳಿದರಾದರೂ ನಾವು ಎಚ್ಚರ ವಹಿಸುತ್ತೇವೇನೋ ಎಂಬ ಆಶಯ ನಮ್ಮದು.

ಅಲ್ಲಿಯ ಆರ್ಥಿಕ ವ್ಯವಸ್ಥೆಯನ್ನು ಕುಲಗೆಡಿಸಲು ಅಮೆರಿಕಾ ಹೂಡದ ತಂತ್ರವಿಲ್ಲ. ಕಾರ್ಮಿಕ ಸಂಘಟನೆಗಳನ್ನು ಸಹ

ಪ್ರತಿಗಾಮಿಗಳ ಹಿಡಿತಕ್ಕೆ ತರುವ ಹುನ್ನಾರ ಇನ್ನೂ ಪೂರ್ತಿ ಸಫಲವಾಗಿಲ್ಲ; ಆದರೆ ಪ್ರಯತ್ನಗಳು ನಿಂತಿಲ್ಲ. ಮಾಧ್ಯಮಗಳನ್ನು ತನ್ನ ಹತೋಟಿಗೆ ತೆಗೆದುಕೊಂಡು ಅಧ್ಯಕ್ಷ ಶವೆಯವರನ್ನು ಬಲವಂತವಾಗಿ ಹೊರದೂಡಬೇಕೆಂಬ ಕೂಗನ್ನು ಎಬ್ಬಿಸಲಾಗುತ್ತಿದೆ. (ಕೇಂದ್ರ ಸರ್ಕಾರದ ಈಚಿನ ಒಂದು ತೀರ್ಮಾನದಂತೆ ಭಾರತದ ಪತ್ರಿಕೆಗಳನ್ನು ಇನ್ನು ಮುಂದೆ ವಿದೇಶಿಯರು ನಡೆಸಬಹುದೆಂಬ ಸಂದರ್ಭವಿದೆ. ಅವರು ಹೇಳಿದಂತೆ ಕುಣಿಯುವುದು ವಾಜಪೇಯಿ ಸರ್ಕಾರದ ಸಂಸ್ಕೃತಿ!). ಈ ಮಾಧ್ಯಮಗಳನ್ನು ಟೀಕಿಸಿದವರನ್ನು ವಾಕ್ ಸ್ವಾತಂತ್ರ್ಯದ ಶತ್ರುಗಳೆಂದು ಹೀಯಾಳಿಸಲಾಗುತ್ತದೆ. ಅಧ್ಯಕ್ಷರನ್ನು ಹೊರತಳ್ಳಲು ಸೈನ್ಯವು ಮುಂದಾಗಬೇಕೆಂಬ ಸಲಹೆಯನ್ನು ಸ್ವತಃ ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿಯೇ ನೀಡಿರುವುದು ದಾಖಲಾಗಿದೆ. ಕಾಲಿನ್ ಪವೆಲ್ ಪ್ರಕಾರ ಶವೆ ಒಬ್ಬ ಸರ್ವಾಧಿಕಾರಿ! ಆತನನ್ನು ಬೆಂಬಲಿಸಿ ಬೀದಿಗಿಳಿಯುವ ನಾಗರಿಕರು ಪವೆಲ್ ದೃಷ್ಟಿಯಲ್ಲಿ ಮೂರ್ಖಜನ. ಆತನನ್ನು ಯಾರೇ ಕೆಳಗಿಳಿಸಿದರೂ ಅವರಿಗೆ ತಮ್ಮ ಬೆಂಬಲವಿದೆಯೆಂದು ಪವೆಲ್ ಘೋಷಿಸಿರುವುದು ವಾಜಪೇಯಿಯವರಿಗೆ ತಿಳಿಯದಿಲ್ಲ.

ವೆನಿಝೂಲಾದ ಬಗ್ಗೆ ಅಮೆರಿಕಾ ವಿಷ ಕಾರುವುದೇಕೆ ? ಹಿಂದಿನ ನಾಯಕರಂತೆ ಅಧ್ಯಕ್ಷ ಶವೆ ತನ್ನ ದೇಶದ ಸಂಪತ್ತನ್ನು ಅಮೆರಿಕೆಗೆ ಬಳುವಳಿಯಾಗಿ ನೀಡಲು ಸಿದ್ಧನಿಲ್ಲದಿರುವುದು! ಅಮೆರಿಕಾ ವಿದೇಶಾಂಗ ಕಾರ್ಯಾಲಯದ ಕೆಲವು ಅಧಿಕಾರಿಗಳು ಶವೆ ಅವರನ್ನು ಭೇಟಿಯಾಗಿ ಹೇಳಿದರು: ಅಧ್ಯಕ್ಷ ಬುಶ್ ಜೊತೆ ವಿರೋಧ ಕಟ್ಟಿಕೊಂಡರೆ ನಿನ್ನ ಸ್ಥಿತಿ ನೆಟ್ಟಗಿರುವುದಿಲ್ಲ, ಎಂದು. ಶವೆ ಎಸಗಿದ ಅಂತಹ ಅಪರಾಧ ಯಾವುದು ? (ಅ) ಅಮೆರಿಕಾದ ಹಸ್ತಕ್ಷೇಪಕ್ಕೆ ಅಡ್ಡಿ ಉಂಟುಮಾಡಿದ್ದು ; (ಆ) ಅಧ್ಯಕ್ಷ ಕ್ಯಾಸ್ಟ್ರೋ ಜೊತೆ ಸ್ನೇಹ ಬೆಳೆಸಿದ್ದು; (ಇ) ನೆರೆಯ ಕೊಲಂಬಿಯಾದಲ್ಲಿ ಅಮೆರಿಕಾ ಕುತಂತ್ರವನ್ನು ವಿರೋಧಿಸಿದ್ದು ; ಮತ್ತು (ಈ) ರಾಷ್ಟ್ರೀಯ ಸಂಪತ್ತನ್ನು ದೇಶದ ಜನಸಾಮಾನ್ಯರಿಗೆ ತಲುಪಿಸುವ ಯೋಜನೆ ಹಾಕಿಕೊಂಡದ್ದು.

ಅಮೆರಿಕಾದೊಡನೆ ರಾಜತಾಂತ್ರಿಕ ಸಂಬಂಧಗಳನ್ನಿರಿಸಿಕೊಳ್ಳುವಾಗ ಕೈಂಕರ್ಯ ಬುದ್ಧಿ ತೋರಿಸುವ ರಾಷ್ಟ್ರಗಳು ಯಾವಾಗಲೂ ಅಮೆರಿಕಾಕ್ಕೆ ಪ್ರಿಯರು; ಸ್ವಂತಿಕೆಯನ್ನು ಬೆಳೆಸಿಕೊಳ್ಳಲು ಮುಂದಾದರೆ ಆ ರಾಷ್ಟ್ರಗಳು ಅಮೆರಿಕಾದ ಕಣ್ಣನ್ನು ಕೆಂಪಾಗಿಸುತ್ತವೆ. ನಮ್ಮ ನೆರೆರಾಷ್ಟ್ರದಿಂದ ಉಪಟಳವನ್ನೆದುರಿಸಲು ಶಕ್ತಿಹೀನರಾಗಿ ಅಮೆರಿಕಾದಿಂದ ರಕ್ಷಣೆ ಯಾಚಿಸುವ ದಯನೀಯ ಸ್ಥಿತಿಗೆ ಭಾರತವನ್ನು ತಂದಿದ್ದು ವಾಜಪೇಯಿ ಸರ್ಕಾರದ ಅಕ್ಷಮ್ಯ ಅಪರಾಧ. ಜನಪರವಾದ ಯಾವ ಆರ್ಥಿಕ ನೀತಿಯನ್ನೂ ಅಳವಡಿಸಲು ಬಿಡದಿರುವುದು ಅಮೆರಿಕಾದ ಸಂಪ್ರದಾಯ. ಔಪಚಾರಿಕ ರಾಜತಾಂತ್ರಿಕ ಸಂಬಂಧಗಳನ್ನಿರಿಸಿಕೊಳ್ಳುವುದಕ್ಕೂ, ಅಮೆರಿಕಾದ ಹಂಗಿನಲ್ಲಿ ಬಾಳುವಂತೆ ವಿದೇಶಾಂಗ ನೀತಿ ರೂಪಿಸುವುದಕ್ಕೂ ವ್ಯತ್ಯಾಸವಿದೆ. ಒಂದು ಸಮಾನತೆಯ ಆಧಾರ ಉಳ್ಳದ್ದು, ಇನ್ನೊಂದು ಸಾರ್ವಭೌಮತ್ವವನ್ನು ಒತ್ತೆ ಇಡುವಂಥದು. ನಮ್ಮ ರಾಜಕೀಯ ಸ್ವಾತಂತ್ರ್ಯದ ೫೫ನೇ ವರ್ಷದಲ್ಲಿ ಇದನ್ನು ಭಾರತದ ನಾಗರಿಕರು ಮನನ ಮಾಡಿಕೊಳ್ಳಬೇಕಾದ ಅಗತ್ಯವಿದೆ. ಅದರಿಂದ ಮೂಡುವ ಪ್ರಜ್ಞೆಯನ್ನು ಸಾಧನವನ್ನಾಗಿ ಮಾಡಿಕೊಂಡು ಮಧ್ಯಪ್ರವೇಶ ಮಾಡುವುದರಿಂದ ನಮ್ಮ ಸ್ವಾತಂತ್ರ್ಯದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲು ಸಾಧ್ಯವಿದೆ. ಅದೇ ಇಂದಿನ ನಮ್ಮ ಕರ್ತವ್ಯ.

**- ಜಿ. ರಾಮಕೃಷ್ಣ**

## ಮಿಶ್ರವಲ್ಲದ ಮಿಶ್ರತಳಿ

**ಅ**ಮೆರಿಕಾದ ಶಾಲೆಯೊಂದರಲ್ಲಿ ಇತಿಹಾಸದ ಉಪಾಧ್ಯಾಯ ಆ ದೇಶದ ಕೆಲವು ಅಧ್ಯಕ್ಷರ ಕೊಡುಗೆಗಳನ್ನು ವಿವರಿಸುತ್ತಿದ್ದ : ಫ್ರಾಂಕ್ಲಿನ್ ರೂಸ್‌ವೆಲ್ಟ್‌ನ ಅಧ್ಯಕ್ಷಗಿರಿಯು ಏನು ತೋರಿಸುತ್ತದೆ ? ''ನಮ್ಮ ದೇಶದಲ್ಲಿ ಒಬ್ಬ ವ್ಯಕ್ತಿ ಜೀವನಪರ್ಯಂತ ಅಧ್ಯಕ್ಷನಾಗಿರ ಬಹುದೆಂಬುದನ್ನು ತೋರಿಸುತ್ತದೆ.'' ಐಸೆನ್‌ಹೋವರ್ ಅಧ್ಯಕ್ಷಗಿರಿ? ''ನಮ್ಮ ದೇಶಕ್ಕೆ ಅಧ್ಯಕ್ಷನೇ ಬೇಕಿಲ್ಲವೆಂದು ತೋರಿಸುತ್ತದೆ.'' ಜಾನ್ ಎಫ್. ಕೆನಡಿ ಅಧ್ಯಕ್ಷಗಿರಿ? ''ನಮ್ಮ ದೇಶಕ್ಕೆ ಅಧ್ಯಕ್ಷನೊಬ್ಬನಿರುವುದು ಅಪಾಯಕರ ಎಂಬುದನ್ನು ತೋರಿಸುತ್ತದೆ.''

ಸದ್ಯದ ನಮ್ಮ ಕೇಂದ್ರ ಸಂಮಿಶ್ರ ಸರ್ಕಾರ ಮೂರನೆಯ ತೆರನಾದ್ದು. ಅಪಾಯಗಳ ಸರಮಾಲೆಯನ್ನು ಭಾರತಮಾತೆಗೆ ತೊಡಿಸಿರುವ ಈಗಿನ ಸರ್ಕಾರ ಕಟ್ಟುನಿಟ್ಟಾಗಿ ರಾಷ್ಟ್ರೀಯತೆಯ ಲಾಂಛನವನ್ನು ಪ್ರದರ್ಶಿಸುತ್ತದೆ ! ಅದರ ರಾಷ್ಟ್ರೀಯತೆಯೇ ಇಷ್ಟು ಅಪಾಯಕಾರಿಯಾಗಿರುವಾಗ ಇನ್ನು ಅದೇನಾದರೂ ಅ-ರಾಷ್ಟ್ರೀಯತೆಯ ಶಿಶುವಾಗಿದ್ದಿದ್ದರೆ ಇನ್ನೆಷ್ಟು ಅನಾಹುತವಾಗಿರಬಹುದಿತ್ತು !

ನಮ್ಮದು ಸಂಮಿಶ್ರ ಸರ್ಕಾರ. ಅದಕ್ಕೊಂದು ನಿರ್ದಿಷ್ಟ ಕಾರ್ಯಸೂಚಿ ಇದೆಯೆಂದು ಕೆಲವೊಮ್ಮೆ ತಮಾಷೆಯ ಮಾತು ಕೇಳಿಬರುತ್ತದೆ. ಮಿಶ್ರಣದ ಸೋಂಕೇ ಇಲ್ಲದ ಮಿಶ್ರತಳಿ ಸರ್ಕಾರ ನಮ್ಮದು. ''ಬೆರಕೆ ಸೊಪ್ಪಿನ ಹುಳಿ ಚೆಂದ'' ಎಂಬ ನುಡಿ ನಮ್ಮಲ್ಲಿ ಪ್ರಚಲಿತವಿದೆ. ಆದರೆ ನಮ್ಮ ಸರ್ಕಾರದಲ್ಲಿ ಸೊಪ್ಪೇ ಇಲ್ಲ, ಇನ್ನು ಬೆರಕೆ ಎಲ್ಲಿಯದು? ಎದ್ದು ಹೋಗುವ ಮಾತು ಬಿದ್ದು ಹೋಗಲಿ ಎಂಬ ನ್ಯಾಯದಂತೆ ಏಕೋ ಏನೋ ಅದಕ್ಕೆ ಮಿಶ್ರಣದ ಲಕ್ಷಣವನ್ನು ಆರೋಪಿಸಲಾಗಿದೆ. ಇಪ್ಪತ್ತು ಚಿಲ್ಲರೆ ಪಕ್ಷಗಳು ಅದರಲ್ಲಿ ಬೆರೆತಿವೆ ಎನ್ನುತ್ತಾರೆ. ಅವಕ್ಕೇನಾದರೂ ಸ್ವ-ಲಕ್ಷಣ ಇದೆಯೇ ಎಂದು ಪಂಜು ಹಿಡಿದು ಹುಡುಕಿದರೆ ನಿರಾಸೆ ಕಾದಿರುತ್ತದೆ. ಸ್ವ-ಲಕ್ಷಣವೂ ಇಲ್ಲ, ಸಲ್ಲಕ್ಷಣವೂ ಇಲ್ಲ; ಎಲ್ಲಾ ಅವಲಕ್ಷಣವೇ !

ಇತ್ತೀಚೆಗೆ ಖ್ಯಾತ ಛಾಯಾಚಿತ್ರಕಾರನೊಬ್ಬ ಎಲ್ಲ ಚಿಲ್ಲರೆ ಪಕ್ಷಗಳ ನಾಯಕರ ಚಿತ್ರಗಳನ್ನೂ ದೆಹಲಿಯ ಲೋಕಸಭಾ ಭವನದೆದುರು ತೂಗಿಹಾಕಿದನಂತೆ. ಅವೆಲ್ಲಾ ವಾಜಪೇಯಿ ಚಚ್ಚೌಕ ಮುಖದ ಪ್ರತಿರೂಪಗಳೇ ಆಗಿದ್ದುವೆಂದು ವರದಿ. ಚಂದ್ರಬಾಬು, ಜಾರ್ಜ್, ಮಮತಾ, ಕರುಣಾನಿಧಿ, ಬಿಜೂ ಮರಿಪಟ್ನಾಯಕ್, ವೈಗೋ, ಮುಂತಾದವರನ್ನು ಬಿಡಿ; ದೊಡ್ಡಮ್ಮ ಜಯಲಲಿತಮ್ಮನ ಗುಂಡುಮುಖಕ್ಕೂ ಚಚ್ಚೌಕದ ಕೊಳೆ ತುಂಬಿದ್ದಿತಂತೆ. ಎಲ್ಲಾ ಅದ್ವಾನಿ ಮಂತ್ರಪೌರುಷದ ಫಲ ಎಂದು ಯಾರೋ ಉದ್ಗರಿಸಿದರಂತೆ. ಬಾಳ ಠಾಕ್ರೆ, ಇದಕ್ಕೆ ಮುನಿಸಿಕೊಂಡು ತನ್ನ ಮೇಲೆ ಯಾರ ಪೌರುಷದ ಪ್ರಭಾವವೂ ಇರಲು ಸಾಧ್ಯವಿಲ್ಲವೆಂದು ರುದ್ರಾಕ್ಷಿ ಹಾಗೂ ಪೈಪ್ ಮೇಲೆ ಪ್ರಮಾಣ ಮಾಡಿ ಅಬ್ಬರಿಸಿದ್ದು ಪ್ರಮೋದ ಮಹಾರಾಜನಿಗೆ ಒಂದರೆಕ್ಷಣ ಜಂಘಾಬಲ ಉಡುಗಿಹೋಗುವಂತೆ ಮಾಡಿತ್ತೆನ್ನುತ್ತಾರೆ.

ಒಂದೆರಡು ನಿದರ್ಶನಗಳನ್ನು ಪಾರ್ಲಿಮೆಂಟ್ ಭವನದ ಹಜಾರದಲ್ಲಿರುವ ಗಾರೆಕಂಬಗಳು ಕೂಡ ನೀಡಲು ಸಮರ್ಥವಾಗಿವೆ, ಇನ್ನು ದೆಹಲಿಯ ಪ್ರಜ್ಞಾವಂತ ಪಂಡಿತರ ಮಾತೇನು ! ಅಖಂಡ ಭಾರತದಲ್ಲಿ ರಾಜ್ಮಾ ಮತ್ತು ಉಪ್ಮಾ ಎರಡನ್ನೂ ತಿನ್ನುವವರಿದ್ದರೂ ಅವರೆಲ್ಲಾ ಒಂದೇ ಎಂದು ಪ್ರೌಢಶಾಲಾ ಬಾಲಕಿಯಂತೆ ಚರ್ಚಾಸ್ಪರ್ಧೆಯಲ್ಲಿ ಮಾತನಾಡುವ

*ಎನೇ ಪುಟಕ್ಕೆ*

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೬೩೭

## ಪತ್ರಗಳು

ಜುಲೈ ೨೦೦೨ರ ಸಂಚಿಕೆ ಈ ಬಾರಿ ತಾ|| ೨೯.೦೬.೦೨ರಂದೇ ನನಗೆ ತಲುಪಿದೆ. ಶ್ರೀ ಅಬ್ದುಲ್ ಕಲಾಂ ಹಾಗೂ ಡಾ|| ಲಕ್ಷ್ಮೀ ಸೆಹಗಲ್ ರವರ ಛಾಯಾ ಚಿತ್ರಗಳನ್ನು ಒಳಗೊಂಡ ಮುಖಪುಟ ಆಕರ್ಷಕವಾಗಿತ್ತು.

ಬೆಂಗಳೂರಿನ ತಿಲಕ್ ನಗರದಲ್ಲಿ ಜರುಗಿದ ಮತೀಯ ಗಲಭೆ ಹಾಗೂ ಇದರ ಪರಿಣಾಮವಾಗಿ ಹದಗೆಟ್ಟ ಕೋಮುಸೌಹಾರ್ದದ ಬಗ್ಗೆ 'ಈ ತಿಂಗಳು' ಶೀರ್ಷಿಕೆಯಲ್ಲಿ ಪ್ರಕಟವಾದ ಲೇಖನ ಎಲ್ಲಾ ದುಷ್ಟಶಕ್ತಿಗಳ ಕಣ್ಣು ತೆರೆಯಿಸುವಂತಾಗಲಿ ಎಂದು ಹಾರೈಸುತ್ತೇನೆ. ಜೂನ್ ಹಾಗೂ ಜುಲೈ ಸಂಚಿಕೆಗಳಲ್ಲಿ ಪ್ರಕಟವಾದ ಡಾ|| ರಂಗಾರೆಡ್ಡಿ ಕೋಡಿರಾಂಪುರ ಅವರ ಸಣ್ಣ ಕವಿತೆಗಳು ಮಾರ್ಮಿಕವಾಗಿತ್ತು. ಇತರ ಎಲ್ಲಾ ಲೇಖನಗಳು ಸಹ ಓದಿಸಿಕೊಂಡು ಹೋಗುವಷ್ಟು ಉತ್ತಮವಾಗಿದ್ದವು.

*ಶಿವಮೊಗ್ಗ* — ***ಎನ್. ಶೇಷಗಿರಿರಾವ್***

ರಾಷ್ಟ್ರಪತಿ ಹುದ್ದೆ ಪರಮ ವಿಶಿಷ್ಟ ಸೇವಾ ಪದಕವಲ್ಲವೆಂಬ ಕಟುಸತ್ಯವನ್ನು ನವಿರಾಗಿ ವಿಶ್ಲೇಷಿಸಿರುವ ಸಂಪಾದಕೀಯ ಮೊನಚಾಗಿ, ಸೊಗಸಾಗಿ ಮೂಡಿಬಂದಿದೆ. ಶ್ರೀ ಅಬ್ದುಲ್ ಕಲಾಂ ಅವರು ಮೂಲಭೂತವಾಗಿ ವಿಜ್ಞಾನಿಯೋ, ತಂತ್ರಜ್ಞರೋ ಎನ್ನುವ ವಾದಕ್ಕೆ ಹೆಚ್ಚು ಒತ್ತು ಕೊಡದೆ, ಅತಿ ಹೆಚ್ಚೆಂದರೆ ಅವರು ವೈಜ್ಞಾನಿಕ ಸಲಹೆಗಾರರ ಪದವಿಗೆ ಸೂಕ್ತವೆಂಬ ಜಾಗತಿಕ ಸತ್ಯವನ್ನು ಹೊರ ಹಾಕುವಲ್ಲಿ ಯಶಸ್ವಿಯಾಗಿರುವುದು ಪ್ರಶಂಸನೀಯ. ಬೆಳೆಯುತ್ತಿರುವ ರಾಜಕೀಯ ಅಸ್ಥಿರತೆಯ ಸಂದರ್ಭಗಳಲ್ಲಿ ರಾಷ್ಟ್ರ ಹಿತವನ್ನು ಪರಿಗಣಿಸಿ ಕೈಗೊಳ್ಳುವ ನಿರ್ಧಾರ ಹಾಗೂ ಪ್ರಯೋಗಶಾಲೆಯ ವೈಜ್ಞಾನಿಕ ಶಿಸ್ತಿನಲ್ಲಿ ತಂತ್ರಜ್ಞಾನ ರೂಢಿಸಿಕೊಳ್ಳುವ ಹೋಲಿಕೆಗಳ ನಿಮ್ಮ ಸಂಪಾದಕೀಯದ ಧೋರಣೆ ವಾಸ್ತವತೆಯ ಪ್ರತೀಕವಾಗಿದೆ ಎಂಬುದು ನಿಸ್ಸಂದೇಹ.

ಡಾ|| ಎಸ್. ಗೋಪಾಲ್‌ರವರನ್ನು ಪರಿಚಯಿಸಿದ ಲೇಖನ ಪ್ರಭಾವಶಾಲಿಯಾಗಿತ್ತು. ತಮ್ಮ ತಂದೆಯವರ ಬಗ್ಗೆ ಬರೆದಾಗಲೂ, ಮಗನಾಗಿ ಅವರನ್ನು ಬಿಂಬಿಸದೆ, ಒಬ್ಬ ಇತಿಹಾಸಕಾರನಾಗಿ ಪರಿಚಯಿಸಿರುವ ಅವರ ಕಾರ್ಯ ಸ್ತುತ್ಯರ್ಹ. ಇತಿಹಾಸ ಆಯಾ ಸಮಯ ಮತ್ತು ಸ್ಥಿತಿ-ಗತಿಗೆ ಅನ್ವಯಿಸುವುದೆಂಬ ಅವರ ನಿಲುವು ನೈಜ ಮತ್ತು ಪ್ರಸ್ತುತ.

ಆಕರ್ಷಕ ರಕ್ಷಾಪುಟ ವಿನ್ಯಾಸ, ದೋಷರಹಿತ ಸ್ಫುಟ ಮುದ್ರಣ, ಎಲ್ಲಾ ರಂಗಗಳಿಗೂ ಸಂಬಂಧಪಟ್ಟ ಲೇಖನಗಳನ್ನೊಳಗೊಂಡು ದಿನೇದಿನೇ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿರುವ 'ಹೊಸತು'ವಿನ ಆಗಮನ ನಿರೀಕ್ಷೆಯೇ ಒಂದು ರೀತಿಯ ಮುದ.

*ಬೆಂಗಳೂರು* — ***ಎಸ್. ಎಲ್. ರಾಮಮೂರ್ತಿ***

ಮಲೆನಾಡಿನ ಸಹೃದಯ ಓದುಗರ ಮನಮನೆಗಳಲ್ಲಿ 'ಹೊಸತು' ಪತ್ರಿಕೆ ತನ್ನ 'ನೆಮ್ಮದಿಯ ನಾಳೆ ನಮ್ಮದು' ಎಂಬುದನ್ನು ದೃಢಪಡಿಸಿದೆ. ಲೇಖನಗಳು ವಿಚಾರಪೂರ್ಣ ವಾಗಿವೆ. ನಮ್ಮ ನಾಡು ಹೆಮ್ಮೆಪಡುವ ಪ್ರತಿಭಾನ್ವಿತ ವ್ಯಕ್ತಿಗಳಿಬ್ಬರು ರಾಷ್ಟ್ರಪತಿ ಸ್ಥಾನಕ್ಕೆ ಸ್ಪರ್ಧಿಸಿದುದರ ಬಗ್ಗೆ ಅವರೆಷ್ಟು ಅರ್ಹರು ಎಂಬುದರ ಸಂಪಾದಕೀಯ ಪ್ರಸ್ತುತ ವಿದ್ಯಮಾನದ ಚಿಂತನಾರ್ಹ ಬರಹ. ಉದಯೋನ್ಮುಖ ಯುವ ಬರಹಗಾರರಿಗೆ ಇನ್ನಷ್ಟು ಅವಕಾಶ ಸಿಗುವಂತಾಗಲಿ ಮುಂದಿನ 'ಹೊಸತು'ಗಳಲಿ.

*ತೀರ್ಥಹಳ್ಳಿ* — ***ರಾಂಚಂದ್ರ, ಕೊಪ್ಪಲು***

ಅದೇನು ಕಾರಣವೋ ಇತ್ತೀಚೆಗೆ ಮತೀಯ ಶಕ್ತಿಗಳು ಪ್ರಬಲವಾಗುತ್ತ ಮಾನವೀಯತೆಯನ್ನು ನುಂಗಿ ನೊಣೆಯುತ್ತಿವೆ. ಇದು ನಿಜಕ್ಕೂ ಎಲ್ಲರೂ ವಿವೇಚನೆಯಿಂದ ಗಮನಿಸಬೇಕಾದ ಸಂಗತಿ. ಮನಸ್ಸು-ಮನಸ್ಸುಗಳ ನಡುವೆ ಹುಳಿ ಹಿಂಡುತ್ತಿರುವ ರಾಮ ರಹೀಮರನ್ನೂ ಕೆಲಕಾಲ ನಮ್ಮೆಲ್ಲರಿಂದ ದೂರ ಇಡುವುದು ಒಳಿತು, ಅಲ್ಲವೇ ? ಈ ನಿಟ್ಟಿನಲ್ಲಿ 'ಹೊಸತು' ಗಮನಾರ್ಹ ಹೆಜ್ಜೆ ಇಡುತ್ತಿದೆ. ಜುಲೈ ಸಂಚಿಕೆಯ ನಿಮ್ಮ ಸಂಪಾದಕೀಯ, ಹಂಝು ಮಲಾರ್ ಅವರ ಕುಸಿದುಬಿದ್ದ ಗೋಡೆ – ಹಿಂದಿನ ಸಂಚಿಕೆಯ ಸನತ್‌ಕುಮಾರ ಬೆಳಗಲಿ ಅವರ ಲೇಖನಗಳೇ ಇದಕ್ಕೆ




ಸಾಕ್ಷಿ. 'ಹೊಸತು'ವಿನ ಆರೋಗ್ಯಕರ-ಮಾನವೀಯ ಮೌಲ್ಯವನ್ನು ಪರಿಪೋಷಿಸುವ ಮನಸ್ಸುಗಳಿಗೆ ಧನ್ಯವಾದಗಳು.

*ಶಹಾಪುರ* — ***ವಿಶ್ವಾರಾಧ್ಯ ಸತ್ಯಂಪೇಟೆ***

ರಾಷ್ಟ್ರಪತಿ ಆಯ್ಕೆಯ ಬಗ್ಗೆ ಉತ್ತಮ ಸಂಪಾದಕೀಯವನ್ನು ಬರೆದಿದ್ದೀರಿ. ರಾಷ್ಟ್ರದ ಮುಂದೆ ಇರುವುದು ವಿಜ್ಞಾನಿಯೋ ಅಥವಾ ಸ್ವಾತಂತ್ರ್ಯ ಹೋರಾಟಗಾರರೋ ಎಂಬುದು ಆಯ್ಕೆಯ ಪ್ರಶ್ನೆ. ಆದರೆ ರಾಷ್ಟ್ರಪತಿ ಉನ್ನತ ಹುದ್ದೆಯ ಆಯ್ಕೆ ಪೂರ್ಣ ರಾಜಕೀಯದ ಮೇಲೆ ಅವಲಂಬಿತವಾಗಿದೆ. ಈ ಇಬ್ಬರೂ ವ್ಯಕ್ತಿಗಳೂ ವಿವಾದಾತೀತರಾದವರೇ. ಅಂತಿಮ ಆಯ್ಕೆ ಹೇಗಾಗುತ್ತದೋ ಕಾದು ನೋಡಬೇಕು. ಕ್ಯಾ. ಲಕ್ಷ್ಮೀ ಸೆಹಗಲ್, ಕಲಾಂ ಇಬ್ಬರ ವ್ಯಕ್ತಿತ್ವಗಳು ಅತ್ಯಂತ ಪಾರದರ್ಶಕವಾದವುಗಳೇ. ಯಾರೇ ಆಯ್ಕೆಯಾಗಲಿ ಉನ್ನತ ಸ್ಥಾನಕ್ಕೆ ಉನ್ನತ (ಶ್ರೇಷ್ಠ) ವ್ಯಕ್ತಿಗಳೇ ಆಯ್ಕೆಯಾಗಲಿ.

*ಶಂಕರಘಟ್ಟ* — ***ರಾಜೇಂದ್ರ, ಟಿ.***

ಜೂನ್ ಪತ್ರಿಕೆಯಲ್ಲಿನ 'ದೇವಚಂದ್ರನ ಹಾಸ್ಯ ವಿನೋದ' ಲೇಖನದ ಬಗ್ಗೆ ನನ್ನ ಟೀಕೆಯ ಮುಖ್ಯ ಭಾಗವನ್ನು 'ಆ ಕೃತಿ ವಿದೇಶಿ ಮತ ಒಂದರ ಪ್ರಚಾರ ಸಾಹಿತ್ಯ, ಬ್ರಿಟಿಷ್ ಅಧಿಕಾರಿ ಪ್ರೇರಿತ, ಅವನನ್ನು ಮೆಚ್ಚಿಸಲು ಆ ಮತದ ಪ್ರಭಾವಕ್ಕೆ ಸಿಕ್ಕಿದವನೊಬ್ಬನು ಬರೆದುದಿರಬೇಕು ಎಂಬ ಅನುಮಾನಕ್ಕೆ ಆಸ್ಪದವಿದೆ' ಎಂಬುದನ್ನು ನೀವು ತೋರಿಸಿದ್ದರೆ ಸಮಾಧಾನ ವಿರುತ್ತಿತ್ತು. ಭಾರತೀಯವಾದುದು, 'ಹಿಂದು'ವಾದುದನ್ನು ನಿರ್ದಾಕ್ಷಿಣ್ಯವಾಗಿ ಹೆಸರಿಸುವಾಗ ಹಾಗೆಯೇ ವಿದೇಶಿ ಮತಗಳ ತಪ್ಪುಗಳನ್ನೂ ಅಷ್ಟೇ ರೀತಿಯಲ್ಲಿ ಹೆಸರಿಸಿ ನಿಷ್ಪಕ್ಷಪಾತರೆಂದು ತೋರಿಸಬೇಕು. ಪತ್ರಿಕೆ ನಿಷ್ಪಕ್ಷಪಾತವಲ್ಲವೆಂಬ ಅನ್ನಿಸಿಕೆ ಬರಬಾರದೆಂದು ನನ್ನ ಸವಿನಯ ಕೋರಿಕೆ.

*ಸಾಗರ* — ***ಬ. ನಾ. ರಘುರಾಮ***

ಈಗಿನ ಸಾಮಾಜಿಕ ವಲಯದಲ್ಲಿ 'ಜಾತಿ' ಯೆಂಬ ವಿಷಾನಿಲವೇ ಆವರಿಸಿಕೊಂಡು, ಸೃಷ್ಟಿಶೀಲರನ್ನಾಗಿಸುವ ಒಲವುಳ್ಳ ಮಹಾಶಕ್ತಿಗಳೂ, ಸದ್ಗುರುಗಳೂ, ಸಾಮಾಜಿಕ ಮಹತ್ವವನ್ನು ಎತ್ತರಕ್ಕೇರಿಸುವ ಸೃಜನಾತ್ಮಕ ವಿಚಾರಗಳನ್ನೂ ಮಾನವೀಯ ಮೌಲ್ಯಗಳನ್ನೂ ಬೆಳೆಸದೆ ಆಯಾ ಸೀಮಿತ (ಜಾತಿಯಾವರಣದಲ್ಲೇ) ತಾವು ಬಲವಾಗಲು ಹೊರಟಿರುವುದು ದುರದೃಷ್ಟಕರ.

'ಪರಿವರ್ತನೆ ಜಗದ ನಿಯಮ' ಎಂಬುದನ್ನು ನಿರೂಪಿಸಿದ ಜುಲೈ ಮಾಸದ ಹಂಝು ಮಲಾರ್‌ರವರ 'ಕುಸಿದುಬಿದ್ದ ಜಾತಿಯ ಗೋಡೆ' ಪ್ರಜ್ಞಾಪೂರ್ವಕವಾಗಿ ಮೂಡಿಬಂದಿದೆ.

*ನಾಗಲಮಡಿಕೆ* — ***ಆ. ನಾ. ಚಂದ್ರಶೇಖರ್***

---

*೩ನೇ ಪುಟದಿಂದ*

ಹೊಸ ಅಧ್ಯಕ್ಷ ಕಲಾಂ ಅವರು ಅಧ್ಯಕ್ಷೀಯ ಚುನಾವಣೆಗೆ ಮುಂಚೆ ಆಡಿದ್ದ ಕೆಲವು ಮಾತುಗಳನ್ನು ಹೇಗೆ ಅರ್ಥೈಸಿಕೊಳ್ಳಬೇಕೋ ತಿಳಿಯುತ್ತಿಲ್ಲ. ಅವರ ಪ್ರಕಾರ ಭಾರತವು ಅಣ್ವಸ್ತ್ರಗಳನ್ನು ಹೊಂದಿರುವುದರಿಂದಲೇ ಇತ್ತೀಚೆಗೆ ಪರಿಸ್ಥಿತಿ ಉದ್ವಿಗ್ನಗೊಂಡಿದ್ದಾಗ ಪಾಕಿಸ್ತಾನ ನಮ್ಮ ಮೇಲೆ ಯುದ್ಧ ಸಾರಲಿಲ್ಲ. ಇದನ್ನು ಬಾಲಿಶತನವೆನ್ನಬೇಕೋ ಮುಗ್ಧತೆ ಎನ್ನಬೇಕೋ ! ಅಮೆರಿಕಾದ ದೊಡ್ಡಣ್ಣ ಪಾಕಿಸ್ತಾನದ ಮಿಲಿಟರಿ ವಿಮಾನ ತಾಣಗಳಲ್ಲಿ ಕುಳಿತು ಭಾರತ-ಪಾಕಿಸ್ತಾನಗಳನ್ನು ತನ್ನ ಗೊಂಬೆಯಾಟಕ್ಕೆ ಆಟಿಕೆಗಳನ್ನಾಗಿ ಮಾಡಿಕೊಂಡಿದ್ದಾನೆಂಬುದನ್ನು ಪರಮಾಣು ವಿಜ್ಞಾನಿ ಕಲಾಂ ತಿಳಿಯದಿದ್ದರೆ ಅದು ಕ್ಷಮಾರ್ಹವೇ ಇರಬೇಕಲ್ಲವೆ ? ಇನ್ನಾದರೂ ನಮ್ಮ ದೇಶ ಆಟಿಕೆಯಾಗದಿರುವಂತೆ ಮಾಡಲು ರಾಷ್ಟ್ರಾಧ್ಯಕ್ಷ ಕಲಾಂ ಮುಂದಾದರೆ ಅವರು ಅಧ್ಯಕ್ಷರಾದದ್ದು ಸಾರ್ಥಕವೆನಿಸೀತು.

– *ಜಿ. ರಾಮಕೃಷ್ಣ*

# ಕಾಮ್ರೇಡ್ ಸೂರಿ ಒಂದು ನೆನಪು

ನಮ್ಮ ರಾಷ್ಟ್ರದ ಕಾರ್ಮಿಕ ಚಳುವಳಿಯಲ್ಲಿ ಕರ್ನಾಟಕ ಬಹುಮುಖ್ಯ ಪಾತ್ರ ವಹಿಸಿದೆ. ಅದರ ಕೊಡುಗೆ ಅಪಾರ. ತೀವ್ರವಾದ ಹೋರಾಟಗಳೂ ನಡೆದಿವೆ. ಈ ಹೋರಾಟಗಳ, ತ್ಯಾಗ ಬಲಿದಾನಗಳ ಪರಂಪರೆಯಲ್ಲಿ ಉನ್ನತ ಮಟ್ಟದ ನಾಯಕರೂ ಹೊರ ಬಂದಿದ್ದಾರೆ. ಸೆಪ್ಟೆಂಬರ್ ೨೦೦೦ದಲ್ಲಿ ನಮ್ಮನ್ನಗಲಿದ ಕಾಮ್ರೇಡ್ ಕೃಷ್ಣನ್ ಅವರು ಎ.ಐ.ಟಿ.ಯು.ಸಿ.ಯ ಅಧ್ಯಕ್ಷರಾಗಿ ನಮ್ಮ ದೇಶದ ಕಾರ್ಮಿಕ ವರ್ಗದ ಚಳುವಳಿಗೆ ಕಳಶಪ್ರಾಯರಾಗಿದ್ದರು. ನಾನು ಅವರಿಗೆ ಅತೀ ಸಮೀಪವರ್ತಿಯಾಗಿದ್ದೆ. ಅವರ ಮಾರ್ಗ ದರ್ಶನ ನನಗಿತ್ತು. ಅನೇಕ ಕಾರ್ಮಿಕ ಹಾಗೂ ಪಕ್ಷದ ಸಂಘಟನೆಗಳಲ್ಲಿ ಅವರ ಜೊತೆ ಕೆಲಸ ಮಾಡುವ ಅಪೂರ್ವ ಅವಕಾಶವಿತ್ತು. ಅವರೆಂದರೆ ಒಂದು ವಿಶೇಷವಾದ ಕುಲುಮೆ. ನೋಡಲು ಸೌಮ್ಯವಾಗಿ ದ್ದರೂ ಒಳಗೆ ಭೋರ್ಗರೆಯುವ ಚೇತನ.

ಕಾಮ್ರೇಡ್ ಕೃಷ್ಣನ್ ಅವರ ಜೊತೆಯಲ್ಲೇ ಒಟ್ಟಿಗೆ ಬೆಳೆದ ಇನ್ನೊಬ್ಬ ಕಾರ್ಮಿಕ ಚಳುವಳಿ ಮತ್ತು ಕಮ್ಯುನಿಸ್ಟ್ ಪಕ್ಷದ ಹಿರಿಯ ನಾಯಕರು ಕಾಮ್ರೇಡ್ ಸೂರ್ಯ ನಾರಾಯಣರಾವ್. ಅವರು ಜುಲೈ ಒಂದರಂದು ನಮ್ಮನ್ನಗಲಿದರು. ಕಾಮ್ರೇಡ್ ಕೃಷ್ಣನ್ ಮತ್ತು ಸೂರಿಯವರು ನಮ್ಮ ರಾಜ್ಯದ ಕಾರ್ಮಿಕ ಸಂಘಟನೆ ಮತ್ತು ಕಮ್ಯುನಿಸ್ಟ್ ಚಳುವಳಿಯ ದಿಗ್ಗಜರು. ಈಗ ಈ ಎರಡು ಹಿರಿಯ ಚೇತನಗಳೂ ನಮ್ಮೊಂದಿಗಿಲ್ಲ. ಬದುಕಿನುದ್ದಕ್ಕೂ ನಡೆಸಿದ ಅವರ ಹೋರಾಟಗಳು, ಅವುಗಳ ನೆನಪು, ಅವರ ಆದರ್ಶಗಳು, ಸಂದೇಶಗಳು ಮಾತ್ರ ಎಂದಿಗೂ ಜನಮನದಲ್ಲಿ ಹಸಿರಾಗಿಯೇ ಉಳಿಯುತ್ತವೆ.

ಚಿಕ್ಕಂದಿನಿಂದಲೂ ನಾನು ಸೂರಿಯವರನ್ನು ಚೆನ್ನಾಗಿ ಬಲ್ಲೆ, ನಾವಿಬ್ಬರೂ ಹತ್ತಿರದ ಸಂಬಂಧಿಗಳು. ನಾನು ಬೆಂಗಳೂರಿಗೆ ಮೊದಲ ಬಾರಿಗೆ ಬಂದಾಗ ಅವರ ಮನೆಯಲ್ಲೇ ಕೆಲವು ದಿನ ತಂಗಿದ್ದೆ. ನಮ್ಮ ಕುಟುಂಬ ವರ್ಗದವರಿಗೆ ಅವರು 'ರಾಮು' ವಾಗಿದ್ದರು. ಅವರ ಬಗ್ಗೆ ನಮಗೆಲ್ಲ ಬಹಳ ಹೆಮ್ಮೆ. ಕುಟುಂಬವರ್ಗದ ಯಾವುದೇ ಕಾರ್ಯಗಳಿದ್ದರೂ ವಿಶ್ವಾಸದಿಂದ ಭಾಗವಹಿಸುತ್ತಿದ್ದರು. ಯಾವುದೇ ವಿಷಯದಲ್ಲೂ ಅವರದು ಸ್ಪಷ್ಟ ಅಭಿಪ್ರಾಯ. ತಮ್ಮ ವೈಯಕ್ತಿಕ ಸಮಸ್ಯೆಗಳ ಬಗ್ಗೆ ಅವರು ಎಂದೂ ತಲೆಕೆಡಿಸಿಕೊಳ್ಳುತ್ತಿರಲಿಲ್ಲ.

ನಾನು ಸಿ.ಪಿ.ಐ. ಸೇರುವ ಹೊತ್ತಿಗೆ ಅದು ಇಬ್ಭಾಗವಾಗಿತ್ತು. ಆದರೂ ಸೂರಿಯವರೊಡನೆ ನನ್ನ ಸಂಬಂಧ ಚೆನ್ನಾಗಿಯೇ ಇತ್ತು. ಆಗ ಅವರೊಡನೆ ಹೆಚ್ಚು ಸಂಖ್ಯಾಬಲವುಳ್ಳ ಸಂಘಟನೆಗಳಿರಲಿಲ್ಲ. ಬಿನ್ನಿ ಮಿಲ್ ಸಂಘಟನೆ, ಫುಟ್‌ಪಾತ್ ವೆಂಡರ್ಸ್ ಸಂಘ ಮತ್ತು ಟಿ. ಆರ್. ಮಿಲ್ ಸಂಘ ಅವರ ಮುಖ್ಯವಾದ ಕಾರ್ಯಕ್ಷೇತ್ರಗಳು. ಹಲವಾರು ಬಾರಿ ಟಿ. ಆರ್. ಮಿಲ್ ಕಾರ್ಮಿಕರ ಬೇಡಿಕೆಗಳ ಬಗ್ಗೆ ಅವರು ಉಪವಾಸ ಕೂಡುತ್ತಿದ್ದರು. ಆಗ ಅವರ ಬೆಂಬಲಿಗರೆಂದರೆ ಸಮಾಜವಾದಿ ಪಕ್ಷದ ಬಿ. ಕೆ. ಶ್ರೀರಾಮಯ್ಯ ಮತ್ತು ಎಸ್. ವೆಂಕಟರಾಂ. ನಾನು ಅವರ ಸಭೆಗಳಲ್ಲಿ ಒಬ್ಬ ಖಾಯಂ ಭಾಷಣಕಾರ. ಅವರ ಸಂಘದ ಕಛೇರಿ ಬಾಳೆಕಾಯಿ ಮಂಡಿಯ ಬಳಿ ಇತ್ತು. ನಮ್ಮಲ್ಲಿ ಯಾರಾದರೂ ಅವರು ಕರೆದ ಸಭೆಗೆ ತಡವಾಗಿ ಹೋದರೆ, ಅವರು ಕೆಂಡಾಮಂಡಲ ವಾಗುತ್ತಿದ್ದರು. 'ಕಾರ್ಮಿಕರಿಗೆ ವರ್ಗಪ್ರಜ್ಞೆ ಬೆಳೆಸಿಲ್ಲ, ನಮ್ಮಲ್ಲಿ ಶಿಸ್ತಿಲ್ಲ', ಎಂದು ನಮ್ಮನ್ನು ಮೂದಲಿಸುತ್ತಿದ್ದರು. 'ಕ್ರಾಂತಿಕಾರಿ ಮನೋಭಾವ ಬೆಳೆಸಿದ ಹೊರತು ಯಾವುದೇ ಕ್ರಾಂತಿ ಆಗುವುದಿಲ್ಲ', ಎಂದೂ ಅವರು ಹೇಳುತ್ತಿದ್ದರು. ಕೆಲವೊಂದು ಬಾರಿ 'ಕ್ರಾಂತಿಯನ್ನು ಹರಾಜಿಗಿಡೋಣ, ಯಾರಾದರೂ ಅದನ್ನು ಬಿಡ್ ಮಾಡುತ್ತಾರೆ' ಎಂದು ಎಸ್. ವೆಂಕಟರಾಂ ತಮಾಷೆ ಮಾಡಿದಾಗ, ಶ್ರೀರಾಮಯ್ಯ ಹೇಳುತ್ತಿದ್ದರು 'ಅದನ್ನೂ ಸೂರಿಯೇ ಬಿಡ್ ಮಾಡ್ತಾನೆ' ಎಂದು !

ಸಾಮಾನ್ಯವಾಗಿ ಸಭೆಗಳು ಮುಗಿದ ನಂತರ ಅವರ ದ್ವಿಚಕ್ರವಾಹನದಲ್ಲೇ ಬಹಳ ಪ್ರಯಾಸಪಟ್ಟು ನಾವಿಬ್ಬರೂ ಪುಟ್ಟಣ್ಣ ರಸ್ತೆಯಲ್ಲಿರುವ ನನ್ನ ರೂಮಿಗೆ ಹೋಗುತ್ತಿದ್ದೆವು. ಅದೊಂದು ಅತಿ ಚಿಕ್ಕ ಕೊಠಡಿ. ಸೂರಿಯವರಿಗೆ ಕಾಲುಚಾಚಿ ಕೂರಲೂ ಸಾಧ್ಯ ವಾಗುತ್ತಿರಲಿಲ್ಲ. ಆದರೂ ಮಧ್ಯರಾತ್ರಿಯಾದರೂ ನಮ್ಮ ರಾಜಕೀಯ ಕುರಿತ ಚರ್ಚೆ ಮುಗಿಯುತ್ತಿರಲಿಲ್ಲ. ಕಮ್ಯುನಿಸ್ಟ್ ಪಕ್ಷ ಒಡೆದು ಎರಡಾಗಿದ್ದಕ್ಕೆ ಕಾರಣ, ಪಕ್ಷವನ್ನು ಕಟ್ಟುವ ವಿಧಾನ, ಇತ್ಯಾದಿಗಳು ನಮ್ಮ ಚರ್ಚೆಯ ವಸ್ತುಗಳಾಗಿದ್ದವು. ನಾನು ಅವರ ಪಕ್ಷವನ್ನು ಸೇರುತ್ತೇನೆಂಬ ನಂಬಿಕೆ ಅವರಿಗಿತ್ತು. ಅವರೊಡನೆ ಚರ್ಚೆ ನಡೆಸಿದಾಗಲೆಲ್ಲ ಹಲವಾರು ಉಪಯುಕ್ತ ಮಾಹಿತಿಗಳು ನನಗೆ ದೊರಕುತ್ತಿದ್ದವು.

ಸೂರಿಯವರು ದಿಟ್ಟ ಹೋರಾಟಗಾರರಾಗಿದ್ದರು. ಸ್ವಭಾವತಃ ಅವರೊಬ್ಬ ಉಗ್ರ ಸ್ವಭಾವದವರು. ಅವರಿಗೆ ಹೇಳಬೇಕೆನಿಸಿದ್ದನ್ನು ಯಾವ ಸಂಕೋಚವೂ ಇಲ್ಲದೆ ನೇರವಾಗಿಯೇ ಹೇಳುತ್ತಿದ್ದರು. ಅವರೊಡನೆ ಇದ್ದವರಿಗೆ ಇರಿಸುಮುರಿಸಾದರೂ ಅದರ ಬಗ್ಗೆ ಅವರು ತಲೆ ಬಿಸಿ ಮಾಡಿಕೊಳ್ಳುತ್ತಿರಲಿಲ್ಲ.

ನಾನು ಕಳೆದ ವರ್ಷ ಅವರನ್ನು ಭೆಟ್ಟಿ ಮಾಡಲು ಅವರ ಕಛೇರಿಗೆ ಹೋಗಿದ್ದೆ. ಆಗ ತಾನೆ ಅವರು ಕಲ್ಕತ್ತಾಗೆ ಹೋಗಿ ಅವರ ಪಕ್ಷದ ಸಭೆಯೊಂದರಲ್ಲಿ ಭಾಗವಹಿಸಿ ಬಂದಿದ್ದರು. ನನಗೆ ಅವರ ಆರೋಗ್ಯದ ಬಗ್ಗೆ ಕಾಳಜಿ ಇದ್ದ ಕಾರಣ "ಈ ವಯಸ್ಸಿನಲ್ಲಿ ನೀನೇಕೆ ಇಷ್ಟೊಂದು ಓಡಾಡುತ್ತೀಯ, ಯುವಕರಿಗೆ ಓಡಾಡುವ ಕೆಲಸ ಕೊಟ್ಟು ನೀನು ಉಸ್ತುವಾರಿ ಮಾಡಬಾರದೇ ?" ಎಂದು ಕೇಳಿದೆ. ಅವರು ಹೇಳಿದರು : "ಒಬ್ಬ ಕಮ್ಯುನಿಸ್ಟ್ ಸಾಯುವವರೆಗೂ ಕಮ್ಯುನಿಸ್ಟ್ ಆದ್ದರಿಂದ ಸಕ್ರಿಯ ಕೆಲಸಗಳಿಂದ ನಿವೃತ್ತಿ ಹೇಗೆ ಸಾಧ್ಯ?" ಅದರಂತೆ ಅವರು ಕೊನೆಯುಸಿರೆಳೆಯುವವರೆಗೂ ತಮ್ಮ ಆರೋಗ್ಯ, ವೈದ್ಯಕೀಯ ಸಲಹೆಯನ್ನು ಲೆಕ್ಕಿಸದೆ ದುಡಿದರು.



ಸುಮಾರು ಮೂರು ವರ್ಷಗಳ ಹಿಂದೆ ನನ್ನ ತಾಯಿ ತೀರಿಕೊಂಡಾಗ ಅವರ ಅಂತ್ಯಕ್ರಿಯೆಗೆ ಸೂರಿ ಬಂದಿದ್ದರು. ಅಂತ್ಯಕ್ರಿಯೆ ಮುಗಿಯು ವವರೆಗೂ ಅವರು ಇದ್ದರು. ಅವರ ಕಣ್ಣು ತೇವವಾಗಿತ್ತು. ನನ್ನ ತಾಯಿಯ ಬಗ್ಗೆ ಗುಣಗಾನ ಮಾಡುತ್ತಾ 'ನಾನೂ ಲಿಸ್ಟ್‌ನಲ್ಲಿ ಇದ್ದೇನಯ್ಯಾ' ಎಂದು ಹೇಳಿದ್ದರು. ಇದೇ ಮಾತನ್ನು ಕಾಮ್ರೇಡ್ ಕೃಷ್ಣನ್ ಅವರು ತೀರಿಕೊಂಡಾಗಲೂ ನನ್ನೊಡನೆ ಹೇಳಿದ್ದರು. ಆಗ ನಾನು, "ಹಾಗೆ ಹೇಳಬೇಡ, ನಿನ್ನ ನೂರನೇ ಹುಟ್ಟಿದ ಹಬ್ಬವನ್ನು ಅದ್ದೂರಿಯಿಂದ ಮಾಡೋಣ" ಎಂದಿದ್ದೆ. ಪ್ರಾಮಾಣಿಕವಾಗಿ ಅದು ನನ್ನ ಬಯಕೆ ಆಗಿದ್ದರೂ ಅದು ಹುಸಿಯಾಯಿತು.

ಇದೇ ವರ್ಷ ಹೋಳಿ ಹಬ್ಬದ ದಿನ ನಮ್ಮ ಕಛೇರಿಯಲ್ಲಿ ಕಾರ್ಮಿಕ ಸಂಘಟನೆಗಳ ಸಭೆಯನ್ನು ಇಟ್ಟುಕೊಂಡಿದ್ದೆವು. ನಮ್ಮ ಹೊಸ ಕಛೇರಿಗೆ ಅದು ಅವರ ಪ್ರಥಮ ಭೇಟಿ. ಕಛೇರಿಯ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸುತ್ತಾ 'ನೀನು ಒಳ್ಳೆಯ ಕಛೇರಿಯನ್ನೇ ಹೊಡೆದೆ' ಎಂದು ತಮಾಷೆ ಮಾಡಿದರು. ನಾನು ಕೂಡಲೇ ಹೇಳಿದೆ, "ಎ.ಐ.ಟಿ.ಯು.ಸಿ. - ಸಿ.ಐ.ಟಿ.ಯು. ಒಂದು ಮಾಡಿ. ಆಗ ಈ ಕಟ್ಟಡ ನಿಮಗೇ ಸೇರುತ್ತೆ." ಅದಕ್ಕೆ ಅವರು ಪ್ರತಿಕ್ರಿಯೆ ನೀಡಿ, "ಅದೆಲ್ಲ ನಾವು ಮಾಡಿದ್ದಲ್ಲ, ಮೇಲಿಂದ ಆಗಿರುವುದು" ಎಂದು ಹೇಳಿದರು. ಅಷ್ಟಕ್ಕೆ ನಾನು ಬಿಡಲಿಲ್ಲ. ಮಾತು ಮುಂದುವರೆಸುತ್ತ ಹೇಳಿದೆ, "ನೀವು ಬದುಕಿದ್ದಾಗ ಈ ಎರಡು ಸಂಘಟನೆಗಳನ್ನು ಒಂದು ಮಾಡಿ." ಅದಕ್ಕೆ ಅವರು ಮತ್ತೊಮ್ಮೆ ನಿಸ್ಸಹಾಯಕರಾಗಿ

ಎಚ್. ವಿ. ಅನಂತಸುಬ್ಬರಾವ್

ಸೂರಿನ ಕಡೆ ನೋಡಿದರು. ಅಂತೂ ಈ ಒಂದುಗೂಡಿಸುವ ಕಾರ್ಯ ಅವರಿದ್ದಾಗ ಆಗಲಿಲ್ಲ. ನಾನು ಹಾಗೆಂದು ಹೇಳಿದರೆ ಸೂರಿ ಜೊತೆಗಾರರು ಕೂಡಲೆ ಸೈದ್ಧಾಂತಿಕ ತೀರ್ಮಾನಗಳನ್ನು ಕೊಡಲು ತವಕಿಸುತ್ತಾರೆಂದು ನನಗೆ ಗೊತ್ತು. ಅದಕ್ಕೆ ಉತ್ತರಗಳೂ ಇವೆ. ಆದರೆ ಅದರ ಪ್ರಸ್ತಾಪ ಇಲ್ಲಿ ಬೇಡ.

ಸೂರಿಯವರು ಸ್ವಭಾವತಃ ಹೋರಾಟಗಾರರು. ಒಳ್ಳೆಯ ಕನಸುಗಾರ. ಸಮಾಜವಾದಿ ಸಮಾಜವನ್ನು ಇಂದಲ್ಲ ನಾಳೆ ಕಟ್ಟುತ್ತೇವೆನ್ನುವ ಛಲಗಾರ. ಇತ್ತೀಚಿನ ವರ್ಷಗಳಲ್ಲಿ ಕೋಮುವಾದಿ ಶಕ್ತಿಗಳ ಬೆಳವಣಿಗೆಯ ಬಗ್ಗೆ ಅತೀವ ಬೇಸರ ಹೊಂದಿ ಕೆಲವೊಮ್ಮೆ ಕ್ರುದ್ಧರೂ ಆಗಿರುತ್ತಿದ್ದರು. ಸಹಜವಾಗಿಯೇ ಅವರ ಎಲ್ಲ ಭಾಷಣ ಮತ್ತು ಚರ್ಚೆಗಳಲ್ಲೂ ಕೋಮುವಾದವನ್ನು ಕಠೋರವಾಗಿಯೇ ಖಂಡಿಸುತ್ತಿದ್ದರು. ಕೆಲವೊಮ್ಮೆ ಈ ಭಾಷಣಗಳು ನಮ್ಮನ್ನು ಪೇಚಿಗೆ ಸಿಕ್ಕಿಸುತ್ತಿದ್ದವು. ಕೆಲವು ತಿಂಗಳುಗಳ ಹಿಂದೆ ವರದಾಚಾರ್ ಮೆಮೋರಿಯಲ್ ಸಭಾ ಭವನದಲ್ಲಿ ಎಲ್ಲ ರಾಷ್ಟ್ರೀಯ ಕಾರ್ಮಿಕ ಸಂಘಟನೆಗಳ ಸಮಾವೇಶ ಜರುಗಿತ್ತು. ಆ ಸಮಾವೇಶದಲ್ಲಿ ಕೋಮುವಾದದ ವಿರುದ್ಧ ಖಂಡನಾ ನಿರ್ಣಯ ಮಂಡಿಸಬೇಕೆಂದು ಸೂರಿಯವರು ಒತ್ತಾಯಿಸಿದರು. ಆ ಸಮಾವೇಶದಲ್ಲಿ ಭಾಗವಹಿಸಿದ ಎಲ್ಲ ಸಂಘಟನೆಗಳೂ ಈ ನಿರ್ಣಯವನ್ನು ಒಪ್ಪುವುದಿಲ್ಲವೆಂಬುದು ನಮಗೆಲ್ಲ ತಿಳಿದಿತ್ತು. ಆದರೂ ಅವರು ತಮ್ಮ ಭಾಷಣದಲ್ಲಿ ಕೋಮುವಾದದ ವಿರುದ್ಧ ಘರ್ಜಿಸಿದರು ! ಅಷ್ಟೇ ಏಕೆ, ಬಾಗೂರು - ನವಿಲೆ ಹೋರಾಟದ ಸಂದರ್ಭದಲ್ಲಿ ಗೋಪಾಲ್ ಅವರ ಮೇಲೆ ದೈಹಿಕ ಹಲ್ಲೆ ನಡೆಸಿ ಅವರನ್ನು ಕೊಲ್ಲುವ ದುಷ್ಟ ಪ್ರಯತ್ನ ನಡೆಸಲಾಗಿತ್ತು. ಅದನ್ನು ಖಂಡಿಸಲು ಚನ್ನರಾಯಪಟ್ಟಣದಲ್ಲಿ ಒಂದು ದೊಡ್ಡ ಸಭೆ ನಡೆದಾಗ ಅಲ್ಲಿ ಸೂರಿಯವರು ಕೋಮುಘರ್ಷಣೆಗಳ ಬಗ್ಗೆ ಪ್ರಚಂಡ ಭಾಷಣ ಮಾಡಿದರು. ಖಂಡನಾ ಸಭೆಯಲ್ಲಿ ಭಾರತೀಯ ಜನತಾ ಪಕ್ಷದ ಪ್ರತಿನಿಧಿಗಳೂ ಭಾಗವಹಿಸಿದ್ದುದನ್ನು ಸೂರಿಯವರು ಲೆಕ್ಕಿಸಲೇ ಇಲ್ಲ!

ಅವರೊಬ್ಬ ನಿಸ್ವಾರ್ಥ ಜೀವಿಯಾಗಿ, ಛಲಗಾರನಾಗಿ, ಹೋರಾಟಗಾರನಾಗಿ, ಕಮ್ಯುನಿಸ್ಟ್ ಸಿದ್ಧಾಂತದ ಬಗ್ಗೆ ಅಚಲ ನಂಬಿಕೆ ಹೊಂದಿದ್ದ ವ್ಯಕ್ತಿ. ಮನುಷ್ಯ ಸಹಜ ಪ್ರೀತಿ, ದ್ವೇಷ, ಅಸೂಯೆ, ಕೋಪ ಎಲ್ಲವೂ ಅವರಲ್ಲೂ ಇತ್ತು. ಬಹುಶಃ ಕೆಲವು ನಕಾರಾತ್ಮಕ ಗುಣಗಳು ಇಲ್ಲದಿದ್ದಲ್ಲಿ ಅವರು ಇನ್ನೂ ಹೆಚ್ಚು ಎತ್ತರಕ್ಕೆ ಬೆಳೆಯಬಹುದಿತ್ತು ಮತ್ತು ಕಮ್ಯುನಿಸ್ಟ್ ಚಳುವಳಿಯನ್ನು ಒಂದುಗೂಡಿಸಲು ಅವರು ಶ್ರಮಿಸಬಹುದಿತ್ತು. ಇಂದಿನ ಪರಿಸ್ಥಿತಿಯಲ್ಲಿ ಇಂತಹ ಐಕ್ಯತೆಯ ಹೆಚ್ಚಿನ ಅವಶ್ಯಕತೆ ಎಂದಿಗಿಂತ ಹೆಚ್ಚಾಗಿದೆ. ಈಗಾಗಲೇ ಬಿ. ಜೆ. ಪಿ. ಬ್ರ್ಯಾಂಡ್ ಫ್ಯಾಸಿಸಂ ರಾಜ್ಯಯಂತ್ರವನ್ನು ಹಿಡಿದು ಕೂತಿದೆ. ರಕ್ತವಾಹಿನಿಗಳೊಳಗೆ ವಿಷ ಸೇರಿದಂತೆ ದೇಶದ ಎಲ್ಲ ವಾಹಿನಿಗಳಲ್ಲೂ ಅದು ಸೇರಿಕೊಂಡಿದೆ. ಚರಿತ್ರೆಯನ್ನು ವಿರೂಪಗೊಳಿಸುತ್ತಿದೆ. ಕೋಮುಗಲಭೆಗಳನ್ನು ಹುಟ್ಟು ಹಾಕಿ ಕಾರ್ಮಿಕರನ್ನು, ಅಲ್ಪಸಂಖ್ಯಾತರನ್ನು, ದಲಿತರನ್ನು ಮತ್ತು ಕಮ್ಯುನಿಸ್ಟರನ್ನು ಮುಗಿಸಲು ಹೊರಟಿದೆ. ವಿದ್ಯಾಭ್ಯಾಸ, ನ್ಯಾಯಾಂಗ, ಪೊಲೀಸ್ ವಿಭಾಗ, ಅಧಿಕಾರಶಾಹಿ ಹೀಗೆ ಎಲ್ಲೆಡೆ ಸಂಘ ಪರಿವಾರ ನುಸುಳಿದೆ. ಸಂವಿಧಾನದಿಂದ ಹಿಡಿದು ಎಲ್ಲ ಪ್ರಜಾಪ್ರಭುತ್ವ ತತ್ವಗಳ ವಿರುದ್ಧವೂ ಎಲ್ಲ ಮತೀಯ ಮೂಲಭೂತವಾದಿ ಶಕ್ತಿಗಳು ಸಮರ ಸಾರಿವೆ. ಹೀಗಿರುವಾಗ ನಾವೆಲ್ಲ ಒಂದಾಗಿ ಈ ಹುನ್ನಾರವನ್ನು ಹಿಮ್ಮೆಟ್ಟಿಸುವ ಅಗತ್ಯವಿದೆ. ಈ ಬಗ್ಗೆ ಸೂರಿಯವರಿಗೆ ಖಚಿತವಾದ ಅಭಿಪ್ರಾಯವಿದ್ದಿತು.



ಶ್ರೀ. ಎಂ. ಎಸ್. ಕೃಷ್ಣನ್ ಮತ್ತು ಶ್ರೀ. ಎಸ್. ಸೂರ್ಯನಾರಾಯಣ ರಾವ್

ಕಾಮ್ರೇಡ್ ಎಂ. ಎಸ್. ಕೃಷ್ಣನ್ ಹಾಗೂ ಸೂರಿಯವರು ಐದು ದಶಕಕ್ಕೂ ಹೆಚ್ಚು ಕಾಲ ಶ್ರಮಜೀವಿ ಚಳುವಳಿಗಳಲ್ಲಿ ದುಡಿದವರು. ಇದಲ್ಲದೆ ಕಾಮ್ರೇಡ್ ಕೃಷ್ಣನ್ ನಾಲ್ಕು ಬಾರಿ ಶಾಸನ ಸಭೆಗೆ ಚುನಾಯಿತರಾಗಿ ಅಲ್ಲಿನ ಕಾರ್ಯಕಲಾಪಗಳಿಗೆ ತಮ್ಮದೇ ಆದ ವಿಶೇಷ ಛಾಪು ಮೂಡಿಸಿದ್ದಾರೆ. ಸೂರಿಯವರು ಒಂದು ಬಾರಿ ಶಾಸಕರಾಗಿದ್ದರು. ಈ ಇಬ್ಬರು ಧೀಮಂತ ನಾಯಕರೂ ಕರ್ನಾಟಕದ ದುಡಿಯುವ ವರ್ಗದ ಚಳುವಳಿಗೆ ಮಹತ್ವದ ಕೊಡುಗೆ ನೀಡಿದ್ದಾರೆ. ಬರುವ ಸೆಪ್ಟೆಂಬರ್ ತಿಂಗಳಿಗೆ ಕಾಮ್ರೇಡ್ ಕೃಷ್ಣನ್ ಮಡಿದು ಎರಡು ವರ್ಷಗಳಾದರೂ ರಾಜ್ಯ ಸರ್ಕಾರವಾಗಲಿ, ಬೆಂಗಳೂರು ಮಹಾ ನಗರಪಾಲಿಕೆಯಾಗಲಿ ಅವರ ಸ್ಮರಣಾರ್ಥವಾಗಿ ಒಂದು ಸ್ಮಾರಕವನ್ನೂ ಕಟ್ಟಿಲ್ಲ. ಕಾರ್ಮಿಕ ಚಳುವಳಿಗೆ ತಮ್ಮ ಬದುಕನ್ನೇ ಮುಡುಪಿಟ್ಟು ಕಾರ್ಮಿಕರ ಜೀವನ ಮಟ್ಟವನ್ನು ಸುಧಾರಿಸಲು ಹೋರಾಡಿ, ತ್ಯಾಗ ಮಾಡಿರುವ ನಾಯಕರನ್ನು ಈ ಸಮಾಜ ಗುರುತಿಸದೇ ಇರುವುದು ಒಂದು ದುರಂತ ಎನ್ನಬೇಕು. ನಮ್ಮ ಹೈಟೆಕ್ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ಸೂರಿಯವರು ನಿಧನರಾದಾಗ ಅವರ ಅಂತಿಮ ದರ್ಶನಕ್ಕೆ ಬಂದಿದ್ದರು. ಅಷ್ಟು ಸಮಯ ಅವರಿಗೆ ದೊರಕಿದ್ದು ನಿಜಕ್ಕೂ ಅಚ್ಚರಿಯೇ ! ಕೃಷ್ಣನ್ ತೀರಿಕೊಂಡಿದ್ದಾಗ ಈ ಸಮಯಾಭಾವ ಅವರಿಗೆ ವಿಪರೀತವಾಗಿತ್ತು. ಧೀರುಭಾಯಿ ಅಂಬಾನಿಯನ್ನು ಬೊಂಬಾಯಿ ಆಸ್ಪತ್ರೆಯಲ್ಲಿ ನೋಡಲು ಸಾಲುಗಟ್ಟುವ ನಮ್ಮ ರಾಜ್ಯದ ಮಂತ್ರಿಗಳಿಗೆ ಕೃಷ್ಣನ್ ಅವರ ಪರಿಚಯ ಮರೆತೇ ಹೋಗಿತ್ತು. ಅದೇನೇ ಇರಲಿ, ಈ ಇಬ್ಬರು ನಾಯಕರು ಕ್ರಾಂತಿಕಾರಿ ಚಳುವಳಿಗೆ ತಮ್ಮನ್ನು ಅರ್ಪಿಸಿಕೊಂಡು; ದುಡಿದು ಈಗ ನಮ್ಮಿಂದ ದೂರ ಸರಿದಿದ್ದಾರೆ; ಸಾವಿರಾರು ಕಾರ್ಯಕರ್ತರಿಗೆ ದಾರಿದೀಪವಾಗಿದ್ದಾರೆ. ಅವರ ಹೋರಾಟದ ಬದುಕು ನಮಗೂ, ಮುಂದಿನ ಪೀಳಿಗೆಗೂ ಸ್ಫೂರ್ತಿಯ ಸೆಲೆಯಾಗಿ ಕಮ್ಯುನಿಸ್ಟ್ ಪಕ್ಷ ಕಟ್ಟಲು ಅನುವಾಗುತ್ತದೆಂಬ ವಿಶ್ವಾಸ ನನಗಿದೆ. ಅದೇ ಈ ಧೀಮಂತ ನಾಯಕರಿಗೆ ನಾವು ಕಟ್ಟುವ ಅತ್ಯುತ್ತಮ ಸ್ಮಾರಕ.

ಎಚ್. ವಿ.ಅನಂತಸುಬ್ಬರಾವ್
೩೭, ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು-೪೦

---

*೫ನೇ ಪುಟದಿಂದ*

ಸುಷ್ಮಾದೇವಿ ಅದೇನೋ ಹೊಸ ನಿಯಮ ಜಾರಿಗೊಳಿಸಿ ಪತ್ರಿಕಾ ಮಾಧ್ಯಮದ ಕಬಂಧರ ಬಾಹುಗಳನ್ನು ಬಲಪಡಿಸಿದ್ದಾರೆಂದು ವದಂತಿ. ಮಿಶ್ರತಳಿಯ ಪ್ರತ್ಯೇಕ ಘಟಕಗಳಾದ ತೆಲುಗು ದೇಶಂ, ಮಮತಾ, ಮುಂತಾದವರು ಸರ್ಕಾರದಲ್ಲಿದ್ದು ಅದಕ್ಕೆ ಅನುಮತಿ ನೀಡಿದ್ದಾರೆ; ಆದರೆ ಲೋಕಸಭೆಯ ಚರ್ಚೆಗಳಲ್ಲಿ ಅದನ್ನು ವಿರೋಧಿಸುವ ರಾಷ್ಟ್ರಪ್ರಜ್ಞೆ ಒಮ್ಮೆಲೇ ಅವರನ್ನಾವರಿಸುತ್ತದೆ. ನಮ್ಮ ಅ. ನ. ಕೃಷ್ಣರಾಯರು ಪೊಲೀಸ್ ಕಾನ್‌ಸ್ಟೇಬಲ್‌ಗಳನ್ನು ಬಹಳ ಗೌರವದಿಂದಲೇ ಕನಿಷ್ಠ ಬಿಲ್ಲೆಗಳು ಎನ್ನುತ್ತಿದ್ದರು. ಅಂದರೆ, ಕನಿಷ್ಠ ಮೊತ್ತದ ಬಿಲ್ಲುಗಳಿಂದಲೇ ತೃಪ್ತಿ ಹೊಂದುವವರು ಎಂಬುದು ಅದರರ್ಥ. ಅಂತಹ ಸ್ವಯಂಸೇವಕ ಕನಿಷ್ಠ ಬಿಲ್ಲೆಯೊಬ್ಬರು ದೇಶದ ಉಪರಾಷ್ಟ್ರಪತಿ ಆಗಬೇಕೆಂದು ವಾಜಪೇಯಿ ಹೇಳಿದರೆ ನಮ್ಮ ಮಿಶ್ರತಳಿ ಕೋಲೆಬಸವಗಳು ತಲೆದೂಗುತ್ತವೆ. ಆದರೆ ಸಂಘ ಪರಿವಾರದ ಕುಕೃತ್ಯಗಳನ್ನು ಖಂಡಿಸುತ್ತೇವೆ ಎಂದೂ ಈ ಗೂಳಿಗಳು ಗುಟುರು ಹಾಕುತ್ತವೆ. ಗುಜರಾತಿನ ಮೋದಿ ಮಾಡಿದ್ದು ಅಸಹ್ಯಕರವೆಂದು ಹೇಳುತ್ತಲೇ ಆತನ ಶೀಘ್ರ ಚುನಾವಣಾ ಪ್ರಸ್ತಾವಕ್ಕೆ ಅಂಕಿತ ಹಾಕುತ್ತವೆ. ಮುರಳಿ ಮನೋಹರ ಜೋಶಿ ಸದ್ದಿಲ್ಲದೆ ನಡೆಸುವ ವಿಷಪ್ರಸಾರಣಾ ಯೋಜನೆಗಳನ್ನು ಈ ಮಿಶ್ರತಳಿ ಸದಸ್ಯರು ಗಮನಿಸುವ ಗೋಜಿಗೇ ಹೋಗಿಲ್ಲ. ವೆಂಕಯ್ಯನಾಯಿಡು ಹೇಳುತ್ತಾರೆ: 'ತಡೆಯಿರಿ, ನಮಗೆ ಸ್ವತಂತ್ರ ಬಹುಮತ ದೊರೆತಾಗ ನಮ್ಮ ನಿಜರೂಪ ತೋರಿಸುತ್ತೇವೆ,' ಎಂದು; ಆದರೆ ಚಂದ್ರಬಾಬು ನಾಯಿಡು ಕಿವಿ ತೂತಾದ್ದರಿಂದ ಅದು ಆತನಿಗೆ ಕೇಳಿಸುವುದೇ ಇಲ್ಲ. ಕಾಂಗ್ರೆಸ್ ಪೆಡಂಭೂತಕ್ಕೆ ಹೆದರಿ ಈ ಮಿಶ್ರತಳಿಯು ತನ್ನ ಮಿಶ್ರಣದ ಲಕ್ಷಣವನ್ನು ಕಳೆದುಕೊಂಡಿದೆಯೇ ? ಅಥವಾ, ''ಫ್ಯಾಸಿಸ್ಟ್'' ಎಂಬುದು ಎಂಥಾ ಸುಂದರ ಪದ ಎಂಬ ಮೋಹಕ್ಕೆ ಸಿಲುಕಿ ಸಂಮಿಶ್ರ ಸರ್ಕಾರದ ಪಕ್ಷಗಳು ಕೋಲೆ ಬಸವಗಳಾಗಿವೆಯೇ ?

ದೆಹಲಿಯವರಿಗೆ ದೊರೆಯದ ಉತ್ತರ ನಮಗೇಕೆ ಎನ್ನಲಾಗದು, ಅಲ್ಲವೆ?



'ಜಾಗತೀಕರಣ'ವೆಂಬ ಮುಸುಕಿನಲ್ಲಿ ನಡೆಯುತ್ತಿರುವ ಸಾಮ್ರಾಜ್ಯಶಾಹಿ ಆಕ್ರಮಣ ಮೊದಲಿಗೆ ಬಲಿ ತೆಗೆದುಕೊಳ್ಳುತ್ತಿರುವುದು ಪರ್ಯಾಯ ಸೃಷ್ಟಿಯ ಸಾಧ್ಯತೆಗಳನ್ನು ಹಾಗೂ ಆ ಮೂಲಕ ನಿಧಾನವಾಗಿ ಬಲಿ ತೆಗೆದುಕೊಳ್ಳುವುದು ಪರ್ಯಾಯ ಸೃಷ್ಟಿಯ ಆಕಾಂಕ್ಷೆಯನ್ನು. – ಹೀಗಾಗಿ 'ಜಾಗತೀಕರಣ'ದಿಂದಾಗಿ ಮೂರನೇ ಜಗತ್ತಿನ ಪ್ರಭುತ್ವಗಳು ಒಂದೆಡೆ ಸಾಮ್ರಾಜ್ಯಶಾಹಿಗಳ ದಲ್ಲಾಳಿಗಳಾಗಿಯೂ, ಮತ್ತೊಂದೆಡೆ ತಮ್ಮ ಜನತೆಯ ಮಟ್ಟಿಗೆ ದಮನ ಮಾಡುವ ಪೊಲೀಸರಿಗಾಗಿ ಮಾತ್ರ ಉಳಿಯುತ್ತಿದ್ದಾರೆ. ಇದಕ್ಕಿಂತ ಬಹುಮುಖ್ಯವಾದ ಹಾಗೂ ದುರಂತಕಾರಿ ಬೆಳವಣಿಗೆಯೆಂದರೆ ಪ್ರಗತಿಪರ ಶಕ್ತಿಗಳು ಹಾಗೂ ವ್ಯಕ್ತಿಗಳು ಪರ್ಯಾಯ ಸಮಾಜ ವ್ಯವಸ್ಥೆಯ ನೆಲಗಟ್ಟಿನಿಂದ ಜಾಗತೀಕರಣವನ್ನೂ ಪ್ರತಿಭಟಿಸುವುದರ ಬದಲು 'ಪರ್ಯಾಯವಿಲ್ಲವೆಂಬ' ವಾದಕ್ಕೆ ಜೋತು

# ವಿಷಾದನೀಯ ಕುರುಡು...!

ಬೀಳುತ್ತಿರುವುದು, ಅಂತಹ ಸಾಧ್ಯತೆಗಳೆಡೆಗೆ ಕುರುಡಾಗುತ್ತಿರುವುದು ಹಾಗೂ ಜಾಗತೀಕರಣಕ್ಕೆ ಬಲಿಯಾದವರ ಆಕ್ರಂದನ ಹಾಗೂ ನೋವುಗಳನ್ನು ಕಾಣಲು-ಕೇಳಲು ಅಸಮರ್ಥರಾಗುತ್ತಿರುವುದು. ಈ ಪ್ರಕ್ರಿಯೆಗೆ ತಕ್ಕ ಉದಾಹರಣೆಯಂತಿದೆ ಪಿ. ವಿ. ಲೋಕೇಶ್‌ರವರ ಲೇಖನ.

ಕುದುರೆಮುಖ ಗಣಿಗಾರಿಕೆಯ ಸಮಸ್ಯೆಯಿರಲಿ, ರಾಷ್ಟ್ರೀಯ ಉದ್ಯಾನದ ಸಮಸ್ಯೆಯಿರಲಿ, ಬಿಎಂಐಸಿ ಯೋಜನೆಯ ವಿಷಯವೇ ಇರಲಿ, ನರ್ಮದಾ, ಬಾಗೂರು - ನವಿಲೆ, ಬಾಲ್ಕೊ ಖಾಸಗೀಕರಣ, ಕೋಮುವಾದ, ಗುಜರಾತ್ ಹತ್ಯಾಕಾಂಡ, ಮತ್ತಿನ್ಯಾವುದೇ ವಿಷಯವೇ ಇರಲಿ ಪರ್ಯಾಯ ಸಮಾಜವಾದಿ ವ್ಯವಸ್ಥೆ, ಪರ್ಯಾಯ ಆರ್ಥಿಕತೆ ಹಾಗೂ ರಾಜಕೀಯ ನೆಲೆಗಟ್ಟಿನಲ್ಲಿ ನಿಂತು ವಿಶ್ಲೇಷಿಸಿದರೆ ಮಾತ್ರ ಸಮಸ್ಯೆಯ ನಿಜವಾದ ಹೂರಣ ಹಾಗೂ ಹೋರಾಟದ ದಿಕ್ಕು ಅರ್ಥವಾದೀತು. ವ್ಯವಸ್ಥೆಯ ಚೌಕಟ್ಟಿನೊಳಗೆ ನಿಂತು ಮಾಡುವ ವಿಮರ್ಶೆ, ಜೇಮ್ಸ್ ಪೆಟ್ರಾಸ್ ಹೇಳುವಂತೆ, ನಮ್ಮನ್ನು ನಮಗೆ ತಿಳಿಯದಂತೆಯೇ ವ್ಯವಸ್ಥೆಯ ಭಾಗವನ್ನಾಗಿಸುತ್ತದೆ, ವ್ಯವಸ್ಥೆಯ ವಕ್ತಾರರನ್ನಾಗಿಸುತ್ತದೆ. ಆದ್ದರಿಂದ ಮೇಲಿನ ಎಲ್ಲಾ ಸಮಸ್ಯೆಗಳು ಸಾರಾಂಶದಲ್ಲಿ ಜಾಗತೀಕರಣದ ಈ ಕಾಲಘಟ್ಟದಲ್ಲಿ ಭಾರತ ಪ್ರಭುತ್ವದ ವರ್ಗಸ್ವಭಾವ ಹಾಗೂ ಸ್ವರೂಪವೇನು ಮತ್ತು 'ಜಾಗತೀಕರಣ' ಅರ್ಥಾತ್ 'ಸಾಮ್ರಾಜ್ಯಶಾಹಿ'ಯನ್ನು ನಾವು ಹೇಗೆ ಅರ್ಥೈಸಿಕೊಳ್ಳುತ್ತೇವೆ ಎಂಬ ಪ್ರಶ್ನೆಯೇ ಆಗಿರುತ್ತದೆ. ಈ ನೆಲೆಯಲ್ಲಿ ನಾವು ಕಟ್ಟಿಕೊಳ್ಳುವ ನಿಲುವೇ ಅದರ ನಿರ್ದಿಷ್ಟತೆಯಲ್ಲಿ ನಮ್ಮ ಪ್ರತಿಕ್ರಿಯೆಗಳ ದಿಕ್ಕನ್ನು ನಿರ್ದೇಶಿಸುತ್ತದೆ.

ಕುದುರೆಮುಖ ಉದ್ಯಾನ ವಿರೋಧಿ ಹೋರಾಟದ ಬಗ್ಗೆ ಲೋಕೇಶರು ಇನ್ನು ಲೇಖನದುದ್ದಕ್ಕೂ ಅಳವಡಿಸಿಕೊಂಡಿರುವ ವ್ಯಂಗ್ಯಾತ್ಮಕ ಧೋರಣೆ ಅನಾರೋಗ್ಯಕರವೆಂದಷ್ಟೇ ಹೇಳಿ, ಅವರು ಎತ್ತಿರುವ ಪ್ರಶ್ನೆಗಳಿಗೆ ಸಂಕ್ಷಿಪ್ತ ಪ್ರತಿಕ್ರಿಯೆಯನ್ನು ನೀಡುವ ಪ್ರಯತ್ನ ಮಾಡುತ್ತೇನೆ.

''ರಾಷ್ಟ್ರೀಯ ಉದ್ಯಾನದಲ್ಲಿ ಔಷಧೀಯ ಸಸ್ಯರಾಶಿಯೊಂದಿಗೆ ಅಪಾರ ಹಾಗೂ ಅಪೂರ್ವ ವನ್ಯ ಸಂಪತ್ತಿದೆ. ಅದನ್ನು ಕಾನೂನಿನ ರಕ್ಷಣೆಯಿಲ್ಲದೆ ಕೇವಲ ಆದಿವಾಸಿಗಳಿಂದ ರಕ್ಷಿಸಿಕೊಳ್ಳಲು ಸಾಧ್ಯವಿಲ್ಲ. ಸಂವಿಧಾನ ಹಾಗೂ ಕೋರ್ಟುಗಳಿದ್ದಾಗಲೇ ಹಣದಾಹಿ ಬಲಾಢ್ಯರು ಲೂಟಿದಂಗೆ ಮಾಡುತ್ತಿರುವಾಗ ಸರ್ಕಾರದ ಜವಾಬ್ದಾರಿ ಇಲ್ಲದೆ ಅರಣ್ಯಸಂಪತ್ತಿನ ರಕ್ಷಣೆ ಸಾಧ್ಯವಿಲ್ಲವಾದ್ದರಿಂದ ರಾಷ್ಟ್ರೀಯ ಉದ್ಯಾನಗಳು ಬೇಕೇಬೇಕು'' – ಎಂಬುದು ಲೋಕೇಶರ ಮೊದಲನೆಯ ವಾದ.

ಇಡೀ ದೇಶವನ್ನೇ ಕಾನೂನುಬದ್ಧವಾಗಿ ಅಥವಾ ಕಾನೂನುಗಳನ್ನು ಬದಲಾಯಿಸಿ ಅಥವಾ ಹೊಸ ಕಾನೂನನ್ನು ರಚಿಸಿ ಸರ್ಕಾರಗಳು ಹರಾಜು ಹಾಕುತ್ತಿರುವಾಗ ಮತ್ತು ಅದನ್ನು ನ್ಯಾಯಾಲಯಗಳು ಕಾನೂನು ಸಮ್ಮತವೆಂದು ಮಾನ್ಯ ಮಾಡುತ್ತಿರುವಾಗ, ಅದರಿಂದಾಗಿ ಉದಾರವಾದಿ ಬುದ್ಧಿಜೀವಿಗಳೇ ಪ್ರಭುತ್ವ 'ಕಾರ್ಪೊರೇಟ್ ಶಕ್ತಿಗಳ ಏಜೆಂಟ್' ಎಂದು ಹೇಳುತ್ತಿರುವಾಗ ಕಾನೂನಿನ ಬಗ್ಗೆ ಹಾಗೂ ಸರ್ಕಾರದ ಜವಾಬ್ದಾರಿಗಳ ಬಗ್ಗೆ ಭ್ರಮೆಗಳು ಕೇವಲ ಅನುಕಂಪಿಸಿ ತಳ್ಳಿಹಾಕುವಂತಹುದಲ್ಲ. ರಾಷ್ಟ್ರೀಯ ಉದ್ಯಾನಗಳ ಹಿಂದಿನ ಜಾಗತಿಕ ರಾಜಕೀಯ-ಆರ್ಥಿಕ ಹಿತಾಸಕ್ತಿಗಳ ಬಗೆಗೆ ಕೆಲವು ಘನ-ಗಹನ ವಾಸ್ತವಾಂಶಗಳನ್ನು ಗಮನಿಸೋಣ :

**ಕುದುರೆಮುಖ ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟದ ಕುರಿತು ಕಳೆದ ಸಂಚಿಕೆಯಲ್ಲಿ ಶ್ರೀ ಪಿ. ವಿ. ಲೋಕೇಶ್ ಬರೆದ ಲೇಖನಕ್ಕೆ ಒಂದು ಪ್ರತಿಕ್ರಿಯೆ.**

**ಶಿವಸುಂದರ್**

ರಾಷ್ಟ್ರೀಯ ಉದ್ಯಾನಗಳೆಂಬ ಪರಿಕಲ್ಪನೆ ೧೨೦ ವರ್ಷಗಳಷ್ಟು ಹಳೆಯದು. ೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಅಮೇರಿಕದಲ್ಲಿ ರಚಿಸಲಾದ ಯೆಲ್ಲೋಸ್ಟೋನ್ ನ್ಯಾಷನಲ್ ಪಾರ್ಕ್ ವಿಶ್ವದ ಮೊದಲ ರಾಷ್ಟ್ರೀಯ ಉದ್ಯಾನ. ಆ ನಂತರದ ವರ್ಷಗಳಲ್ಲಿ ಬ್ರಿಟಿಷರಂತಹ ವಸಾಹತುಶಾಹಿಗಳು ಭಾರತದಂತಹ ವಸಾಹತುಗಳಲ್ಲಿ ಹಲವಾರು ಮೀಸಲು ಅರಣ್ಯಗಳನ್ನು ಕಾದಿರಿಸಿಟ್ಟರು: ಶಿಕಾರಿ, ವನಪ್ರವಾಸದಂತಹ ವಿಲಾಸಿ ಉಪಭೋಗಗಳಿಗಾಗಿ.

೧೯೪೭ರ ನಂತರವೂ ಅರಣ್ಯ ಸಂಪತ್ತಿನ ರಕ್ಷಣೆ ನಮ್ಮ ಕಾನೂನು ನಿರ್ಮಾತೃಗಳ-ಪಾಲಕರ ಕಾಳಜಿಯ ವಿಷಯವೇನೂ ಆಗಿರಲಿಲ್ಲ. ಅರಣ್ಯ ಸಂಪತ್ತಿರುವುದೇ ಕೈಗಾರಿಕೆಗಳ ಬಳಕೆಗೆ ಎಂಬ ತಿಳುವಳಿಕೆಯೇ ಅರಣ್ಯ ನೀತಿಗಳ ಹಿಂದಿನ ಮಾರ್ಗಸೂಚಿಯಾಗಿತ್ತು. ೧೯೭೨ರಲ್ಲಿ ವನ್ಯಜೀವಿ ರಕ್ಷಣಾ ಕಾಯಿದೆ ರಚಿತವಾಗುವ ತನಕ ಅರಣ್ಯ ಸಂಪತ್ತಿನ ರಕ್ಷಣೆಯ ಮಾತೂ ಅರಣ್ಯ ನೀತಿಯಲ್ಲಿ ಕೇಳಿಬಂದಿರಲಿಲ್ಲ. ೧೯೭೨ರ ಕಾಯಿದೆಯೂ ಅಳಿವಿನ ಅಂಚಿನಲ್ಲಿರುವ ಪ್ರಾಣಿಗಳ ರಕ್ಷಣೆಗೆ ಅನುವು ಮಾಡಿಕೊಟ್ಟವೇ ವಿನಃ ಆಗಲೂ ಈಗ ಸರ್ಕಾರ ಹೇಳುತ್ತಿರುವ 'ಪರಿಸರ ರಕ್ಷಣೆ' ಅದರ ತಿಳುವಳಿಕೆಯಲ್ಲಿ ಇರಲಿಲ್ಲ. ಹೀಗಾಗಿ ೧೯೭೨ರ ನಂತರ ೮೦ರ ದಶಕದ ಪ್ರಾರಂಭದವರೆಗೆ ಭಾರತದಲ್ಲಿ ಕೇವಲ ೨೦-೨೫ ನ್ಯಾಷನಲ್ ಪಾರ್ಕ್‌ಗಳು, ಅದಕ್ಕೂ ಹೆಚ್ಚಿನ ಸಂಖ್ಯೆಯ ಅಭಯಾರಣ್ಯಗಳು ಹುಟ್ಟಿಕೊಂಡವು. ವಿಶ್ವಾದ್ಯಂತ ೩೦೦೦ ರಾಷ್ಟ್ರೀಯ ಉದ್ಯಾನಗಳಿದ್ದವಷ್ಟೇ.

ಆದರೆ, ೧೯೮೦ರ ನಂತರ, ಪ್ರಪಂಚಾದ್ಯಂತ ಹಾಗೂ ಅದೇ ರೀತಿ ಭಾರತದಲ್ಲೂ ರಾಷ್ಟ್ರೀಯ ಉದ್ಯಾನಗಳ ಸಂಖ್ಯೆ ಹೆಚ್ಚಿತು. ೨೦ನೇ ಶತಮಾನದ ಕೊನೆಯ ವೇಳೆಗೆ ವಿಶ್ವದಾದ್ಯಂತ ೪೫,೦೦೦ ರಾಷ್ಟ್ರೀಯ ಉದ್ಯಾನಗಳಿದ್ದವು. ಹಾಗೂ ಭಾರತದಲ್ಲಿ ೭೫ ನ್ಯಾಷನಲ್ ಪಾರ್ಕ್‌ಗಳನ್ನು ಒಳಗೊಂಡಂತೆ ೪೫೦ಕ್ಕೂ ಹೆಚ್ಚು ರಕ್ಷಿತ ಪ್ರದೇಶಗಳು ಇದ್ದವು. ಅಷ್ಟು ಮಾತ್ರವಲ್ಲ, ಈ ಹಿಂದೆ

ನಿರ್ದಿಷ್ಟ ಪ್ರಾಣಿ-ಪಕ್ಷಿಗಳನ್ನು ರಕ್ಷಿಸಲು ರಚಿತವಾಗಿದ್ದ ನ್ಯಾಷನಲ್ ಪಾರ್ಕ್‌ಗಳ ಉದ್ದೇಶಗಳು ಪುನರ್ ನಿರ್ವಚನಗೊಳಿಸಲ್ಪಟ್ಟವು. ಈ ಎಲ್ಲಾ ರಕ್ಷಿತ ಪ್ರದೇಶಗಳ ಘೋಷಿತ ಉದ್ದೇಶ 'ಜೀವ ವೈವಿಧ್ಯತೆಗಳ' ರಕ್ಷಣೆ, ತಾಳಿ-ಬಾಳುವ ಬಳಕೆ, ಇತ್ಯಾದಿಗಳೇ ಆಗಿದ್ದವು.

ಅರಣ್ಯವೆಂದರೆ ಕೈಗಾರಿಕೆಗಳ ಬಳಕೆಗೆ ಮರಮುಟ್ಟು ಸರಬರಾಜು ಮಾಡುವ ಸಂಪನ್ಮೂಲವೆಂಬ ಗ್ರಹಿಕೆಯಿಂದ ಇದ್ದಕ್ಕಿದ್ದಂತೆ 'ಜೀವ ವೈವಿಧ್ಯತೆ ರಕ್ಷಣೆ' ಎಂಬ ಗ್ರಹಿಕೆ ಅಮೆರಿಕ ಹಾಗೂ ಭಾರತದಂತಹ ದೇಶಗಳಿಗೆ ಒಟ್ಟಿಗೆ ಮೂಡಿರುವುದು ಕಾಕತಾಳೀಯವಲ್ಲ. ಬದಲಾಗುತ್ತಿರುವ ರೀತಿಗಳು, ಸಾಮ್ರಾಜ್ಯಶಾಹಿ ಶೋಷಣೆಯ ಲೂಟಿ, ತಂತ್ರಜ್ಞತೆ ಹಾಗೂ ಬದಲಾಗುತ್ತಿರುವ ಅಗತ್ಯಗಳನ್ನು ಗ್ರಹಿಸಿಕೊಳ್ಳದೆ ಅರಣ್ಯದ ಬಗೆಗೆ ಸರ್ಕಾರಗಳ ಬದಲಾದ ನಿಲುವುಗಳನ್ನು ಅರಿತುಕೊಳ್ಳಲು ಸಾಧ್ಯವಿಲ್ಲ.

೧೯೬೦ರ ದಶಕದ ಕೊನೆಯ ವೇಳೆಗೆ ಪಾಶ್ಚಿಮಾತ್ಯ ದೇಶಗಳ ಪ್ರಯೋಗಾಲಯಗಳಲ್ಲಿ ಜೈವಿಕ ತಂತ್ರಜ್ಞಾನದ ಮೂಲಾಂಶಗಳು ಸಿದ್ಧಗೊಂಡಿದ್ದವು. ೧೯೭೦ರ ಕೊನೆಯ ವೇಳೆಗೆ ಅಮೆರಿಕ ಹಾಗೂ ಯುರೋಪುಗಳಲ್ಲಿ ೨೦ ಖಾಸಗೀ ಕಂಪನಿಗಳು ಜೀವ ವೈವಿಧ್ಯತೆಯನ್ನು ಆಧರಿಸಿ, ಜೈವಿಕ ತಂತ್ರಜ್ಞಾನವನ್ನು ಬಳಸಿ ಉತ್ಪಾದಿಸಿದ ಕೃಷಿ, ಔಷಧಿ ಹಾಗೂ ಇತರ ಸರಕುಗಳಲ್ಲಿ ಮಿಲಿಯಾಂತರ ಡಾಲರ್ ವ್ಯವಹಾರ ಪ್ರಾರಂಭಿಸಿದ್ದವು. ೧೯೮೦ರ ಕೊನೆಯ ವೇಳೆಗೆ ಫೈಜರ್, ಮೊನ್ಸಾಂಟೋ, ಸೀಬಾ-ಗೈಗಿ, ಇ-ಮರ್ಕ್, ಎಲಿ-ಲಿಲ್ಲಿಯಂತಹ ೩೦೦ಕ್ಕೂ ಹೆಚ್ಚು ಔಷಧಿ ಹಾಗೂ ಕೃಷಿ ಕ್ಷೇತ್ರದ ದೈತ್ಯ ಬಹುರಾಷ್ಟ್ರೀಯ ಕಂಪನಿಗಳು ಜೈವಿಕ ತಂತ್ರಜ್ಞಾನ ಕ್ಷೇತ್ರಕ್ಕೆ ಲಗ್ಗೆ ಹಾಕಿದ್ದವು. ಆದರೆ ಜೈವಿಕ ತಂತ್ರಜ್ಞಾನ ಆ ಕಂಪನಿಗಳ ಬಳಿ ಇದ್ದರೂ ಅದಕ್ಕೆ ಬೇಕಾದ 'ಜೀವ ವೈವಿಧ್ಯತೆ'ಯೆಂಬ ಕಚ್ಚಾ ಸರಕು ಲಭ್ಯವಿದ್ದದ್ದು ಮಾತ್ರ ಭಾರತದಂತಹ ಬಡರಾಷ್ಟ್ರಗಳಲ್ಲಿ. ಹೀಗಾಗಿ ಮೂರನೇ ಜಗತ್ತಿನ ಅರಣ್ಯ ಸಂಪತ್ತಿನ ಸಂರಕ್ಷಣೆಯ ಬಗ್ಗೆ ೮೦ರ ಕೊನೆಯ ವೇಳೆಗೆ ಅಮೆರಿಕದಂತಹ ದೇಶಗಳು ಹುಯಿಲೆಬ್ಬಿಸಿದವು. ಅದು ವಿಶ್ವದ ಸಂಪತ್ತಾದ್ದರಿಂದ ಅದರ 'ರಕ್ಷಣೆ'ಯ ಬಗ್ಗೆ ಆಯಾ ರಾಷ್ಟ್ರ ಪ್ರಭುತ್ವಗಳಷ್ಟೇ ವಿಶ್ವ ಸಮುದಾಯದ ಅರ್ಥಾತ್ ಅಮೆರಿಕ ನೇತೃತ್ವದ ಸಾಮ್ರಾಜ್ಯಶಾಹಿಗಳಿಗೂ ಹಕ್ಕು ಹಾಗೂ ನಿಯಂತ್ರಣ ಪ್ರತಿಪಾದಿಸಿದ್ದು ಆ ಮೂಲಕ ಅವರು ಮೂರನೇ ಜಗತ್ತಿನ ಜೀವವೈವಿಧ್ಯ ಸಂಪತ್ತನ್ನು ಲೂಟಿ ಮಾಡಲು ಅನಿರ್ಬಂಧಿತ ಪರವಾನಗಿ ಪಡೆಯುವ ಹುನ್ನಾರ ನಡೆಸಿದವು.

ಈ ರಾಜಕೀಯ-ಆರ್ಥಿಕ ಆಸಕ್ತಿಗಳ ಹಿನ್ನೆಲೆಯಲ್ಲೇ ೧೯೯೨ರಲ್ಲಿ ರಿಯೋ-ಡಿ-ಜನೈರೋನಲ್ಲಿ ವಿಶ್ವಸಂಸ್ಥೆಯ ನೇತೃತ್ವದಲ್ಲಿ ವಿಶ್ವದ ಮೊದಲ ಪೃಥ್ವಿ ಸಮ್ಮೇಳನ ನಡೆಯಿತು. ಅಲ್ಲಿ ಜೈವಿಕ ತಂತ್ರಜ್ಞಾನದ ದೈತ್ಯ ಕಂಪನಿಗಳು ತಮ್ಮ ಆಸಕ್ತಿಗಳನ್ನು ತಮ್ಮ ಪ್ರತಿನಿಧಿ ಸರ್ಕಾರಗಳ ಮೂಲಕ ಬಲವಾಗಿ ಪ್ರತಿಪಾದಿಸಿದುವು. ಮೂರನೇ ಜಗತ್ತಿನ ದೇಶಗಳ ಸರ್ಕಾರಗಳು ತಮ್ಮ ಗುಣಸ್ವಭಾವಕ್ಕೆ ತಕ್ಕಂತೆ ಅದಕ್ಕೆ ಅವಕಾಶ ಕೊಡುವ ರಾಜಿ ಸೂತ್ರಗಳಿಗೆ ಒಪ್ಪಿಗೆ ನೀಡಿದವು. ೧೯೯೧ರಲ್ಲಾಗಲೇ ಭಾರತದಲ್ಲಿ ಜಾಗತೀಕರಣ, ಖಾಸಗೀಕರಣ, ಉದಾರೀಕರಣ ನೀತಿಗಳು ಜಾರಿಗೊಂಡು ಬಹುರಾಷ್ಟ್ರೀಯ ಕಂಪನಿಗಳ ಲೂಟಿಗೆ ಭಾರತದ ದಿಡ್ಡಿ ಬಾಗಿಲನ್ನು ತೆರೆದಿಟ್ಟಿತ್ತು. ಅದೇ ರೀತಿ ೧೯೯೨ರ ರಿಯೋ

> ## ಗುಜರಾತ್
>
> ಗಾಂಧೀ ಹುಡುಕಿ
> ಗುಜರಾತಿಗೆ ಹೋದ ನಾನು
> ಕಂಡಿದ್ದಲ್ಲಿ ತುಂಡು ಕನ್ನಡಕ !
>
> ■ ಹರ್ಷಾದ್ ವರ್ಕಾಡಿ

ಸಮ್ಮೇಳನಕ್ಕೆ ಸಹಿ ಹಾಕುವ ಮೂಲಕ ಅರಣ್ಯಗಳನ್ನು, ಜೀವ ಸಂಪತ್ತನ್ನು ವಿದೇಶಿ ಲೂಟಿಗೆ ತೆರೆದಿಡಲಾಯಿತು.

೧೯೯೨ರ ರಿಯೋ ಸಮ್ಮೇಳನದ ಮೂರು ಮುಖ್ಯ ಅಂಶಗಳು ಪರಿಸರ ರಕ್ಷಣೆ, ತಾಳಿಕೆಯ ಬಳಕೆ ಮತ್ತು ಲಾಭ ಹಂಚಿಕೆ. ಇದಕ್ಕೆ ಭಾರತವು ಸಹಿ ಹಾಕಿದೆ. ಇದರ ಸಾರಾಂಶ ವಿಷ್ಟೆ: ಜೀವ ವೈವಿಧ್ಯತೆಯ ಲೂಟಿಗೆ ಅನಿರ್ಬಂಧಿತ ಅವಕಾಶ ಕೇಳುತ್ತಿದ್ದ ದೈತ್ಯ ಬಹುರಾಷ್ಟ್ರೀಯ ಕಂಪನಿಗಳು ಆ ಅವಕಾಶ ಪಡೆಯುತ್ತವೆ. ಆದರೆ ಅದಕ್ಕಾಗಿ ಒಂದಷ್ಟು ಶುಲ್ಕವನ್ನು ಹಾಗೂ ರಾಯಧನವನ್ನು ಸರ್ಕಾರಕ್ಕೆ ಸಲ್ಲಿಸಬೇಕು. ಕೆಲವು ಬಡದೇಶಗಳು (ಭಾರತವಲ್ಲ!) ತಾವು ಜೀವ ವೈವಿಧ್ಯತೆಯ ಬಳಕೆಗೆ ಅವಕಾಶ ಮಾಡಿಕೊಟ್ಟರುವಂತೆ ಶ್ರೀಮಂತ ದೇಶಗಳು ಜೈವಿಕ ತಂತ್ರಜ್ಞಾನವನ್ನು ಬಡದೇಶಗಳಿಗೆ ಹಸ್ತಾಂತರಿಸಬೇಕೆಂದು ಪ್ರತಿಪಾದಿಸಿದರೂ ಸಾಮ್ರಾಜ್ಯಶಾಹಿ ದೇಶಗಳು ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಬದಲಿಗೆ ಜೀವ ವೈವಿಧ್ಯತೆಯ ಮೇಲೂ ವಿಶ್ವ ವ್ಯಾಪಾರಿ ವ್ಯವಸ್ಥೆ ಒದಗಿಸಿರುವ 'ಪೇಟೆಂಟ್' ಅಸ್ತ್ರ ಬಳಸಿ ತಮ್ಮದಾಗಿಸಿಕೊಂಡವು. ಎಲ್ಲಕ್ಕಿಂತ ಹೆಚ್ಚಾಗಿ ಈಗ ಅಮೆರಿಕದ ವಿವಿಧ ವಂಶತಳಿ ಪ್ರಯೋಗಾಲಯಗಳಲ್ಲಿ ಶೇಖರಿಸಿಟ್ಟಿರುವ ಪ್ರಪಂಚದ ೬ ಲಕ್ಷ ಸಸ್ಯ ವಂಶತಳಿಗಳು (ಅದರಲ್ಲಿ ೭,೦೦೦ದಷ್ಟು ಭಾರತದಿಂದ ಸಂಗ್ರಹಿಸಿರುವುದು) ಅಮೆರಿಕದ ಸಂಪತ್ತೇ ಆಗಿಬಿಟ್ಟಿರುವುದನ್ನು ಭಾರತವೂ ಸೇರಿದಂತೆ ಯಾರೂ ಪ್ರಶ್ನಿಸಲೇ ಇಲ್ಲ. ಇದೀಗ ರಿಯೋ ಸಮ್ಮೇಳನದ ಮೂಲಕ ಬಿಡಿಗಾಸಿಗೆ ಇಡೀ ಜೀವ ವೈವಿಧ್ಯತೆಯನ್ನು ಸಾಮ್ರಾಜ್ಯಶಾಹಿಗಳ ಲೂಟಿಗೆ ಒಪ್ಪಿಸಲಾಗುತ್ತಿದೆ.

ಮುಂದಿನ ಶತಮಾನದಲ್ಲಿ ವ್ಯಾಪಾರಿ ವಿನಿಮಯವಾಗುವ ಶೇ. ೪೦ರಷ್ಟು ಸರಕುಗಳು ಜೈವಿಕ ವಸ್ತುಗಳನ್ನು ಆಧರಿಸಿ ಉತ್ಪಾದಿಸಿದ ಸರಕುಗಳಾಗಿರುತ್ತವೆ. ಹೀಗಾಗಿ ಅದರ ರಕ್ಷಣೆ ಹಾಗೂ ನಿಯಂತ್ರಣ ಅಂತರರಾಷ್ಟ್ರೀಯ ಮಾರುಕಟ್ಟೆ ಶಕ್ತಿಗಳಿಗೆ ಅತ್ಯಂತ ಅಗತ್ಯ. ಕೃಷಿ, ಔಷಧಿ, ಜೈವಿಕ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಮೂರನೇ ಜಗತ್ತಿನ ಜೀವ ವೈವಿಧ್ಯತೆಗಳನ್ನು ಆಧರಿಸಿ ಉತ್ಪಾದಿಸಿದ ಸರಕುಗಳಿಗೆ ಪೇಟೆಂಟ್ ಮಾಡಿಕೊಂಡು ಈಗಾಗಲೇ ಮುಂದಿನ ಶತಮಾನದ ಭವಿಷ್ಯವನ್ನು ಸಾಮ್ರಾಜ್ಯಶಾಹಿಗಳು ವಸಾಹತೀಕರಣಗೊಳಿಸಿವೆ. ಪರಿಸರ ರಕ್ಷಣೆಯ ಹೆಸರಲ್ಲಿ ರಾಷ್ಟ್ರ ಪ್ರಭುತ್ವಗಳೇ ರಾಷ್ಟ್ರೀಯ ಉದ್ಯಾನಗಳನ್ನು ರಚಿಸಿ ನವವಸಾಹತುಶಾಹಿ ಲೂಟಿಗೆ ಅನುವು ಮಾಡಿಕೊಡುತ್ತಿವೆ. ರಾಷ್ಟ್ರೀಯ ಕಾನೂನು ವಿದ್ಯಾಲಯದ ಪ್ರೊ|| ಎನ್. ಎಸ್. ಗೋಪಾಲಕೃಷ್ಣ ಅಭಿಪ್ರಾಯಪಡುವಂತೆ ಜೀವ ವೈವಿಧ್ಯತೆಯ ರಕ್ಷಣೆಗೆ ಭಾರತ ಸರ್ಕಾರ ಇತ್ತೀಚೆಗೆ ರಚಿಸಿರುವ ಕಾನೂನು ಜೈವಿಕ ತಂತ್ರಜ್ಞಾನದ ದೈತ್ಯ ಕಂಪೆನಿಗಳ ಲೂಟಿಗೆ ಮುಕ್ತ ಪರವಾನಗಿ ಕೊಡುತ್ತದೆಯೇ ವಿನಃ ದೇಶದ ಹಿತಾಸಕ್ತಿ ರಕ್ಷಿಸುವುದಿಲ್ಲ. ''ಕುದುರೆಮುಖ ರಾಷ್ಟ್ರೀಯ ಉದ್ಯಾನದ ನಿರ್ವಹಣೆ ಯೋಜನೆಯ'' ದಸ್ತಾವೇಜು ಸಹ ಯೋಜನೆಯ ಈ ಉದ್ದೇಶವನ್ನು ಸ್ಪಷ್ಟವಾಗಿ ಹೊರಗೆಡಹುತ್ತದೆ.

ಇಂದು ಪ್ರಪಂಚದ ಇತರ ದೇಶಗಳಲ್ಲಿ ಈ ಬಗೆಯ ಮುಕ್ತ ಪರವಾನಗಿ ಪಡೆದುಕೊಂಡಿರುವ ಜೈವಿಕ ತಂತ್ರಜ್ಞಾನದ ದೈತ್ಯ ಕಂಪನಿಗಳು ವಾರ್ಷಿಕ ೨-೫ ಲಕ್ಷ ಕೋಟಿ ರೂ.ಗಳ (೫೦-೧೦೦ ಮಿಲಿಯನ್ ಡಾಲರ್) ವ್ಯವಹಾರ ನಡೆಸುತ್ತಿದೆ. ಹಲವಾರು ದೇಶಗಳ ಒಟ್ಟಾರೆ ಆದಾಯಕ್ಕೂ ಮಿಗಿಲಾದ ಲಾಭವನ್ನು ಗಳಿಸುತ್ತಾ ಬಡದೇಶಗಳ ಪ್ರಭುತ್ವವನ್ನೇ ಅಲುಗಾಡಿಸುತ್ತಿವೆ. ಫೈಜರ್ ಎಂಬ ಕಂಪನಿ ಈ ಬಗೆಯ ದಂಧೆಯಿಂದ ಕಳೆದೊಂದು ವರ್ಷದಲ್ಲಿ ೨೦,೦೦೦ ಕೋಟಿ ರೂ. ಲಾಭ ಗಳಿಸಿದೆ. ಎಲಿಲಿಲ್ಲಿ, ಇ. ಮರ್ಕ್ ಎಂಬ ದೈತ್ಯರು ಕೊಸ್ಟಾರಿಕಾ-ಮಡಗಾಸ್ಕರ್ ದೇಶಗಳನ್ನು ವಂಚಿಸಿ ದೊರಕಿಸಿಕೊಂಡ ಜೀವ ವೈವಿಧ್ಯತೆಯಿಂದ ೧೫-೨೦,೦೦೦ ಕೋಟಿ ರೂಪಾಯಿಗಳ ಲಾಭ ಸಂಚಯಿಸಿಕೊಂಡಿವೆ. ಇಂತಹ ಎಲ್ಲಾ ದೇಶಗಳಲ್ಲಿ 'ರಾಷ್ಟ್ರೀಯ ಉದ್ಯಾನ' ಬಳಕೆಯಾಗುತ್ತಿರುವುದೇ ಈ ಹೊಸ ಬಗೆಯ ಜೈವಿಕ ತಂತ್ರಜ್ಞಾನದ ಜೈವಿಕ ಸಾಮ್ರಾಜ್ಯಶಾಹಿಗೆ. ಈಗಾಗಲೇ ನೋಡಿರುವಂತೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನ್ನು ಒಳಗೊಂಡಂತೆ ಇತರ ಎಲ್ಲಾ ರಾಷ್ಟ್ರೀಯ ಉದ್ಯಾನಗಳ ನಿರ್ವಚನ ಪುನರ್‌ವ್ಯಾಖ್ಯಾನಗೊಂಡಿರುವುದೇ ಜೈವಿಕ ಸಾಮ್ರಾಜ್ಯಶಾಹಿಯ ಹಿತಗಳನ್ನು ಈಡೇರಿಸಲು. ಹೀಗಿರುವಾಗ, ರಾಷ್ಟ್ರೀಯ ಉದ್ಯಾನದ ಸಂಚು ಏನು ಎಂದು ಅರಿಯದೆ ಮುಗ್ಧವಾಗಿ ಸರ್ಕಾರಗಳನ್ನು ನಂಬುವುದು, ಲೆನಿನ್ ಹೇಳುವಂತೆ ನಮ್ಮನ್ನು ''ವಂಚನೆ ಹಾಗೂ ಆತ್ಮ ವಂಚನೆಗಳ ಮುಟ್ಠಾಳ ಬಲಿಪಶುಗಳನ್ನಾಗಿ'' ಮಾಡುತ್ತದಷ್ಟೆ.

ಇದರರ್ಥ ಪರಿಸರ ರಕ್ಷಣೆ ಆಗಬಾರದು ಎಂದೂ ಅಲ್ಲ, ಸರ್ಕಾರಗಳು ಅದರ ಬಗ್ಗೆ ಕ್ರಮ ತೆಗೆದುಕೊಳ್ಳಬಾರದೆಂದೂ ಅಲ್ಲ. ಆದರೆ ನ್ಯಾಷನಲ್ ಪಾರ್ಕ್ ಎಂಬ ಪರಿಕಲ್ಪನೆಯೇ ಒಂದು ನಿರ್ದಿಷ್ಟ ಅಂತರರಾಷ್ಟ್ರೀಯ ರಾಜಕೀಯ-ಆರ್ಥಿಕತೆಗೆ ಪೂರಕವಾಗಿ ರೂಪುಗೊಂಡಿದೆ ಹಾಗೂ ಜಾಗತೀಕರಣದ ಆಕ್ರಮಣದಲ್ಲಿ ನಮ್ಮ ಪ್ರಭುತ್ವಗಳು ಸಾಮ್ರಾಜ್ಯಶಾಹಿ ಹಿತಾಸಕ್ತಿಗೆ ಬಲಿಯಾಗುತ್ತಿರುವುದರ ಮುಂದುವರಿಕೆಯಾಗಿಯೇ ರಾಷ್ಟ್ರೀಯ ಉದ್ಯಾನಗಳು ರೂಪುಗೊಳ್ಳುತ್ತಿವೆ. ಆದ್ದರಿಂದ ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟ ಒಂದು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟವೇ ಆಗಿದೆ. ಪ್ರಗತಿಪರ ಶಕ್ತಿಗಳಿಗೆ ಇದರ ಬಗ್ಗೆ ಅಸ್ಪಷ್ಟತೆಯೂ ಇರಬಾರದು, ಗೊಂದಲವೂ ಇರಬಾರದು. ಲೋಕೇಶರಿಗಂತೂ ಇರಲೇಕೂಡದು.

ಹಾಗಾದರೆ ಜೀವ ವೈವಿಧ್ಯತೆಯ ರಕ್ಷಣೆ ಮಾಡುವುದು ಹೇಗೆ ಮತ್ತು ಯಾರು ? ಇದು ಲೋಕೇಶರ ಎರಡನೇ ಪ್ರಶ್ನೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಸಾಮ್ರಾಜ್ಯಶಾಹಿ ಪ್ರಣೀತ ಜಾಗತಿಕ ಆರ್ಥಿಕ ವ್ಯವಸ್ಥೆಯಿಂದಾಗಿ ಇಂದು ಜೀವ ವೈವಿಧ್ಯತೆಗಳು ವಿನಾಶದ ಅಂಚನ್ನು ತಲುಪಿವೆ. ಜನತೆಯ ಹಿತದೃಷ್ಟಿಯಿಂದಲೇ ಜೀವ ವೈವಿಧ್ಯತೆಯ ರಕ್ಷಣೆಯಾಗಲೇಬೇಕು. ಅದನ್ನು ಅನೂಚಾನವಾಗಿ

ರಕ್ಷಿಸುತ್ತಾ ಬಂದಿರುವುದು ಆದಿವಾಸಿಗಳೇ ವಿನಃ ಅರಣ್ಯ ಇಲಾಖೆಯಲ್ಲ. ಒಂದೆಡೆ ಅರಣ್ಯ ಇಲಾಖೆ (ಸರ್ಕಾರ) ಅಂತರರಾಷ್ಟ್ರೀಯ ಆರ್ಥಿಕ ಹಿತಾಸಕ್ತಿಗಳಿಗೆ ಬಲಿಯಾಗಿ ಕಾಡು ಕಡಿಯುತ್ತಲೇ, ಕದಿಯುತ್ತಲೇ ಬಂದಿದೆ. ೧೮೫೬ರಲ್ಲಿ ಅರಣ್ಯ ಇಲಾಖೆ ರಚನೆಗೆ ಮುನ್ನ ಶೇ. ೬೦ರಷ್ಟಿದ್ದ ಅರಣ್ಯಗಳು ಇಂದು ಶೇ. ೧೦ರಷ್ಟಕ್ಕೆ ಇಳಿದಿವೆ. ಇದಕ್ಕೆ ಕಾರಣ ಒಂದಿಬ್ಬರು ಭ್ರಷ್ಟ ಅರಣ್ಯಾಧಿಕಾರಿಗಳೂ ಅಲ್ಲ ಅಥವಾ ಒಂದಿಬ್ಬರು ಭ್ರಷ್ಟ ರಾಜಕಾರಣಿಗಳೂ ಅಲ್ಲ, ಅಥವಾ ಕೇವಲ ವೀರಪ್ಪನ್‌ಗಳಲ್ಲ. ಬದಲಿಗೆ ಸರ್ಕಾರದ ಅರಣ್ಯ ನೀತಿಯು ಒಟ್ಟಾರೆ ಸಾಮ್ರಾಜ್ಯಶಾಹಿ ಪರ ಆರ್ಥಿಕ ನೀತಿಗಳ ಭಾಗವೇ ಆಗಿದ್ದರಿಂದಲೇ ತೀವ್ರ ಅರಣ್ಯ ನಾಶಕ್ಕೆ ಕಾರಣವಾಯಿತು. ಆದ್ದರಿಂದ ಪರಿಸರ ಹಾಗೂ ಜೀವ ವೈವಿಧ್ಯತೆಯ ನಿಜವಾದ ರಕ್ಷಣೆಯು ಸಾಮ್ರಾಜ್ಯಶಾಹಿ ಆರ್ಥಿಕ-ರಾಜಕೀಯ ಚೌಕಟ್ಟಿನಿಂದ ಹೊರಬರದೆ ಸಾಧ್ಯವೇ ಇಲ್ಲ.

ಮಾನವ ಕುಲದ ವಿಕಾಸ ಇಡೀ ಪ್ರಕೃತಿಯ ವಿಕಾಸದ ಭಾಗವೇ ಆಗಿದೆ. ಹೀಗೆ ಪರಿಸರ ಸ್ನೇಹಿ ಮಾನವ ಬದುಕು ಒಟ್ಟಾರೆ ಪ್ರಕೃತಿಯ ಜೀವ ತಾಳಿಕೆ, ಜೀವ ಬಾಳಿಕೆ ಹಾಗೂ ಜೀವ ವೈವಿಧ್ಯತೆಗೆ ಕಾರಣವಾಗಿದೆ. ಆದ್ದರಿಂದ ಮನುಷ್ಯನನ್ನು ಹೊರತುಪಡಿಸಿ ಪರಿಸರ ರಕ್ಷಣೆಯನ್ನು ಕಲ್ಪಿಸಿಕೊಳ್ಳುವುದು ಕೃತಕ ಮಾತ್ರವಲ್ಲ, ಸಾಧುವೂ ಅಲ್ಲ, ಸಾಧ್ಯವೂ ಇಲ್ಲ. ಆದಿವಾಸಿಗಳ ಪರಿಸರ ಸ್ನೇಹಿ ಬದುಕು ಅರಣ್ಯ ರಕ್ಷಣೆಗೆ ಕಾರಣವಾಗಿದ್ದರೆ ಅರಣ್ಯ ಇಲಾಖೆ ಹಾಗೂ ಆ ಮೂಲಕ ಬಂಡವಾಳಶಾಹಿ ಸಾಮ್ರಾಜ್ಯಶಾಹಿ ಹಸ್ತಕ್ಷೇಪ ಅರಣ್ಯ ನಾಶಕ್ಕೆ, ಜೀವ ವೈವಿಧ್ಯತೆಯ ನಾಶಕ್ಕೆ ಕಾರಣವಾಗಿದೆ.

ಆದ್ದರಿಂದ ಇಡೀ ಸಮಾಜ ಬಂಡವಾಳಶಾಹಿ ವ್ಯವಸ್ಥೆಯಿಂದ ಮುಕ್ತವಾಗಿ ಸಮಾಜವಾದಿ ಮತ್ತು ಪರಿಸರ ಸ್ನೇಹಿ ಸಮಾಜ ವ್ಯವಸ್ಥೆಯೆಡೆ ಸಾಗದೆ ಸುಖಿ ಬಂಡವಾಳ ಶಾಹಿ ಸಮಾಜದಲ್ಲಿ ಅಲ್ಲಲ್ಲಿ ದ್ವೀಪದಂತೆ ರಕ್ಷಿಸಿಕೊಳ್ಳುವ ಅರಣ್ಯಗಳು ಕೃತಕ ಮಾತ್ರವಲ್ಲ ಪರಿಸರ ಸಮತೋಲನವನ್ನು ಉಂಟುಮಾಡುವುದಿಲ್ಲ, ಆದ್ದರಿಂದ ಪರಿಸರ ರಕ್ಷಣೆ ದೂರದ ಆದಿವಾಸಿಗಳದ್ದು ಮಾತ್ರವಲ್ಲ; ಫ್ರಿಜ್, ಕಾಂಕ್ರೀಟ್ ಮನೆ ಉಳ್ಳ ಬಳಕೆದಾರಿ ಸಂಸ್ಕೃತಿಗೆ ಪಕ್ಕಾಗಿರುವ ಎಲ್ಲರದ್ದೂ ಆಗಿದೆ. ಅದೇ ರೀತಿ ಅದಕ್ಕೆ ಪರಿಹಾರ, ಬಳಕೆದಾರಿ ಸಂಸ್ಕೃತಿಗೆ ಬಲಿಯಾಗಿರುವವರು ಅದರಿಂದ ಹೊರಬರುವ ಹೋರಾಟದಲ್ಲಿ ತೊಡಗಿ ಕೊಳ್ಳುವುದೇ ವಿನಃ ಆದಿವಾಸಿಗಳನ್ನೂ ಉಪಭೋಗಿ ಸಂಸ್ಕೃತಿಗೆ ಎಳೆತರುವುದಲ್ಲ.

ಪ್ರಾರಂಭದಲ್ಲಿ ಹೇಳಿದಂತೆ ಜಾಗತೀಕರಣ ಹಾಗೂ ಈ ಸಾಮ್ರಾಜ್ಯಶಾಹಿ ಪ್ರಭುತ್ವಗಳ ಬಗ್ಗೆ ಪರ್ಯಾಯ ಸಮಾಜ ವಾದಿ ನೆಲೆಗಟ್ಟಿನಲ್ಲಿ ವಿಶ್ಲೇಷಣೆ ಮಾಡದಿದ್ದರೆ ಈ ಬಗೆಯ ವಿಷಾದನೀಯ ಕುರುಡು ನಮ್ಮನ್ನು ಆವರಿಸುತ್ತದೆ. ಸಮ ಕಾಲೀನ ರಾಜಕಾರಣ ಉದಾರವಾದಿಗಳ ಜಾಣ ಕುರುಡನ್ನೇ ಬೆಳೆಸುತ್ತಿರುವಾಗ ಲೋಕೇಶರಂಥವರಿಗೆ ಆವರಿಸಿರುವ ಹತಾಶೆಯ ಕುರುಡು ಬೇಗನೆ ನೀಗಲೆಂದು ಆಶಿಸುತ್ತೇನೆ.

**ಶಿವಸುಂದರ್**
೪, ಎರಡನೇ ಕ್ರಾಸ್
ಶೇಷಾದ್ರಿಪುರಂ ಪೋಸ್ಟ್ ಆಫೀಸ್ ಎದುರು
ಶೇಷಾದ್ರಿಪುರಂ, ಬೆಂಗಳೂರು-೫೬೦ ೦೨೦

## ಪ್ರತಿಕ್ರಿಯೆ

**ಜು**ಲೈ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾದ ಲೇಖನ 'ನೋವಿಲ್ಲದೆ ನರಳುತ್ತಿದೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆ'ಯನ್ನು ಓದಿದೆ. ಲೇಖನ ತುಂಬ ಚೆನ್ನಾಗಿ ಬಂದಿದೆ.

ಇತ್ತೀಚೆಗೆ ಹಲವಾರು ಮಂದಿ ಸಹೃದಯರು ಪರಿಸರವಾದಿ ಆಂದೋಲನದ ಜೊತೆಗೆ ಎಡಪಂಥೀಯರು ತಮ್ಮನ್ನು ಯಾಕೆ ಗುರುತಿಸಿಕೊಳ್ಳುತ್ತಿಲ್ಲ ಎಂದು ಪ್ರಾಮಾಣಿಕವಾಗಿ ಪ್ರಶ್ನಿಸಲಾರಂಭಿಸಿದ್ದಾರೆ. 'ಜನವಾಹಿನಿ'ಯ ಅಂಕಣಗಳಿಂದ ನನಗೆ ಪರಿಚಿತರಾಗಿರುವ ಸನತ್‌ಕುಮಾರ್ ಬೆಳಗಲಿಯವರೂ ಈ ಪ್ರಶ್ನೆ ಕೇಳಿದ್ದಲ್ಲದೆ ಇನ್ನೂ ಮುಂದುವರಿದು 'ಸ್ವಯಂಸೇವಾ ಸಂಸ್ಥೆ'ಗಳ ಬಗೆಗೂ ಎಡಪಕ್ಷಗಳವರು ತಮ್ಮ ನಿಲುಮೆಯನ್ನು ಮಾರ್ಪಡಿಸಿಕೊಳ್ಳಬೇಕಾದ ಅಗತ್ಯವಿದೆಯೆಂದೂ ತುಂಬು ಕಳಕಳಿಯ ಸಲಹೆ ನೀಡಿದ್ದಾರೆ. ಕುದುರೆಮುಖದಲ್ಲಿ ಪರಿಸರ ಉಳಿಸುವ ಚಳುವಳಿಯ ಕುರಿತು ಎಡಪಕ್ಷಗಳು ಯಾಕೆ ಸುಮ್ಮನಿವೆಯೆಂದೂ ಕೆಲವರು ಕೇಳಲಾರಂಭಿಸಿದ್ದಾರೆ.

ಕಳೆದ ವರ್ಷ ಡಾ. ಯು. ಆರ್. ಅನಂತಮೂರ್ತಿ, ತೇಜಸ್ವಿ ಮೊದಲಾದವರು ಕುದುರೆಮುಖದಲ್ಲಿ ಗಣಿಗಾರಿಕೆಗೆ ಇನ್ನು ಮುಂದೆ ಅವಕಾಶ ನೀಡಕೂಡದು ಎಂದು ಒತ್ತಾಯಿಸಿದಾಗ ಮತ್ತು ನಮ್ಮ ನಾಡಿನ ಅನೇಕ ಮಂದಿ ಚಿಂತನಶೀಲರು ಈ ಆಂದೋಲನಕ್ಕೆ ಧುಮುಕಿದಾಗ ಭಾರತ ಪ್ರಜಾಸತ್ತಾತ್ಮಕ ಯುವಜನ ಫೆಡರೇಶನ್‌ನ ನಾವು ಒಂದು ಸತ್ಯಶೋಧನಾ ತಂಡವನ್ನು ಮಲ್ಲೇಶ್ವರಕ್ಕೆ ಒಯ್ದು ವ್ಯಾಪಕವಾಗಿ ತಪಾಸಣೆ, ಚರ್ಚೆ ಇತ್ಯಾದಿ ನಡೆಸಿ ಈ ತಥಾಕಥಿತ ಪರಿಸರವಾದಿಗಳೂ ಅಮಾಯಕ ಬುದ್ಧಿಜೀವಿಗಳೂ ಹೇಳುತ್ತಿರುವುದರಲ್ಲಿ ಬಹಳಷ್ಟು ಅಂಶಗಳು ಸತ್ಯಕ್ಕೆ ದೂರವಾಗಿವೆಯೆಂಬುದನ್ನು ಕಂಡುಕೊಂಡಿದ್ದೇವೆ. ಈ ಕುರಿತು ನಮ್ಮ ಸತ್ಯಶೋಧನಾ ತಂಡದ ವರದಿ 'ಕುದುರೆಮುಖ ಗಣಿಗಾರಿಕೆ - ವಾಸ್ತವ ಮತ್ತು ಮಿಥ್ಯೆ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ.

ದುರದೃಷ್ಟವಶಾತ್ ಈ ಚಿಂತನಶೀಲರು ಮತ್ತು ಬುದ್ಧಿಜೀವಿಗಳು ವಿಷಯದ ಪೂರ್ಣ ಪರಿಜ್ಞಾನವಿಲ್ಲದೆ ಕೇವಲ ಆಕ್ರೋಶದಿಂದ ಆಡಿದ ಮಾತುಗಳಿಗೆ ಸಿಕ್ಕಿದಷ್ಟು ಪ್ರಚಾರ ನಾವು ಕಷ್ಟಪಟ್ಟು ವ್ಯಾಪಕ ಅಧ್ಯಯನ ನಡೆಸಿ ಸಿದ್ಧಪಡಿಸಿದ ವರದಿಗೆ ಸಿಗಲಿಲ್ಲ. ಎಷ್ಟೆಂದರೂ ನಾವು ಖ್ಯಾತನಾಮರಲ್ಲದವರು ! ಮೇಲಾಗಿ ಎಡಪಂಥೀಯರು !

ಗಣಿಗಾರಿಕೆಗೆ ಸಂಬಂಧಿಸಿದಂತೆ ಶ್ರೀ ಲೋಕೇಶ್ ಹಾಗೂ ಡಾ. ಸಿದ್ದನಗೌಡ ಪಾಟೀಲರು ವ್ಯಕ್ತಪಡಿಸಿದ ಅಭಿಪ್ರಾಯಗಳು ನಮ್ಮ ಅಭಿಪ್ರಾಯಕ್ಕೆ ತುಂಬಾ ಸಮೀಪವಾಗಿವೆ ಮತ್ತು ವಾಸ್ತವಿಕ ದೃಷ್ಟಿಕೋನ ಹೊಂದಿವೆ ಎಂದು ನಾನು ಭಾವಿಸಿದ್ದೇನೆ. ಅಂತೆಯೇ 'ಕುದುರೆಮುಖ ರಾಷ್ಟ್ರೀಯ ಉದ್ಯಾನವನ'ದ ಬಗೆಗೂ ಸಹ. ನಮ್ಮ ಅಭಿಪ್ರಾಯಗಳಲ್ಲಿ ಈ ಕೆಳಗಿನ ಒಮ್ಮತ ಸಾಧ್ಯವಿದೆ :

ಅ) ಗಣಿಗಾರಿಕೆ ಲಾಭದಾಯಕವಾಗಿ ನಡೆಯುವಷ್ಟು ದಿನ ಅಂದರೆ ಸುಮಾರು ಇನ್ನೂ ಇಪ್ಪತ್ತು ವರ್ಷಗಳವರೆಗೆ ಗುತ್ತಿಗೆಯನ್ನು ವಿಸ್ತರಿಸಬೇಕು. ಇದು ಪರಿಸರ ರಕ್ಷಣೆಗೆ ಸಂಬಂಧಿಸಿದ ಷರತ್ತುಗಳಿಗೆ ಒಳಪಟ್ಟಿರಬೇಕು.

ಆ) ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆಯನ್ನು ರದ್ದುಪಡಿಸಬಾರದು. ಆದರೆ ಅದರ ಹೆಸರಿನಲ್ಲಿ ಪೊಲೀಸರು ಅಥವಾ ಅರಣ್ಯಾಧಿಕಾರಿಗಳು ಅಮಾಯಕ ಜನರನ್ನು ಹಿಂಸಿಸುವುದನ್ನು ತಡೆಗಟ್ಟಬೇಕು.

ಇ) ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ನಿವಾಸಿಗಳನ್ನು ಅವರು ಇಚ್ಛಿಸಿದರೆ ಬೇರೆಕಡೆ ಎಲ್ಲಾ ಸವಲತ್ತುಗಳನ್ನೂ ನೀಡಿ ಪುನರ್ವಸತಿಗೊಳಿಸಬೇಕು. ಇದರಲ್ಲಿ ಬಲಾತ್ಕಾರ ಕೂಡದು. ಆದರೆ ಅವರಿಗೆ ಸಮಾಧಾನದಿಂದ ತಿಳಿಯಹೇಳಿ ಮನವರಿಕೆ ಮಾಡಿಸಬೇಕು. ನಾಗರಹೊಳೆ ಅಭಯಾರಣ್ಯದಿಂದ ನೆಲೆ ಕಳೆದುಕೊಂಡವರನ್ನು ನಾಗಾಪಟ್ಟಣದಲ್ಲಿ ಹೀಗೆ ನೆಲೆಗೊಳಿಸಲಾಗಿದೆ. ಮುತ್ತೋಡಿ ಅಭಯಾರಣ್ಯದಲ್ಲೂ ಹೀಗೆ ಮಾಡಲಾಗಿದೆ.

*- ಅದಮಾರು ಶ್ರೀಪತಿ ಆಚಾರ್ಯ, ಉಡುಪಿ*



# ಸೂಜಿಯೇ ನೀನು ಸೂಜಿಯೇ

ವಿ. ಚಂದ್ರಶೇಖರ ನಂಗಲಿ

*ಸೂಜಿಯೇ ನೀನು ಸೂಜಿಯೇ*
*ಈ ರಾಜ್ಯದೊಳಗೆಲ್ಲ ತೇಜ ಕಾಣಿಸುವಂಥ ॥ಪ॥*

*ಹರಿಯ ಶಿರದ ಮ್ಯಾಲೆ ಮೆರೆದಂಥ ಸೂಜಿಯೇ*
*ಹರನ ಕಪಾಲದಿ ಬೆರೆದಂಥ ಸೂಜಿಯೇ*
*ಮರವಿಯ ಅರವಿಯ ಹೊಲಿವಂಥ ಸೂಜಿಯೇ*
*ಮರೆ ಮೋಸವಾಗಿ ಮಾಯವಾದಂಥ ಸೂಜಿಯೇ॥*

*ತಂಪುಳ್ಳ ಉಕ್ಕಿನೊಳ್ ಹುಟ್ಟಿದ ಸೂಜಿಯೇ*
*ಶಿಂಪಿಗರಣ್ಣಗೆ ಬಲವಾದ ಸೂಜಿಯೇ*
*ಇಂಪುಳ್ಳ ದಾರಕ್ಕೆ ಸೊಂಪು ಗೂಡಿಸುವಂಥ*
*ಕಂಪನಿ ಸರಕಾರ ವಶವಾದ ಸೂಜಿಯೇ ॥*

*ಅಂಗಳ ಬಯಲೊಳು ಹೋದಂಥ ಸೂಜಿಯೇ*
*ಸಿಂಗಾರದಂಗಿಯ ಹೊಲಿವಂಥ ಸೂಜಿಯೇ*
*ತುಂಗ ಶಿಶುನಾಳಾಧೀಶನ ಸೇವಕ*
*ರಂಗಿಲಿ ಹುಡುಕಲು ಸಿಗದಂಥ ಸೂಜಿಯೇ ॥*

''ಸೂಜಿಯೇ ನೀನು ಸೂಜಿಯೇ ''– ಇದನ್ನು 'ದ್ವಿರುಕ್ತಿ'ಯನ್ನಾಗಿ ಮಾತ್ರ ನೋಡದೆ 'ಯಮಕ' ವೆಂಬಂತೆಯೂ ಗ್ರಹಿಸಬೇಕು: ಸೂಜಿಗೆ ಸೂಜಿ ಮತ್ತು ಅಯಸ್ಕಾಂತ ಎಂಬ ಎರಡೂ ಅರ್ಥಗಳಿವೆ. ಇವೆರಡೂ ಅರ್ಥಗಳು 'ಸೂಜಿಯೇ ನೀನು ಸೂಜಿಯೇ' ಎಂದಾಗ ಪ್ರಸ್ತುತವಾಗುತ್ತವೆ. ಈ ತತ್ವಪದ ಸೂಜಿಯ ಮೋಹಕ ಮಾಯಾವಿಲಾಸದ ವಿಡಂಬನ ಸ್ಥಲ. ಸೂಜಿಯನ್ನು 'ಆಧುನಿಕತೆಯ ಸಂಕೇತ'ವೆಂದು ಹೇಳುವುದುಂಟು. ಹೊಸ ತಂತ್ರಜ್ಞಾನಜನ್ಯವಾದ ಸೂಜಿಯನ್ನು ನೇರವಾಗಿ 'ಆಧುನಿಕತೆಯ ಸಂಕೇತ'ವೆಂದು ತಿಳಿಯುವ ಬದಲು ಸೂಜಿಯ ಉತ್ಪಾದನೆ, ಬಳಕೆ ಮತ್ತು ಪರಿಣಾಮದ ನೆಲೆಗಳನ್ನು ಸಮಗ್ರ ದೃಷ್ಟಿಯಿಂದ ವಿವೇಚಿಸುತ್ತಾ, ಮನುಷ್ಯನ ಕ್ರಿಯಾಶೀಲವಾದ ನಿಲುವು ಯಾವುದೆಂಬುದನ್ನು ಮನಗಾಣಿಸುವ ಬಗೆಯಲ್ಲಿ 'ಆಧುನಿಕತೆ'ಯನ್ನು ಕಂಡುಕೊಳ್ಳುವುದು ಸರಿಯೆನಿಸುತ್ತದೆ.

ಈ ಕುರಿತು ಲೋಹಿಯಾ ಅವರ ವಿವರಣೆ ಸ್ಮರಣೀಯವಾಗಿದೆ: ''ಇಲ್ಲಿ ಪ್ರಸ್ತುತವಿರುವ ಮೂಲ ಪ್ರಶ್ನೆಯೆಂದರೆ ಆಧುನಿಕತೆ ಎಂದರೇನು ಎನ್ನುವುದು. ಈ ಆಧುನಿಕತೆ ಇಂಗ್ಲಿಷಿನ ಮೂಲಕ ಮಾತ್ರವೇ ಬರುವಂಥದ್ದೇ ? ಆಧುನಿಕತೆಯೆಂದರೆ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯ ಜೊತೆ ಜೊತೆಗೆ ಮಾನವನು ಒಟ್ಟಾರೆಯಾಗಿ ಮನುಷ್ಯ ಮತ್ತು ಜಗತ್ತಿನ ವಸ್ತುಗಳ ಬಗೆಗೆ ಬೆಳೆಸಿಕೊಂಡ ಧೋರಣೆ. ಇದು ಮೂಲಭೂತವಾಗಿ ವಿವೇಚನಾಶಕ್ತಿ, ತಿಳುವಳಿಕೆ ಮತ್ತು ಸತ್ಯವನ್ನಾಧರಿಸಿದ ಒಂದು ಧೋರಣೆ. ಭಾವಾತಿರೇಕಗಳು, ಮೂಢನಂಬಿಕೆಗಳು ಮತ್ತು ಸಂಪ್ರದಾಯಬದ್ಧತೆಗಳನ್ನು ಆಶ್ರಯಿಸಿದ್ದಲ್ಲ. ಅದು ಮನುಷ್ಯನ ಕ್ರಿಯಾಶೀಲತೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಎದುರಿಸುವಲ್ಲಿ ನಾವು ತೆಗೆದುಕೊಳ್ಳಬಹುದಾದ, ತತ್ವದ ಹೆಸರಿನಲ್ಲಿ ಕುರುಡುವಾದ ಹೂಡದ ಕ್ರಿಯಾಶೀಲವಾದ ನಿಲುವು.'' (ಲೋಹಿಯಾ ಬರಹಗಳು, ಸಂ. ೩ : ಪು. ೧೫೧-೧೫೨).

ಸೂಜಿಯೇ ನೀನು ಸೂಜಿಯೇ – ಇದು ಸೂಜಿಯ ಮೋಹಕ ಮಾಯಾ ವಿಲಾಸದ ವಿಡಂಬನ ಸ್ಥಲವೆಂದು ಆಗಲೇ ಹೇಳಿದೆ. ಈ ದೃಷ್ಟಿಕೋನವು ''ತತ್ವದ ಹೆಸರಲ್ಲಿ ಕುರುಡುವಾದ ಹೂಡದ ಕ್ರಿಯಾಶೀಲವಾದ ನಿಲುವು'' – ಎಂಬುದನ್ನು ಮುಂದೆ ಪ್ರತಿಪಾದಿಸಲಾಗಿದೆ. ಕೈಗಾರಿಕಾ ಕ್ರಾಂತಿಯ ಮೊದಲ ದಿನಗಳಲ್ಲಿ ಆವಿಷ್ಕಾರಗೊಂಡ ಸೂಜಿ-ಹೊಲಿಗೆ ಯಂತ್ರಗಳು ವಸ್ತ್ರ ವಿನ್ಯಾಸಕ್ಕೆ ಕೊಟ್ಟ ಕೊಡುಗೆ ಅಮೋಘವಾದುದು. ಯಂತ್ರಜನ್ಯ ಕುಸುರಿ ಗೆಲಸಗಳ ಹೊಸ ಶಕೆಯೇ ಇದರಿಂದ ಆರಂಭಗೊಂಡಿತೆನ್ನಬಹುದು. ಸೂಜಿಯ ಪರಿಣಾಮಗಳೆನ್ನಬಹುದಾದ ಬಗೆ ಬಗೆಯ ವಸ್ತ್ರವಿನ್ಯಾಸಗಳ ಭರಾಟೆಯೇ ಶುರುವಾಯಿತು. ಈ (ಭೂಮಿ) ರಾಜ್ಯದಲ್ಲೆಲ್ಲಿ ನೋಡಿದರೂ ಸೂಜಿಗಳದೆ ಕಾರುಬಾರು. ಮನುಷ್ಯರ ಮೈಗಳನ್ನು ಸೂಜಿಗಳೇ ಆಳುತ್ತಿವೆಯೋ ಎನ್ನುವಷ್ಟರ ಮಟ್ಟಿಗೆ ವಿವಿಧ ವಸ್ತ್ರ ವಿನ್ಯಾಸಗಳ ವಿಜೃಂಭಣೆಯೇ ನಡೆಯುತ್ತಾ ಬಂದಿದೆ. ಈ ಎಲ್ಲ ರಾಜತೇಜದ ವೈಭವ-ವಿಲಾಸಗಳ ಮಧ್ಯೆ ಹರಕು ಅಂಗಿಯವರು, ಚಿಂದಿಯುಟ್ಟವರು ಮತ್ತು ಚಿಂದಿಗೂ ಗತಿಯಿಲ್ಲದವರು ಕೂಡ ಇದ್ದಾರೆ. ಇಂಥವರನ್ನು ಸೂಜಿ ಮೂಸಿಯೂ ನೋಡುವುದಿಲ್ಲ ಎಂಬುದನ್ನಿಲ್ಲಿ ಮರೆಯಬಾರದು :

*ಸೂಜಿಯೇ ನೀನು ಸೂಜಿಯೇ*
*ಈ ರಾಜ್ಯದೊಳಗೆಲ್ಲ ತೇಜ ಕಾಣಿಸುವಂಥ*
*ಸೂಜಿಯೇ ನೀನು ಸೂಜಿಯೇ ॥*

– ಇಂಥ ಸೂಜಿಯ ರಾಜತೇಜದ ಮಹಿಮೆ ಮತ್ತು ವಿಶ್ವ ವ್ಯಾಪಕತೆಯನ್ನು ಶಿಶುನಾಳ ಶರೀಫರು ದೇವಾನುದೇವತೆಗಳ ಅಥವಾ ಸತ್ಯಸಾತ್ವಿಕ ಸದ್ಭಕ್ತರ ನೆಲೆಯಿಂದಲೇ ಆರಂಭಿಸಿದ್ದಾರೆ :

*ಹರಿಯ ಶಿರದ ಮ್ಯಾಲೆ ಮೆರೆದಂಥ ಸೂಜಿಯೇ*
*ಹರನ ಕಪಾಲದಿ ಬೆರೆದಂಥ ಸೂಜಿಯೇ*

ಇಲ್ಲಿ ಹರಿ ಮತ್ತು ಹರನಿಗೆ ಸಂಬಂಧಪಟ್ಟಂತೆ ಪ್ರಯೋಗವಾಗಿರುವ 'ಸೂಜಿ'ಯನ್ನು 'ಸೂಜಿಮಲ್ಲಿಗೆ' ಎಂಬರ್ಥದಲ್ಲಿ ಸ್ವೀಕರಿಸಿದರೆ, ಹರಿ ಮತ್ತು ಹರನ ತಲೆಯ ಮೇಲೆ ಶೋಭಿಸುವ ಸೂಜಿ ಮಲ್ಲಿಗೆಯ ಹೂದಂಡೆ ಎಂದು ಗ್ರಹಿಸಲು ಅವಕಾಶವಿದೆ. ಆದರೆ ಹರಿ ಮತ್ತು ಹರ ಎಂಬುದನ್ನು ಸಾಕ್ಷಾತ್ ವಿಷ್ಣು ಮತ್ತು ಶಿವನೆಂದು ತಿಳಿಯದೆ ಹರಿಭಕ್ತರು ಮತ್ತು ಹರಭಕ್ತರು ಎಂಬಂತೆಯೂ ಗ್ರಹಿಸಬಹುದು. ಆಗ ಹರಿಯ ಭಕ್ತರು ತಮ್ಮ ಶಿರದ ಮ್ಯಾಲೆ ಸುತ್ತಿಕೊಳ್ಳುವ ಹೂದಂಡೆಯ ಸೊಬಗು, ಹರನ ಭಕ್ತರು 'ಕಪಾಲ' (=ಕಪಾಳ, ಕಪೋಲ)ದಲ್ಲಿ ಚುಚ್ಚಿಕೊಳ್ಳುವ ಸೂಜಿಯ ಬೆರಗು – ಇವೆರಡಕ್ಕೂ ಇದು ಹೊಂದಿಕೊಳ್ಳುತ್ತದೆ. ಹೀಗಲ್ಲವಾದರೆ, ಹರಿಯ ಶಿರದ ಮ್ಯಾಲೆ ಸೂಜಿ ಮೆರೆಯುವುದಕ್ಕೆ, ಹರನ ಕಪಾಲದಲ್ಲಿ ಸೂಜಿ ಬೆಳೆಯುವುದಕ್ಕೆ ಮೌಖಿಕ ಪುರಾಣಗಳೇನಾದರೂ ಇವೆಯೋ ನನಗೆ ತಿಳಿಯದು.

*ಮರವಿಯ ಅರವಿಯ ಹೊಲಿವಂಥ ಸೂಜಿಯೇ*
*ಮರೆ ಮೋಸವಾಗಿ ಮಾಯವಾದಂಥ ಸೂಜಿಯೇ*

ಈ ರಾಜ್ಯದಲ್ಲಿ ಎಲ್ಲರ ಹೊರಮೈಗಳಿಗೆ 'ತೇಜ'ವನ್ನು ಕಾಣಿಸುವಂಥ ಸೂಜಿಯು ವಿವಿಧ ವೇಷ-ವಿಲಾಸಗಳ ಪ್ರತೀಕ. 'ಮಾನ'ವನ್ನು ಮರೆಮಾಡುವ ಬಗೆಬಗೆ ಬಣ್ಣದ ಅರವಿಗಳನ್ನು ಹೊಲಿಯುವ ಈ ಸೂಜಿ ಸಾಮಾನ್ಯವಲ್ಲ! ಜನರ ಮೈಗಳನ್ನು ಮರೆಮಾಡುವ ಅರವಿಗಳೇ ಕೆಲವರ ಪಾಲಿಗೆ ಮೋಸವಾಗಿ 'ಮಾಯ'ವಾಗಲು ಸಹಕರಿಸುತ್ತವೆ. ಬ್ರಿಟಿಷ್ ಪ್ರಭುತ್ವಕ್ಕೆ ಚಳ್ಳೆಹಣ್ಣು ತಿನ್ನಿಸಿದ ಸ್ವಾತಂತ್ರ್ಯಯೋಧರ ಬಗೆಬಗೆಯ ವೇಷಗಳನ್ನಿಲ್ಲಿ ಸ್ಮರಿಸಬಹುದು. ಇದಕ್ಕೆಲ್ಲ ಸೂಜಿಯೇ ಕಾರಣ. ಇದು ಕಂಪನಿ ಸರಕಾರದ ವಶವರ್ತಿಯೂ ಆಗಿದ್ದು ಹೊಲಿಗೆ ಯಂತ್ರಗಳ ಆಗಮನಕ್ಕೂ ಮೂಲವಾಗಿದೆ :

*ತಂಪುಳ್ಳ ಉಕ್ಕಿನೊಳ್ ಹುಟ್ಟಿದ ಸೂಜಿಯೇ*
*ಶಿಂಪಿಗರಣ್ಣಗೆ ಬಲವಾದ ಸೂಜಿಯೇ*
*ಇಂಪುಳ್ಳ ದಾರಕ್ಕೆ ಸೊಂಪುಗೂಡಿಸುವಂಥ*
*ಕಂಪನಿ ಸರಕಾರ ವಶವಾದ ಸೂಜಿಯೇ*

ತಂಪುಳ್ಳ ಉಕ್ಕಿನಲ್ಲಿ ಹುಟ್ಟಿದ ಸೂಜಿ, ದರ್ಜಿಯ ಕೈಗಳನ್ನು ಬಲಗೊಳಿಸಿದೆ. ಇಂಪುಳ್ಳ ದಾರದೊಂದಿಗೆ ಸೊಂಪಾಗಿ ಕೂಡಿಕೊಳ್ಳುವ ಈ ಸೂಜಿ ಕಂಪನಿ ಸರಕಾರದ ವಶವರ್ತಿಯಾಗಿದೆ. ಇಲ್ಲಿರುವ ತಂಪು-ಇಂಪು-ಸೊಂಪು ಎಂಬ ನುಡಿಗಳು ಕೇವಲ ವಸ್ತು ಸತ್ಯಗಳಾಗದೆ, ಸೂಜಿಯ ಮೋಹಕ ಮಾಯೆಗೊಳಗಾಗಿ ಬಾಹ್ಯ ತೇಜದಲ್ಲಿ ಮುಳುಗಿಹೋಗಿರುವ ಉಳ್ಳವರ ತಂಪು-ಇಂಪು-ಸೊಂಪುಗಳನ್ನೂ ಧ್ವನಿಸುತ್ತವೆ.

*ಅಂಗಳ ಬಯಲೊಳು ಹೋದಂಥ ಸೂಜಿಯೇ*
*ಸಿಂಗಾರದಂಗಿಯ ಹೊಲಿವಂಥ ಸೂಜಿಯೇ*

''ಅಂಗಳ ಬಯಲೊಳು ಹೋದಂಥ ಸೂಜಿಯೇ'' – ಎಂಬ ನುಡಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಸೂಜಿಗೆ ಸಂಬಂಧಪಟ್ಟಂತೆ ಜನಪದರ ನುಡಿಗಟ್ಟು, ಗಾದೆಮಾತು, ಒಗಟುಗಳನ್ನು ಕೂಡ ತಿಳಿದಿರಬೇಕಾಗುತ್ತದೆ. ಜನಪದರ ಕಣ್ಣಿಗೆ 'ಸೂಜಿ'ಯು ಲೋಹವಸ್ತು ಮಾತ್ರವಲ್ಲ! ಸೂಜಿ ತಲೆ, ಸೂಜಿ ಬಾಯಿ ಅಥವಾ ಸೂಜಿ ಕಣ್ಣು, ಸೂಜಿ ಮೂತಿ – ಎಂಬಂಥ ಪ್ರಯೋಗಗಳು ಜನಪದರಲ್ಲಿ ಸಾಮಾನ್ಯ : ೧. ಸೂಜಿಯಷ್ಟು ಬಾಯಿ, ಗುಡಾಣದಷ್ಟು ಹೊಟ್ಟೆ, ೨. ಸೂಜಿಗೆ ಸೂಜಿ ಮತ್ತು ಕೊಟ್ಟ ಹಾಗೆ, ೩. ಮಾರುದ್ದ ನೂಲಿನ ಸೀರೆಯ ಹೆಣ್ಣಿಗೆ ಒಂದೇ ಒಂದು ಕಣ್ಣು . ಮೊದಲೆರಡು ಗಾದೆಗಳೊಂದಿಗೆ 'ಸೂಜಿ ತಲೆ' ಎಂಬ ಶಬ್ದಕ್ಕೆ ಕಿಟೆಲ್ ಕೊಟ್ಟಿರುವ ಅರ್ಥ ಹೀಗಿದೆ : ಸೂಜಿ ತಲೆ = the part of needle that is above its eye. 'ಸೂಜಿ ತಲೆ'ಗೆ ಹೊಂದಿಕೊಂಡಂತಿರುವ ರಂಧ್ರವನ್ನು ಸೂಜಿಬಾಯಿ ಅಥವಾ ಸೂಜಿ ಕಣ್ಣು ಎಂದು ಕರೆಯುತ್ತಾರೆ. ಇದಿಷ್ಟು ಹಿನ್ನೆಲೆಯಲ್ಲಿ ''ಅಂಗಳ ಬಯಲೊಳು ಹೋದಂಥ ಸೂಜಿಯೇ'' ಎಂಬ

ನುಡಿಯನ್ನು ಗ್ರಹಿಸಬೇಕು. (ಸೂಜಿಯ ಬಾಯಂಗಳದ ರಂಧ್ರವೇ ಬಯಲು ಅಥವಾ ಶೂನ್ಯ. ವಚನ ಸಾಹಿತ್ಯದಲ್ಲಿ 'ಬಯಲು' ಎಂಬ ಶಬ್ದಕ್ಕಿರುವ ಅರ್ಥಗೌರವವನ್ನು ಗಮನಿಸಿದರೆ ಸೂಜಿಯ ಬಾಯಂಗಳದ ರಂಧ್ರವು ಬಯಲಾದದ್ದರ ಅರ್ಥ ಪ್ರತೀತಿಯಾಗುತ್ತದೆ). ಹೀಗೆ ಸೂಜಿಯ ಬಾಯಂಗಳದ ರಂಧ್ರವು ಬಯಲೊಳಗೆ ಹೋಗಿದ್ದರಿಂದಲೇ, ಬಗೆಬಗೆಯ 'ಸಿಂಗಾರದಂಗಿ'ಗಳನ್ನು ಹೊಲಿದುಕೊಡಲು ಸಾಧ್ಯವಾಗಿದೆ. ಒಟ್ಟಿನಲ್ಲಿ ಈ ಜಗದ ಜಂಗುಳಿಗಳೆಲ್ಲ ಸೂಜಿಯ ಮೋಹಕ ಮಾಯೆಗೊಳಗಾಗಿದೆ. ಸೂಜಿಯ ರಾಜತೇಜಕ್ಕೆ ತಮ್ಮ ತನುಗಳನ್ನು ಅರ್ಪಿಸಿಕೊಂಡಿರುವ ಜನಗಳ ಆಂತರ್ಯ ತೇಜೋಹೀನವಾಗಿದೆ. ಆದರೆ,

*ತುಂಗ ಶಿಶುನಾಳಾಧೀಶನ ಸೇವಕ*
*ರಂಗಿಲಿ ಹುಡುಕಲು ಸಿಗದಂಥ ಸೂಜಿಯೇ*

ಶ್ರೇಷ್ಠರಾದ ಜನರೆಂದರೆ ಶಿಶುನಾಳಾಧೀಶನ ಸೇವಕರೇ ಸರಿ ! (ಇವರು ಬ್ರಿಟಿಷ್ ಪ್ರಭುತ್ವದ ಸೇವಕರಲ್ಲ). ಇವರು ತೊಟ್ಟ ಅಂಗಿಗಳಲ್ಲಿ ಯಾವ ತೇಜವೂ ಇಲ್ಲ; ಮಾನ ಮುಚ್ಚುವಷ್ಟು ಬಟ್ಟೆಯನ್ನು ತೊಟ್ಟು, ಸರಳವಾಗಿ ಬದುಕುತ್ತಿರುವ ಶಿಶುನಾಳಾಧೀಶನ ಸೇವಕರ ಅಂಗಿಯಲ್ಲಿ ಹುಡುಕಿದರೂ 'ಸೂಜಿ'ಯು ಸಿಕ್ಕುವುದಿಲ್ಲ. ಈ ರಾಜ್ಯದೊಳಗೆಲ್ಲ ತೇಜ ಕಾಣಿಸುವಂಥ ಸೂಜಿಯು, ಆಂತರ್ಯದಲ್ಲಿ ಸ್ವಯಂ ತೇಜವುಳ್ಳವರ ಅಂಗಿಯಲ್ಲಿ ಹುಡುಕಿದರೆ ಸಿಗಲು ಸಾಧ್ಯವೇನು ?

ಹೀಗೆ, ಸರಳ ಜೀವನ ಮತ್ತು ಉನ್ನತ ಆಲೋಚನೆಯ ಜೀವನಶೈಲಿಯೊಂದನ್ನು, ಹೊಸ ಆವಿಷ್ಕಾರವೆನ್ನಬಹುದಾದ ಸೂಜಿಯ ಮೋಹಕ ಮಾಯಾ ವಿಲಾಸದ ಮೂಲಕ ಭಿನ್ನ ವಿಷಯವೆಂಬಂತೆ ಪ್ರತಿಪಾದಿಸುತ್ತಿರುವ ಈ ತತ್ವಪದ ಮನದ ಆಧುನಿಕತೆಯ ಪ್ರತೀಕವಾಗಿದೆ.

ಒಂದು ಬೆಡಗಿನ ಕವಿತೆ ಅಥವಾ ತತ್ವಪದವನ್ನು ಅರ್ಥಮಾಡಿಕೊಳ್ಳುವ ಬಗೆಗಳಲ್ಲಿ ಅನುಕರಣವೂ ಒಂದೆಂದು ನಾನು ತಿಳಿದಿದ್ದೇನೆ. ಇದರಿಂದ ಮೂಲ ಕವಿತೆಯ ಸೊಬಗು ಹೆಚ್ಚುವುದಲ್ಲದೆ, ಅನುಕರಣದಿಂದಾಗಿ ಕಾವ್ಯಸೃಷ್ಟಿಯ ಚಮತ್ಕಾರಗಳು ಕೂಡ ಸಿದ್ಧಿಯಾಗುತ್ತವೆ. ವಸಾಹತುಶಾಹಿಯ ಸಂದರ್ಭದಲ್ಲಿ ಸೂಜಿಯು ಬೀಸಿದ ಮಾಯೆಯನ್ನೆ ಇಂದಿನ ನವವಸಾಹತುಶಾಹಿಯ ಸಂದರ್ಭದಲ್ಲಿ ಟಿ.ವಿ.ಯು ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಸೂಜಿಯ ಸ್ಥಾನದಲ್ಲಿ ಟಿ.ವಿ.ಯನ್ನು ಕಲ್ಪಿಸಿಕೊಂಡು ಬರೆದಿರುವ 'ನವೀನ ತತ್ವಪದ' ಇಲ್ಲಿದೆ :

*ಟಿ.ವಿ.ಯೇ ನೀನು ಠೀವಿಯೇ*
*ಈ ಧರಣಿಯನ್ನೆಲ್ಲ ಭರಣಿಯೊಳಿಟ್ಟು*
*ಜನರೆಲ್ಲರ ಮರುಳು ಮಾಡುವಂಥ ಟಿ.ವಿ.ಯೇ॥*

*ಭೂಮಂಡಲ ಸುತ್ತುವ ಕಣ್ಣುಗಳುಳ್ಳ ಟಿ.ವಿ.ಯೇ*
*ಆಕಾಶಕೇರಿ ಕಾಲದೇಶಗಳೊಂದು ಮಾಡಿದ*
*ಟಿ.ವಿ.ಯೇ*
*ಬಹು ಕಂಪನಿ ಸರಕುಗಳಿಗೆ ಮಣೆ ಹಾಕುವ*
*ಟಿ.ವಿ.ಯೇ*
*ಬಹು ಮಾತಾಡುವ ಬಾಯಿಗೆ ಬೀಗವಾಗುವ*
*ಟಿ.ವಿ.ಯೇ*
*ಕಣ್ಣಿಗೆ ಮೋಸವಾಗಿ ಬಲುಬುದ್ಧಿಗೆ ಕಣ್ಣಿಯಾದ*
*ಟಿ.ವಿ.ಯೇ*
*ಆಳುವ ದೊರೆಗಳ ಮುಂದೆ ಡೊಂಕು ಬಾಲವಾದ*
*ಟಿ.ವಿ.ಯೇ*
*ಮನೆಮಂದಿಗೆಲ್ಲ ಮಾಯದ ಪಂಜರವಾದ*
*ಟಿ.ವಿ.ಯೇ*
*ಸೂಜಿ ಇಲ್ಲದಲೆ ಎಲ್ಲರ ಬಾಯಿ ಹೊಲಿಯುವ*
*ಟಿ.ವಿ.ಯೇ*
*ಬಟ್ಟೆಯಿಲ್ಲದಲೆ ಗಾಂಧಾರಿಯಂತೆಲ್ಲರ*
*ಕಣ್ಣು ಕಟ್ಟಿದ ಟಿ.ವಿ.ಯೇ*
*ಮನದ ಚಿತ್ರ, ಪರದೆ ಹರಿದು ಕಣ್ಣುಗುಡ್ಡೆಯ*
*ಚಿತ್ರವಾದ ಟಿ.ವಿ.ಯೇ*
*ಮಕ್ಕಳ ಕಾಲ್ಮುರಿದು ಕೂರಿಸಿ ಮುಪ್ಪಿಗೆ ದೂಡಿದ*
*ಟಿ.ವಿ.ಯೇ*
*ಲೋಕದಿ ಗಿರಿವನ ಪ್ರಿಯರ ಮನದಲಿ ಹುಡುಕಲು*
*ಸಿಗದಂಥ ಟಿ.ವಿ.ಯೇ*

*ಟಿ.ವಿ.ಯೇ ನೀನು ಠೀವಿಯೇ*
*ಈ ಧರಣಿಯನೆಲ್ಲ ಭರಣಿಯೊಳಿಟ್ಟು*
*ಜನರೆಲ್ಲರ ಮರುಳು ಮಾಡುವಂಥ ಟಿ.ವಿ.ಯೇ ॥*

ವಿ. ಚಂದ್ರಶೇಖರ ನಂಗಲಿ
೩೮೮, ಪಿ. ಸಿ. ಬಡಾವಣೆ
ಕೋಲಾರ-೫೬೩ ೧೦೧

## ಗಡಿಗಳ ವಿರುದ್ಧ ಯುದ್ಧಕ್ಕೆ ಹೊರಡುತ್ತಾರೆ

ಇವರಿಗೆ
ಗಡಿಯ ಆಚೆಯವ ಸತ್ತಿದ್ದಾನೆ
ಈಚೆಯವ ಹುತಾತ್ಮನಾಗಿದ್ದಾನೆ
ಅವರಿಗೆ
ಗಡಿಯ ಈಚೆಯವ ಸತ್ತಿದ್ದಾನೆ
ಆಚೆಯವ ಹುತಾತ್ಮನಾಗಿದ್ದಾನೆ
ಒಂದಂತೂ ಸತ್ಯ
ಇಬ್ಬರೂ ಹೆಣವಾಗಿದ್ದಾರೆ

ಇಬ್ಬರ ಹೆಂಡಂದಿರ
ಎದೆ ತುಂಬ ದುಃಖ ಗಂಟಲಲಿ ಬಿಕ್ಕು
ತುಟಿಯಲ್ಲಿ ಕಂಪನ ಕಣ್ತುಂಬ ನೀರಿವೆ
ಹೊರಳಾಡುತ್ತಿದ್ದಾರೆ ಬಿದ್ದು ನೆಲದ ಮೇಲೆ
ದುರಂತವೆಂದರೆ
ಅವರು ಒಬ್ಬರನ್ನೊಬ್ಬರು ನೋಡುವುದಿಲ್ಲ

ಇಬ್ಬರ ಅಪ್ಪ ಅವ್ವಂದಿರ
ಎದೆ ಗಂಟಲು ಕಣ್ಣು ಬತ್ತಿ ಮೂಕ
ಹಕ್ಕಿಗಳಾಗಿದ್ದಾರೆ
ಮೌನವಾಗಿ ನಿಟ್ಟುಸಿರು ಬಿಡುತ್ತಾರೆ
ದುರಂತವೆಂದರೆ
ಒಬ್ಬರ ಉಸಿರು ಇನ್ನೊಬ್ಬರನ್ನು ತಾಗುವುದಿಲ್ಲ

ಇಬ್ಬರ ಮಕ್ಕಳೂ ತಂದೆಯ ಹೆಸರಿಡಿದು
ಚೀರುತ್ತಿದ್ದಾರೆ ಗುಡ್ಡ ಬೆಟ್ಟ ಮಾರ್ದನಿಸುವಂತೆ
ದುರಂತವೆಂದರೆ
ಒಬ್ಬರ ಕೂಗು ಇನ್ನೊಬ್ಬರಿಗೆ ಕೇಳುವುದಿಲ್ಲ

ಎಂದಾದರೊಂದು ದಿನ ಅವರು
ಒಬ್ಬರನ್ನೊಬ್ಬರು ನೋಡಿದರೆ
ಒಬ್ಬರ ಉಸಿರು ಇನ್ನೊಬ್ಬರಿಗೆ ತಾಗಿದರೆ
ಒಬ್ಬರ ಕೂಗು ಇನ್ನೊಬ್ಬರಿಗೆ ಕೇಳಿದರೆ
ಎಲ್ಲರೂ ಕೂಡಿಯೇ
ಗಡಿಗಳ ವಿರುದ್ಧ ಯುದ್ಧಕ್ಕೆ ಹೊರಡುತ್ತಾರೆ.



ಎಂ. ಡಿ. ಒಕ್ಕುಂದ
ಪ್ರಥಮ ದರ್ಜೆ ಕಾಲೇಜು, ಸವಣೂರು-೫೮೧ ೧೧೮



# ಯುದ್ಧ

ಶ್ರೀನಿವಾಸ ಜೋಕಟ್ಟೆ

''ಈ ಸಲವೂ 'ಡಬ್ಬಿ' ಹಿಡಿದು ಜನ ಬರುವರೋ ಏನೋ....? ಐವತ್ತು ರೂಪಾಯಿ ನನಗೆ ಕೊಟ್ಟು ಹೋಗು. ನೀನಿಲ್ಲದಾಗ ಯಾರಾದರೂ ಬಂದರೆ ಬೇಕಲ್ಲ ಹಣ....''

ಮಗ ಸೋಮಶೇಖರ ಆಫೀಸ್‌ಗೆ ಹೊರಡುವ ವೇಳೆಗೆ ಫಕ್ಕನೆ ನೆನಪಾದವರಂತೆ ಕಾವೇರಮ್ಮ ಐವತ್ತು ರೂ. ಮಗನಲ್ಲಿ ಕೇಳಿದರು. ಯುದ್ಧ ನಡೆಯುತ್ತಿದೆಯಂತೆ. ಚಂಡಮಾರುತದ ಸಮಯ, ಭೂಕಂಪದ ಸಮಯ, ಯುದ್ಧದ ಸಮಯ... ಇತ್ಯಾದಿ ಸಂದರ್ಭಗಳಲ್ಲಿ ಊರಿನ ಯಾವುದೋ ಸಮಾಜ ಸೇವಾ ಸಂಸ್ಥೆಯ ಹೆಸರಿನಲ್ಲಿ ಕೆಲವರು ದುಡ್ಡು ಕೇಳಿಕೊಂಡು ಬರುವುದು ಕಾವೇರಮ್ಮನಿಗೆ ಗೊತ್ತು. ಆ ಸಲ ಕಾರ್ಗಿಲ್ ಯುದ್ಧದಲ್ಲೂ ಡಬ್ಬಿ ಹಿಡಿದು ವಂತಿಗೆಗೆ ಜನ ಬಂದಿದ್ದರು. ಯುದ್ಧ ಪರಿಹಾರ ನಿಧಿಗೆ ಕಾವೇರಮ್ಮನೂ ಐವತ್ತು ರೂ. ಡಬ್ಬಿಯೊಳಗೆ ಹಾಕಿದ್ದರು. ಈ 'ಡಬ್ಬಿ' ಈ ಊರಿನಿಂದ ದೆಹಲಿ ತನಕ ಹೋಗುವುದೋ ಇಲ್ಲವೋ ಎಂದು ಮಾತ್ರ ಅವರಿಗೆ ಗೊತ್ತಿರಲಿಲ್ಲ. ಅದನ್ನು ವಿಚಾರಿಸಲೂ ಹೋಗಿರಲಿಲ್ಲ. ಈಗ ಮತ್ತೆ ಯುದ್ಧದ ಸುದ್ದಿ ಕೇಳಿ ಬಂದಿದ್ದರಿಂದ ಯಾರಾದರೂ ಡಬ್ಬಿ ಹಿಡಿದು ನಿಧಿ ವಸೂಲಿಗೆಂದು ಖಂಡಿತಾ ಬರುವರೆಂದು ಕಾವೇರಮ್ಮ ಎಣಿಸಿದ್ದರು.

ಯುದ್ಧ ಅಂದರೆ ಕಾವೇರಮ್ಮನ ಪ್ರಕಾರ ಜಾಗಕ್ಕಾಗಿ ಗಲಾಟೆ. ತಮ್ಮ ಚಿಕ್ಕಪ್ಪ-ದೊಡ್ಡಪ್ಪ ಜಮೀನಿಗಾಗಿ ಮಾಡಿದ ಗಲಾಟೆಯಂತೆ. ಯುದ್ಧದಲ್ಲಿ ಸೈನಿಕರು ಸತ್ತರೆ 'ವೀರಸ್ವರ್ಗ' ಎನ್ನುವ ಮಾತು ಯಾರಾದರೂ ಆಡಿದರೆ ಕಾವೇರಮ್ಮ ತುಂಬಾ ನಗುತ್ತಾರೆ. ಅದು ಎದುರಾಳಿಗಳು ಮಾಡುವ ಕೊಲೆ ಅಲ್ಲವೇ ? ಕೊಲೆಯಾಗಿ ಸತ್ತರೆ, ಶಾಸ್ತ್ರದಲ್ಲಿ ಶಾಂತಿ ಮಾಡಿಸಬೇಕು ಎಂದು ಹೇಳಿದೆ ಹೊರತು 'ವೀರಸ್ವರ್ಗ' ಎಂದು ಎಲ್ಲಿ ಹೇಳಿದೆ, ಇತ್ಯಾದಿ ಪ್ರಶ್ನಿಸಿದ್ದ ಕಾಲವೊಂದಿತ್ತು.

ಕಾರ್ಗಿಲ್ ಯುದ್ಧದ ಸಮಯ ದೇಶಭಕ್ತಿಯ ಹಾಡುಗಳನ್ನು, ಸಿನಿಮಾಗಳನ್ನು ಅವರು ನೋಡಿದ್ದಿದೆ - ಟಿ.ವಿ.ಯಲ್ಲಿ! ನಮ್ಮ ಸೈನಿಕರೇ ಗೆಲ್ಲಲಿ ಎಂದು ಶುಭ ಹಾರೈಸುತ್ತಿದ್ದರು. ಡಬ್ಬಿ ಹಿಡಿದು 'ಯುದ್ಧ ನಿಧಿ' ಕೇಳಲು ಬಂದವರಿಗೆ ಐವತ್ತು ರೂ. ನೋಟನ್ನು ಹಾಕಿದ್ದರು. ದೇಶವಿಡೀ ಆತಂಕ ಸ್ಥಿತಿಯಲ್ಲಿದ್ದುದನ್ನು ಅವರು ಪತ್ರಿಕೆಗಳಲ್ಲಿ ಬಂದ ವರದಿಗಳನ್ನು ಮಗನಿಂದ ಓದಿಸಿ ತಿಳಿದುಕೊಂಡಿದ್ದರು. ಆದರೆ ಒಂದು ದಿನ ತಾಲೂಕಾಫೀಸಿಗೆ ಹೋಗಿ ಬಂದ ನೆರೆಮನೆಯ ಪದ್ಮಕ್ಕ, ಪೊಲೀಸ್ ಸ್ಟೇಷನ್‌ಗೆ ದೂರು ಕೊಡಲು ಹೋಗಿಬಂದ ನಾಗಿ... ಮೊದಲಾದವರೆಲ್ಲ ಅಲ್ಲಿಯ ಜನರ ಕೊಳಕು ಬುದ್ಧಿ, ಭ್ರಷ್ಟಾಚಾರಗಳನ್ನು ಯಥಾವತ್ತಾಗಿ ವರದಿ ಒಪ್ಪಿಸಿದ ನಂತರ ಕಾವೇರಮ್ಮ ಮರು ಚಿಂತನೆ ಮಾಡಿದ್ದಿದೆ. ನಾವೆಷ್ಟೇ ದೇಶ ಪ್ರೇಮ ತೋರಿಸಿದರೂ ಈ ಸರಕಾರಿ ಕಛೇರಿಗಳವರ ಭ್ರಷ್ಟಾಚಾರ ಹಾಗೆಯೇ ಇದೆಯಲ್ಲಾ? ಹಾಗಿರುವಾಗ ಯುದ್ಧದಲ್ಲಿ ಯಾರು ಗೆದ್ದರೇನು ? ಸೋತರೇನು ? ಭವ್ಯ ಬಂಗ್ಲೆಗಳಲ್ಲಿ, ಮಾರುತಿ ಕಾರಲ್ಲಿ ಸುತ್ತಾಡುವವರು ಹಾಗೆಯೇ ಇರುತ್ತಾರೆ. ನಾವು ಯಾಕೆ ಯುದ್ಧದಲ್ಲಿ ಗೆದ್ದಾಗ ರೋಮಾಂಚನಗೊಳ್ಳಬೇಕು ? ಗೆದ್ದರೂ ನಮ್ಮಂಥವರ ಸ್ಥಿತಿ ಹೀಗೆಯೇ ಇರುವುದಿದ್ದರೆ ಪ್ರತಿಕ್ರಿಯೆಯನ್ನೇ ನೀಡುವುದನ್ನು ನಿಲ್ಲಿಸಬೇಕು.... ಇತ್ಯಾದಿ ತಮ್ಮಲ್ಲೇ ಯೋಚಿಸುತ್ತಿದ್ದರು.

* * *

ಮಗ ಆಫೀಸಿಗೆ ಹೊರಟ ನಂತರ ಟಿ.ವಿ. ಸ್ವಿಚ್ ಆನ್ ಮಾಡಿದರು. ಒಂದೇ ಒಂದು ಕನ್ನಡ ಚ್ಯಾನೆಲ್ ಬರಲಿಲ್ಲ. ನಿನ್ನೆ ರಾತ್ರಿ 'ಕೊಡೆ'ಯನ್ನು (ಅವರು ಡಿಶ್‌ಗೆ ಹಾಗೆ ಹೇಳುವುದು) ಮಗ ತಿರುಗಿಸುತ್ತಿದ್ದುದು ಕಾವೇರಮ್ಮ ಕಂಡಿದ್ದರು. ಆನಂತರ ಕನ್ನಡ ಚ್ಯಾನೆಲ್ ಗಳೆಲ್ಲ ಹೋಗಿಬಿಟ್ಟಿತ್ತು. ಕೊರಿಯಾ, ಚೀನಾ, ಜಪಾನ್, ಜರ್ಮನಿ.. ಇಂತಹ ಚ್ಯಾನೆಲ್‌ಗಳನ್ನೆಲ್ಲ ಮಗ ಅಮ್ಮನಿಗೆ ನಿನ್ನೆ ರಾತ್ರಿ ಕಾಣಿಸಿದ್ದ. ಅಫಗಾನ್ ಯುದ್ಧದ ಕೆಲವು ವಿಶೇಷ ದೃಶ್ಯಗಳನ್ನೂ ಅವನು ತೋರಿಸಿದ್ದ. ತಾಲೀಬಾನ್ ಸರಕಾರದ ಜನ ತಮ್ಮ ಮೀಟಿಂಗ್ ಕೋಣೆಯ ಎದುರು ಕಾಲು ಒರೆಸಲು ಅಮೆರಿಕಾದ ಧ್ವಜವನ್ನು ನೆಲದಲ್ಲಿ ಹಾಸಿದ್ದುದು, ಅದರಲ್ಲಿ ಕಾಲು ತಿಕ್ಕಿ ಕೋಣೆಯೊಳಕ್ಕೆ ಹೋಗುತ್ತಿದ್ದ ದೃಶ್ಯ ಕಂಡು ಅವಕ್ಕಾಗಿದ್ದರು ಕಾವೇರಮ್ಮ. ಪ್ರತಿಯೊಂದನ್ನೂ ಮಗನೇ ವಿವರಿಸಿ ಹೇಳಬೇಕಾಗಿತ್ತು.

ಮತ್ತೆ ಯುದ್ಧ ಶುರುವಾಗಿದೆಯಂತೆ ಎನ್ನುತ್ತಲೇ ಕಾವೇರಮ್ಮನಿಗೆ ವಿಪರೀತ ಚಿಂತೆ. ಯಾವತ್ತೋ ಓದಿದ್ದು ಅವರಿಗೆ ಮತ್ತೆ ನೆನಪಿಗೆ ಬರುತ್ತದೆ. ವಿಭಿನ್ನ ಯುದ್ಧಗಳಲ್ಲಿ ನಡೆದ ನರಸಂಹಾರದ ಕತೆ ಅವರಿಗೆ ಓದಿ ಗೊತ್ತಿದೆ. ಮಹಾಭಾರತ ಯುದ್ಧದಲ್ಲಿ ಅರುವತ್ತು ಲಕ್ಷ, ಪ್ರಥಮ ವಿಶ್ವ ಯುದ್ಧದಲ್ಲಿ ಒಂದು ಕೋಟಿ ಮೂವತ್ತು ಲಕ್ಷ, ದ್ವಿತೀಯ ವಿಶ್ವ ಸಮರದಲ್ಲಿ ಐದು ಕೋಟಿ, ಇರಾನ್ - ಇರಾಕ್ ಯುದ್ಧದಲ್ಲಿ ಹದಿನೈದು ಲಕ್ಷ, ವಿಯೆಟ್ನಾಂ ಯುದ್ಧದಲ್ಲಿ ನಲವತ್ತು ಲಕ್ಷ, ಗಲ್ಫ್ ಯುದ್ಧದಲ್ಲಿ ನಾಲ್ಕು ಲಕ್ಷ, ಕಾರ್ಗಿಲ್ ಯುದ್ಧದಲ್ಲಿ.......... ಇಪ್ಪತ್ತನೆಯ ಶತಮಾನ ನರಸಂಹಾರಕ್ಕೆ ! ಸದಾ ನೆನಪಿನಲ್ಲಿರುವ ಮಾತನ್ನು ಅವರು ಮಾತಿನ ನಡುವೆ ಆಗಾಗ ಹೇಳುವುದಿದೆ. ಪ್ರಪಂಚದಲ್ಲಿ ಶಸ್ತ್ರಗಳನ್ನು ಮಾರಾಟ ಮಾಡಿದರೆ ಒಂದು ದಿನ ಇಂತಹ ಘಟನೆ ಆಗಲೇ ಬೇಕೆನ್ನುವುದು ಅವರಿಗೆ ಖಂಡಿತಾ ಗೊತ್ತಿತ್ತು. ಶಸ್ತ್ರಗಳನ್ನು ಯಾರಾದರೂ ಶೋಕಿಗಾಗಿ ಖರೀದಿಸುತ್ತಾರೋ ? ಇಲ್ಲವಲ್ಲ! ಅದರಿಂದ ಏನಾದರೂ ಉಪಕಾರ ಆಗಬೇಕು. ಈ 'ಉಪಕಾರ' ಅಂದರೆ ಇನ್ನೊಬ್ಬರಿಗಿಂತ ತಾನು

ಮೇಲು ಎಂದು ತೋರಿಸಿ ಕೊಳ್ಳುವುದಲ್ಲವೇ ?

ನಿನ್ನೆ ರಾತ್ರಿ ಅಫಘಾನ್ ನಾಗರಿಕರು ತಂತಿ ಬೇಲಿಯಿಂದ ಒಳಬಂದು ಡೇರೆಯೊಳಗೆ 'ಅವಿತು' ಕೊಂಡ ದೃಶ್ಯಗಳನ್ನು ನೋಡಿದ ನಂತರ ಕಾವೇರಮ್ಮ ತುಂಬ ಮಂಕಾಗಿದ್ದರು. ಸೋವಿಯತ್ ಸಾಮ್ರಾಜ್ಯದ ಪತನದ ನಂತರ ಆತಂಕವಾದ ಘಟನೆಗಳು ಹೆಚ್ಚಾಗಿರುವುದನ್ನು ಅವರು ಬಲ್ಲರು. ತಾವು ಟೀಚರ್ ಆಗಿದ್ದಾಗ ಆ ಬಗ್ಗೆ ತರಗತಿಗಳಲ್ಲೂ ಚರ್ಚಿಸಿದ್ದರು. ರಷ್ಯಾ ಈ ತನಕ ಕೇವಲ ಏಕಾಂಗಿಯಾಗಿಯೇ ಹೋರಾಟ ಮಾಡಿದಾಗ ಯಾರೂ ಬೆಂಬಲಕ್ಕೆ ನಿಂತಿರಲಿಲ್ಲ. ಕಳೆದ ಕೆಲವು ವರ್ಷಗಳಿಂದ ರಷ್ಯಾದ ನೆರೆಯ ಚೆಚನ್ಯಾ ಅಂತರರಾಷ್ಟ್ರೀಯ ಆತಂಕವಾದದ 'ಅಡ್ಡೆ' ಆಗುತ್ತಿದೆ. ಅರಬರ ದೇಶಗಳಿಂದ ಬರುವ ಭಾರೀ ಹಣದ ಬಲದಲ್ಲಿ ಚೆಚನ್ಯಾ ಆತಂಕವಾದ ಸೃಷ್ಟಿಸುತ್ತಿದೆ. ಚೆಚನ್ಯಾದ ಯುವಕರು ಅಫಘಾನಿಸ್ತಾನ ಮತ್ತು ಪಾಕಿಸ್ತಾನದ ಸೈನಿಕ ಶಿಬಿರಗಳಲ್ಲಿ ತರಬೇತಿ ಪಡೆದು ಹಿಂತಿರುಗಿ ರಷ್ಯಾ ಗಡಿಯಲ್ಲಿ ಆತಂಕವುಂಟು ಮಾಡುತ್ತಿದ್ದಾರೆ. ಈಗ, ಸೋವಿಯತ್ ಒಕ್ಕೂಟವನ್ನೂ ವಿಭಜಿಸಿ, ಅಫಘಾನಿಸ್ತಾನದಲ್ಲಿ ತಾಲೀಬಾನ್ ಸರಕಾರ ಆಡಳಿತಕ್ಕೆ ಬರುವಂತೆ ಮಾಡಿದ ಅಮೆರಿಕಕ್ಕೆ ಬುದ್ಧಿ ಬಂದದ್ದು ಒಳ್ಳೆಯದಾಯಿತು. ಈಗ ಅಂತರರಾಷ್ಟ್ರೀಯ ಭಯೋತ್ಪಾದನೆಯನ್ನು ತನ್ನ ನೇತೃತ್ವದಲ್ಲಿ ದಮನಿಸಲು ಹೊರಟ ಅಹಂಕಾರಿ ಅಮೆರಿಕ ಏನು ಮಾಡುವುದೆಂದು ವೀಕ್ಷಿಸುವ ಕುತೂಹಲ ಕಾವೇರಮ್ಮನಿಗೂ ಇತ್ತು.

* * *

ಮೊನ್ನೆ ಇದ್ದಕ್ಕಿದ್ದ ಹಾಗೆ ಕಾವೇರಮ್ಮನಿಗೆ ಒಂದು ಕಿವಿ ಸರಿಯಾಗಿ ಕೇಳಿಸದೆ ಹೋದಾಗ ತುಂಬ ಫಜೀತಿ ಅನುಭವಿಸಿದರು. ಪಕ್ಕದ ಮನೆಯವರಿಗೆ ತೊಂದರೆಯಾಗುವುದು ಬೇಡ ಎಂದು ಟಿ.ವಿ. ಮೆಲ್ಲಗೆ ಇರಿಸಿದರೆ ಕಾವೇರಮ್ಮನಿಗೆ ಏನೂ ಕೇಳಿಸುತ್ತಿರಲಿಲ್ಲ. ಮಗನೇ ಎಲ್ಲವನ್ನೂ ವಿವರಿಸಿ ಹೇಳುವ ಸ್ಥಿತಿ ನಿರ್ಮಾಣವಾಗಿತ್ತು.

ಆ ಸಂಜೆ ಮಗ ಮನೆಗೆ ಬಂದಾಗ ರಸ್ತೆವರೆಗೂ ಟಿ.ವಿ. ಶಬ್ದ ಕೇಳಿಸುತ್ತಿತ್ತು. ಮನೆಯೊಳಗೆ ಕಾಲಿಟ್ಟಾಗ ಕಾವೇರಮ್ಮ ಟಿ.ವಿ. ಎದುರು ಕೂತು ಸಮಾಚಾರ ಕೇಳುತ್ತಿದ್ದರು. ''ಯಾಕಮ್ಮ ಇಷ್ಟು ಗಟ್ಟಿ ಇಟ್ಟೆ'' ಅಂದರೂ ಕಾವೇರಮ್ಮ ಇತ್ತ ತಿರುಗಲಿಲ್ಲ. ಕೊನೆಗೆ ಮಗನೇ ಬಂದು ಟಿ.ವಿ. ಸ್ವಿಚ್ ಬಂದ್ ಮಾಡಿದಾಗಲೇ ಕಾವೇರಮ್ಮ 'ಯಾವಾಗ ಬಂದೆ ?' ಅಂತ ಕೇಳಿದ್ದು. ಆಗಲೇ ಗೊತ್ತಾದುದು ಅಮ್ಮನಿಗೆ ಒಂದು ಕಿವಿ ಸರಿಯಾಗಿ ಕೇಳಿಸುತ್ತಿಲ್ಲ ಎಂದು.

ಇದೇನು, ಯುದ್ಧದ ಬಂದೂಕಿನ, ಕ್ಷಿಪಣಿಗಳ ಸದ್ದಿಗೆ ಒಂದು ಕಿವಿ ಕೇಳಿಸದೆ ಹೋಗಿರಬಹುದೇ ? ಮಗ ಚಿಂತಿತನಾದ. ಅಂದಿನಿಂದ ಯುದ್ಧದ ವಿವರಗಳನ್ನು ಒಪ್ಪಿಸುವುದು ಸಮಸ್ಯೆಯೇ ಆಗಿತ್ತು. ಅಂದು ಕಾವೇರಮ್ಮ ಹೇಳಿದರು - ''ಕೊಡೆ ತಿರುಗಿಸಿಡಬೇಡ. ಒಂದೇ ಒಂದು ಕನ್ನಡ ಚ್ಯಾನೆಲ್ ಬರುವುದಿಲ್ಲ.''

''ನಾಳೆ ಬೆಳಿಗ್ಗೆ ಕೆಲಸಕ್ಕೆ ಹೊರಡುವಾಗ ನಿನಗೆ ಕನ್ನಡ ಚ್ಯಾನೆಲ್ ಬರುವಂತೆ ಮಾಡುತ್ತೇನೆ. ರಾತ್ರಿಗೆ ಅದೇ ಚ್ಯಾನೆಲ್‌ಗಳು ಬೇಕು'' ಎಂದ ಮಗ. ಅದಕ್ಕೆ ಕಾವೇರಮ್ಮ ಒಪ್ಪಿದರು.

ಆ ರಾತ್ರಿ ಊಟದ ನಂತರ ಟಿ.ವಿ. ಸ್ವಿಚ್ ಆನ್ ಮಾಡಿದರೆ ಯಾವುದೂ ಬರಲಿಲ್ಲ. ಮಗ ಎದ್ದು ಡಿಶ್‌ನತ್ತ ತೆರಳಿ ಆಚೀಚೆ ತಿರುಗಿಸಿದ. ಏನೂ ಪ್ರಯೋಜನವಾಗಲಿಲ್ಲ.

''ಅಮ್ಮ, ಏನೋ ಹಾಳಾಗಿದೆ ಅನಿಸುತ್ತದೆ. ನಾಳೆ ರಿಪೇರಿಗೆ ಜನ ಕರೆತರುವೆ. ಈಗ ಯಾವ ಚ್ಯಾನೆಲ್‌ಗಳೂ ಬರುತ್ತಿಲ್ಲ'' ಎಂದ ಮಗ ವಿಷಾದದಿಂದ.

ಕಾವೇರಮ್ಮ ಒಳಗಿನಿಂದಲೇ ನಿಟ್ಟುಸಿರುಬಿಟ್ಟರು. ''ಸದ್ಯಕ್ಕೆ ರಿಪೇರಿ ಮಾಡುವುದು ಬೇಡ. ಯುದ್ಧ ಮುಗಿಯಲಿ. ಇಲ್ಲವಾದರೆ ನನ್ನ ಇನ್ನೊಂದು ಕಿವಿಯೂ ಹಾಳಾಗಿಹೋದೀತು'' ಎಂದಾಗ ಮಗನಿಗೆ ಆ ಕ್ಷಣವೂ 'ಇದು ಸತ್ಯ' ಎನಿಸಿತು.

**ಶ್ರೀನಿವಾಸ ಜೋಕಟ್ಟೆ**
ಜೋಕಟ್ಟೆ-೫೭೪ ೧೭೩

# ಜೀವಹಿಂಡುವ ನಾಲ್ಕು ಮಹಾಮಾರಿಗಳು

ದೇಶದ ಅಭಿವೃದ್ಧಿಗೆ, ಸಾಮಾಜಿಕ ಸುಖಶಾಂತಿಗೆ, ಎಲ್ಲಾ ಬಣ್ಣವನ್ನೂ ಮಸಿ ನುಂಗುವಂತೆ ಅಭಿವೃದ್ಧಿಯ ಸಮಸ್ತ ಯೋಜನೆಗಳನ್ನೂ ಮಣ್ಣುಪಾಲು ಮಾಡುವ, ದೇಶದ ಎಲ್ಲೆಡೆ ಕ್ಯಾನ್ಸರಿನಂತೆ ಹಬ್ಬಿರುವ ಭ್ರಷ್ಟಾಚಾರ, ಲಂಚ, ಮದ್ಯಪಾನ ಮತ್ತು ಲಾಟರಿ ಎಂಬ ನಾಲ್ಕು ಮಹಾಮಾರಿಗಳನ್ನು, ದುಷ್ಟ ಚತುಷ್ಟಯವನ್ನು ಇನ್ನಾದರೂ ದೇಶದಿಂದ ಬಡಿದೋಡಿಸಲೇ ಬೇಕಾದ ಕಾಲ ಸನ್ನಿಹಿತವಾಗಿದೆ. ಇಂದು ದೇಶದ ಪ್ರಗತಿಗೆ, ಮುಖ್ಯವಾಗಿ ಗ್ರಾಮೀಣ ಜನರ ಜೀವನಸ್ತರವನ್ನು ಉತ್ತಮಗೊಳಿಸುವುದಕ್ಕಾಗಿ ಕೇಂದ್ರ ಮತ್ತು ಪ್ರಾಂತ ಸರ್ಕಾರಗಳು ಕೈಗೊಂಡಿರುವ ಯೋಜನೆಗಳಿಗೆ ಲೆಕ್ಕವೇ ಇಲ್ಲದಾಗಿದೆ. ಖರ್ಚು ಮಾಡುತ್ತಿರುವ ಹಣವಾದರೋ ಹಲವು ಕೋಟಿಗಳದ್ದು. ಆದರೂ ನಮ್ಮ ದೇಶ ಹೇಳುವಷ್ಟು ಮುಂದಕ್ಕೆ ಸಾಗಲೇ ಇಲ್ಲ. ಕಾರಣ ಹಲವಾರು. ಅವುಗಳಲ್ಲಿ ಪ್ರಮುಖವಾದುದು ಭ್ರಷ್ಟಾಚಾರ.

**ಭ್ರಷ್ಟಾಚಾರ**

ಕೇಂದ್ರ ಸರ್ಕಾರವು 'ಗ್ರಾಮೀಣ ಸದರಿ' ಯೋಜನೆಯನ್ನು ಜಾರಿಗೆ ತಂದು ಒಂದು ವರ್ಷಕ್ಕೆ ಹತ್ತಿರವಾಗುತ್ತಾ ಬಂತು. ಎಲ್ಲಾ ಹಳ್ಳಿಗಳಿಗೂ ಉತ್ತಮ ಮಾರ್ಗ ಸಂಪರ್ಕವನ್ನು ಕಲ್ಪಿಸುವ ಈ ಯೋಜನೆ ಹಲವು ಕೋಟಿಗಳದ್ದು. ಇರುವ ಮಾರ್ಗಗಳನ್ನೇ ಸರಿಪಡಿಸದಿರುವಾಗ ಹೊಸ ಮಾರ್ಗಗಳನ್ನು ನಿರ್ಮಿಸಿ ಸಂಪರ್ಕ ಕಲ್ಪಿಸುವ ಕನಸು ಕಾಲಮಿತಿಯಾದ ಏಳು ವರ್ಷ ಸಂದರೂ ನನಸಾಗದು. ಏಕೆಂದರೆ ಇಲ್ಲಿ ನಡೆಯುವ ಭ್ರಷ್ಟಾಚಾರ ಅಲ್ಪ ಪ್ರಮಾಣದ್ದೇನಲ್ಲ. ಯೋಜನೆಯನ್ನು ಅನುಷ್ಠಾನಗೊಳಿಸುವ ಅಧಿಕಾರಿಗಳಿಗೂ, ಗುತ್ತಿಗೆದಾರರಿಗೂ ಅವಿಚ್ಛಿನ್ನ ಸಂಬಂಧವಿದ್ದು ಖರ್ಚಾಗುವ ಹಣದಲ್ಲಿ ಬಂದ ಪಾಲನ್ನು ಅವರೇ ದಕ್ಕಿಸಿಕೊಳ್ಳುತ್ತಾರೆ. ರಸ್ತೆಗೆ 'ಡಾರು' ಹಾಕಿದರೆ ಕಳಪೆ ಕಾಮಗಾರಿಕೆಯ ದೆಸೆಯಿಂದ ಆರು ತಿಂಗಳುಗಳಲ್ಲೇ ಎದ್ದುಹೋಗಿ ಹಳ್ಳಕೊಳ್ಳಗಳು ತಲೆ ಎತ್ತಿ ನಿಲ್ಲುತ್ತವೆ. ಸಂಪರ್ಕಗಳು ಮುರಿದುಬೀಳುತ್ತವೆ. ಸೇತುವೆಗಳು ಕರಗಿಹೋಗುತ್ತವೆ. ಕಾಲುವೆಗಳು ಒಡೆದು ಹೋಗುತ್ತವೆ. ಆದರೂ ಯಾರೂ ತಲೆ ಕೆಡಿಸಿಕೊಳ್ಳುವುದಿಲ್ಲ. ಸರ್ಕಾರದ ಕೆಲಸವಲ್ಲವೇ ? ನಮ್ಮ ಜೇಬಿಗೇನು ಬಂತು ಕುತ್ತು ?

ಇಂದಿರಾ ಆವಾಸ ಯೋಜನೆಯ ಅಡಿಯಲ್ಲಿ ಬಡವರಿಗಾಗಿ ಕಟ್ಟಿದ ಮನೆಗಳಲ್ಲಿ ವಾಸ ಮಾಡಬೇಕಾದರೆ ಎಂಟೆದೆ ಬೇಕು. ನೀರು ಸೋರುವುದು ಮಾತ್ರವಾದರೆ ಕೊಡೆ ಹಿಡಿದು ಕಾಲ ಕಳೆಯಬಹುದು. ಕುಸಿದು ಬೀಳುವಾಗ ?

ಎರಡು ವರ್ಷಗಳ ಹಿಂದೆ ಕೇಂದ್ರ ಸರ್ಕಾರವು ಗ್ರಾಮೀಣ ನೈರ್ಮಲ್ಯಕ್ಕಾಗಿ ಪ್ರಾಂತ ಸರ್ಕಾರಕ್ಕೆ 25 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿತು. ಎಲ್ಲಿಗೆ ಹೋಯಿತು ಆ ಹಣ ? ಹಳ್ಳಿಗಳಿಗೆ ಹೋಗಿ ನೋಡಿದರೆ ಎಲ್ಲೆಲ್ಲೂ ಕೊಳಚೆ ಪ್ರದೇಶಗಳೇ ? ಪ್ಲಾಸ್ಟಿಕ್ಕಿನ ರಾಶಿಗಳೇ ಕಣ್ಣಿಗೆ ಬೀಳುತ್ತವೆ. ಇನ್ನೊಂದು, ಸುಲಭ ಶೌಚಾಲಯದ ಯೋಜನೆ. ಮತ್ತೊಂದು ಬಡವರಿಗೆ ಮನೆಕಟ್ಟಿಕೊಳ್ಳಲು 20 ಸಾವಿರದವರೆಗೆ ಧನ ಸಹಾಯ. ಉಸ್ತುವಾರಿ ಗ್ರಾಮ ಪಂಚಾಯತುಗಳದ್ದು. ಭ್ರಷ್ಟ ಅಧಿಕಾರಿಗಳ ಸಲಹೆಯಂತೆ ಹುಲ್ಲಿನ ಮಾಡನ್ನು ಕಿತ್ತೆಸೆದು, 'ಶೀಟು' ಹಾಕಿ, ಸುಣ್ಣ ಬಣ್ಣ ಬಡಿದು ಹೊಸ ಮನೆ ಕಟ್ಟಿಕೊಂಡೆ, ಎಂದು ಹೇಳಿ ಹಣ ದಕ್ಕಿಸಿಕೊಂಡವರು ಎಷ್ಟು ಮಂದಿ ಇಲ್ಲ! ಇದೇ ರೀತಿ ಭಾಗ್ಯ ಜ್ಯೋತಿಯ ಹೆಸರಿನಲ್ಲಿ ವಿದ್ಯುತ್ ಸರಬರಾಜು ನಿಗಮವನ್ನು ವಂಚಿಸುತ್ತಾ, ಮನೆಯಲ್ಲಿ ಫ್ರಿಜ್, ಟಿ.ವಿ., ಗ್ರೈಂಡರ್ ಮೊದಲಾದವುಗಳನ್ನು ಇಟ್ಟು ಮೆರೆಯುವ ಜನ ಎಷ್ಟಿಲ್ಲ! ಇದು ಅಧಿಕಾರಿಗಳಿಗೆ ಗೊತ್ತಿಲ್ಲವೇ ? ಆದರೆ ತಡೆಯಲು ಯಾರಲ್ಲಿದೆ ಎದೆಗಾರಿಕೆ ? ಪರಿಣಾಮ, ನಿಗಮ ಕೋಟಿಗಟ್ಟಲೆ ರೂಪಾಯಿಗಳ ನಷ್ಟದಲ್ಲಿ ದರ ಏರಿಸಿ ಜನ ಸಾಮಾನ್ಯರಿಂದ ವಸೂಲಿ. ಎಮ್ಮೆಗೆ ಜ್ವರ ! ಎತ್ತಿಗೆ ಬರೆ ! ನಷ್ಟಕ್ಕೆ ಹಲವು ಕಾರ್ಖಾನೆಗಳೂ ತಮ್ಮ ಪಾಲನ್ನು ಸಂದಾಯ ಮಾಡುತ್ತವೆ – ಸಂಬಂಧಪಟ್ಟ ಅಧಿಕಾರಿಗಳ ಕಿಸೆ ತುಂಬಿ.

ಹೀಗೆ ಒಂದಲ್ಲ, ಎರಡಲ್ಲ ಲೆಕ್ಕವಿಲ್ಲದಷ್ಟು ಭ್ರಷ್ಟಾಚಾರಗಳು ಎಲ್ಲಾ ಕ್ಷೇತ್ರಗಳಲ್ಲೂ ನಡೆಯುತ್ತಲೇ ಇರುತ್ತವೆ. ವಾಮ ಮಾರ್ಗದಿಂದ ಹಣ ಕೀಳುವುದೊಂದೇ ಇವುಗಳ ಮೂಲ ಉದ್ದೇಶ. ಎಲ್ಲರಿಗೂ ಇದು ಗೊತ್ತಿದೆ. ಎಲ್ಲರೂ ಇದನ್ನು ಖಂಡಿಸುತ್ತಾರೆ. ಉದ್ದುದ್ದ ಭಾಷಣ ಮಾಡುತ್ತಾರೆ. ಪುಟಗಟ್ಟಲೆ ಬರೆಯುತ್ತಾರೆ. ತಡೆಯುವ ತಾಕತ್ತು ಮಾತ್ರ ಯಾರಲ್ಲೂ ಕಂಡುಬರುವುದಿಲ್ಲ. ಹಾಕಿದ ಬೇಲಿಯೇ ಹೊಲ ಮೇಯುತ್ತಿರುವಾಗ ಹೆಚ್ಚಿನದೇನನ್ನೂ ನಾವು ನಿರೀಕ್ಷಿಸುವಂತೆಯೂ ಇಲ್ಲ. ಖಜಾನೆ ಬರಿದಾದ ಮೇಲೆ ಸರ್ಕಾರದ ಮುಂದೆ ಖರ್ಚಾದ ಹಣದ ಮತ್ತು ಪ್ರಗತಿಯ ದೊಡ್ಡ ಅಂಕೆಸಂಖ್ಯೆಗಳು ಮಾತ್ರ ದಾಖಲೆಯಲ್ಲಿ ಉಳಿದುಬಿಡುತ್ತವೆ. ಇದೊಂದೇ ಹೆಗ್ಗಳಿಕೆ !

**ಲಂಚ**

ಈ ಕಾಲದಲ್ಲಿ ಲಂಚ ಕೊಡದೆ ಒಂದು ಕೆಲಸ ಆಯಿತೆಂದರೆ ಅದೊಂದು ಪವಾಡವೆಂದೇ ಹೇಳಬೇಕು. ಬೆಂಗಳೂರಿನಂತಹ ನಗರಗಳಲ್ಲಿ ಒಬ್ಬ ಅಧಿಕಾರಿಯನ್ನು ಭೇಟಿಯಾಗಬೇಕಾದರೂ ದ್ವಾರಪಾಲಕನಿಗೆ ರೂ. ಹತ್ತನ್ನಾದರೂ ಕೊಡಲೇಬೇಕು. ಅಧಿಕಾರಿಯನ್ನು ಕಂಡು ಲಂಚದ ಬಲದಿಂದ ಕೆಲಸಗಳನ್ನೆಲ್ಲಾ ಮುಗಿಸಿದಿರಿ ಅನ್ನೋಣ. ಕೊನೆಗೆ ನೀವು ಪಡೆದ ಪ್ರಮಾಣ ಪತ್ರಕ್ಕೆ ಆಫೀಸಿನ ಮುದ್ರೆಯೊಂದನ್ನು ಹಾಕಿಸಿಕೊಳ್ಳಬೇಕಾಗಿದೆ. ರೂ. 20ನ್ನು ಕೊಟ್ಟಿರಾ ? ಮುದ್ರೆ ಬಿತ್ತೆಂದೇ ತಿಳಿಯಿರಿ.

ಹಣ ಇದೆಯೇ ? ವಾಹನ ನಡೆಸಲು ಲೈಸನ್ಸ್‌ನ್ನು ಮೊದಲು ಪಡೆಯಿರಿ. ಆಮೇಲೆ ಕಲಿಯಬಹುದು. ಹಿಂದುಳಿದ ಜನಾಂಗಕ್ಕೆ ಸೇರಿದವನೆಂದು ಸಾರಲು ಪ್ರಮಾಣ ಪತ್ರ ಬೇಕೇ ? ಸ್ವಲ್ಪ ಹೆಚ್ಚು ಖರ್ಚು ಮಾಡಬೇಕಷ್ಟೇ ! ಕೆಲಸಕ್ಕೆ ಸೇರಿ ಸಿಕ್ಕಿಬಿದ್ದಿರಾ ? ಚಿಂತಿಸಬೇಡಿ. ಸರ್ಕಾರ ನಿಮ್ಮನ್ನು ಕ್ಷಮಿಸಿಬಿಡುತ್ತದೆ. ಮುಂದೆ ಹೀಗಾಗದಂತೆ ನೋಡಿಕೊಳ್ಳಲು ಇಲಾಖೆಗಳಿಗೆ 'ಎಚ್ಚರಿಕೆ' ಕೊಡುತ್ತದೆ.

ವಿದ್ಯಾಸಂಸ್ಥೆಯೊಂದು ದೊಡ್ಡ ಮೊತ್ತದ ಡೊನೇಷನ್ ಪಡೆದು ನಿಮ್ಮ ಮಗನಿಗೆ ಸೀಟೊಂದನ್ನು ಕೊಡುತ್ತದೆ. ಪರೀಕ್ಷೆಯಾಗುವಾಗ ವಿಶ್ವವಿದ್ಯಾಲಯದ ಮಾನ್ಯತೆ ಪಡೆಯದ ಸಂಸ್ಥೆಯೆಂದು ಹೇಳಿ ವಿದ್ಯಾರ್ಥಿಗಳಿಗೆ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡುವುದಿಲ್ಲ. ಕೋರ್ಟು ಅನುಕಂಪ ಹಾಗೂ ಭವಿಷ್ಯದ ದೃಷ್ಟಿಯಿಂದ ವಿದ್ಯಾರ್ಥಿಗಳ ಸಹಾಯಕ್ಕೆ ಬರುತ್ತದೆ. ಸಂಸ್ಥೆಯ ಒಡೆಯ ಸುಲಭದಲ್ಲಿ ಕುಬೇರನಾಗಿಬಿಟ್ಟ !

ಸರ್ಕಾರಕ್ಕೆ ಸಂದಾಯ ಮಾಡಬೇಕಾದ ಕಂದಾಯವನ್ನು ಕಟ್ಟಲೂ ಲಂಚ ಕೊಡಬೇಕಾದ ಈ ದೇಶದಲ್ಲಿ ಇದೇ ಸ್ಥಿತಿ ಮುಂದುವರಿದರೆ ಇನ್ನು ನೂರು ವರ್ಷ ಸಂದರೂ ಈ ದೇಶ ಒಂದು ಇಂಚು ಮುಂದೆ ಸರಿಯದು.

**ಮದ್ಯಪಾನ**

ಗಾಂಧೀಜಿಯವರು 'ಮದ್ಯಪಾನವನ್ನು ನಿಷೇಧಿಸಬೇಕು, ಇದರಿಂದ ಬಡವರು ಸಂಪೂರ್ಣವಾಗಿ ನಾಶ ಹೊಂದುತ್ತಾರೆ' ಅಂದರು. ನಾವು ಗಾಂಧೀಜಿಯವರನ್ನು ಕೊಂದು, ಅವರ ಉಪದೇಶಗಳನ್ನು ಮರೆತು ಹಲವು ವರ್ಷಗಳಾದುವು. ಅವರನ್ನೇ ಕೊಂದ ಮೇಲೆ ಅವರ ಉಪದೇಶಗಳನ್ನು ಕೊಲ್ಲದೆ ಬಿಡುತ್ತೇವೆಯೇ ? ಕೊಲ್ಲದೇ ಇದ್ದರೂ ಉಪದೇಶಗಳನ್ನು ಕಟ್ಟಿಕೊಂಡು ನಮಗೇನಾಗಬೇಕು ? ಆದುದರಿಂದ ಇಂದು ಬೀದಿ ಬೀದಿ – ದೇವಸ್ಥಾನ, ಶಾಲೆಗಳನ್ನು ಸಹ ಬಿಡದೆ – ಅವುಗಳ ಬಳಿಯಲ್ಲೇ ಮದ್ಯದ ಅಂಗಡಿಗಳನ್ನು ತೆರೆದಿದ್ದೇವೆ. ಇದರಿಂದ ಸರ್ಕಾರಕ್ಕೆ ತುಂಬಾ ಆದಾಯ ಬರುತ್ತದೆ. ಸರ್ಕಾರ ನಡೆಸುವ ಪಕ್ಷಕ್ಕೂ ಬೇರೆ ಮೂಲಗಳಿಂದ ಆದಾಯ ಬರುತ್ತದೆ. ಆದುದರಿಂದ ಸರ್ಕಾರ ಇದನ್ನು ನಿಷೇಧಿಸಲು ಮನಸ್ಸೇ ಮಾಡುವುದಿಲ್ಲ. ಆದರೆ ಮದ್ಯಪಾನ ಹಾವಳಿಯಿಂದ ಬಡವರು ಇನ್ನಷ್ಟು ಬಡವರಾಗುತ್ತಿದ್ದಾರೆ. ಮಡದಿ ಮಕ್ಕಳನ್ನು ಉಪವಾಸ ಹಾಕಿಯಾದರೂ ಮದ್ಯ ಸೇವಿಸದ ಬಡವ, ಕೂಲಿಯಾಳು ಇಂದು ಕಾಣಸಿಗುವುದು ದುರ್ಲಭವೇ ! ಕುಡಿಯಲು ಹಣ ಇಲ್ಲದಾಗ ಮನೆಯ ಸಾಮಾನುಗಳನ್ನು ಅಡವಿಟ್ಟೋ ಮಾರಿಯೋ ಕುಡಿಯುತ್ತಾನೆ. ಮಡದಿಯನ್ನು ಹಣಕ್ಕಾಗಿ ಪೀಡಿಸುತ್ತಾನೆ. ಕತ್ತು ಹಿಸುಕಿ ಕೊಲ್ಲುತ್ತಾನೆ. ಸುಡುತ್ತಾನೆ. ವಿಷಪೂರಿತ ಮದ್ಯ ಕುಡಿದು ತಾವೂ ಸಾಯುತ್ತಾರೆ. ಆದರೂ ಸರ್ಕಾರ ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿಯುವಂತೆ ಸುಮ್ಮನೆ ಇದ್ದು ಬಡವರ ಹಣವನ್ನು ಹೀರುತ್ತಲೇ ಇರುತ್ತದೆ. ಆದರೆ ಒಂದೇ ಒಂದು ಪ್ರಶ್ನೆ. ಆದಾಯ ಇದೆಯೆಂದು ನಾವು ನಮ್ಮ ಮಡದಿಯನ್ನು ಸೂಳೆಗಾರಿಕೆಗೆ ತಳ್ಳುತ್ತೇವೆಯೇ ?

**ಲಾಟರಿ**

'ಲಾಟರಿ' ಮದ್ಯಪಾನದಷ್ಟೇ ದುಷ್ಟ ಚಟವಾಗಿದೆ. ಇದರಲ್ಲೂ ಬಡವರೇ ಹೆಚ್ಚು ಮಂದಿ ಪಾಲುಗೊಂಡು ಸರ್ವಸ್ವವನ್ನೂ ಕಳೆದುಕೊಳ್ಳುತ್ತಾರೆ. ಮಡದಿಯ ಕೊರಳಿನ ಮಾಂಗಲ್ಯ ಸರವನ್ನಾದರೂ ಮಾರಿ ಲಾಟರಿಗೆ ಹಣ ಹಾಕಲೇಬೇಕು. ಈ ಗೀಳು ಒಮ್ಮೆ ತಗಲಿತೆಂದರೆ ಮತ್ತೆ ಅದರಿಂದ ಹೊರಬರುವುದು ಕೆಸರಿನಿಂದ ಕಾಲೆತ್ತಲು ಪ್ರಯತ್ನಿಸುವುದೂ ಒಂದೇ. ಕೊನೆಗೂ ಹೊರಬರಲಾರದೆ ಅಲ್ಲೇ ಅವಸಾನ ನಿಶ್ಚಿತ !

'ಈ ದುಷ್ಟ ಚತುಷ್ಟಯ ಬಹಳ ಹಾನಿಕಾರಕ. ಇದರಿಂದ ಯಾರಿಗೂ ನೆಮ್ಮದಿ ಇಲ್ಲ ಸುಖವಿಲ್ಲ' ಎಂಬುದು ಎಲ್ಲರಿಗೂ ಗೊತ್ತಿದೆ. ಆದರೆ ಅವುಗಳನ್ನು ಹೊಡೆದೋಡಿಸುವ ಎದೆಗಾರಿಕೆ ಮಾತ್ರ ಯಾರಲ್ಲೂ ಕಾಣದಿರುವುದು ನಮ್ಮ ರಾಷ್ಟ್ರದ ದೊಡ್ಡ ದುರಂತ !

ಎಂ. ವಿ. ಭಟ್
'ಶ್ರೀ ಮಿತ್ತೂರು', ಮೇದರಹಳ್ಳಿ
ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

# ಕೆರೆಯಂಗಳದ ನವಾಬ

ಶಿ. ಜು. ಪಾಶ



ನವಾಬನ ಖತ್ನಾದ ಸುದ್ದಿ ಕೇಳಿ ಇಡೀ ಕೆರೆಯಂಗಳವೇ ಮುಸುಮುಸು ನಗತೊಡಗಿತ್ತು. ಬುರ್ಖಾದೊಳಗಿನ ಹಲ್ಲುಗಳು ಮೊದಲಬಾರಿಗೆ ಮಿಂಚಿದಂತೆ, ಕೆರೆಯಂಗಳದ ತುಂಬೆಲ್ಲ ಗುಸುಗುಸು ಮಾತುಗಳು ಕೇಳತೊಡಗಿದ್ದವು. ಗಧೇಕಿ ಉಮ್ಮರ್ ಆದರೂ ಖತ್ನಾ ಆಗಿರಲಿಲ್ಲವೆಂದು ಮೊದಲ ಬಾರಿಗೆ ತಿಳಿದ, ಆಗಷ್ಟೇ ಛಾತಿ ಬೆಳೆದ ಹುಡುಗಿಯರಲ್ಲಿ ವಯೋಸಹಜ ತುಂಟಾಟ ಶುರುಗೊಂಡಿತ್ತು. ಬೆಳೆದ ದೇಹಕ್ಕೆ ಖತ್ನಾ ಮಾಡಿಸುವುದಾದ್ರೂ ಹೇಗೆ ? ಎಂಬ ಸವಾಲಿನೊಂದಿಗೆ ಶುರುಗೊಳ್ಳುತ್ತಿದ್ದ ಅವರ ತುಂಟ ಮಾತಿನ ಕುತೂಹಲ, ಖತ್ನಾ ಮಾಡಿಸಿಕೊಂಡ ನವಾಬ ಹೇಗೆ ಕಂಡಾನು, ಎಂಬ ಕುತೂಹಲದೊಂದಿಗೇ ಆಖೈರು ಕಾಣುತ್ತಿತ್ತು.

ನವಾಬನ ಅಮ್ಮಿ ನಯೀಮಾ ತನ್ನ ಮಗನಿಗೆ ಖತ್ನಾ ಮಾಡಿಸುವ ಹಟ ತೊಟ್ಟಿದ್ದೇ ಕೆರೆಯಂಗಳದ ತುಂಬೆಲ್ಲ ಸುದ್ದಿ ಹರಡತೊಡಗಿತು. ಅವಳ ಹಟಕ್ಕೂ ಒಂದು ಕಾರಣವಿತ್ತು. ನವಾಬನಿಗೀಗಾಗಲೇ ಶಾದಿಯ ವಯಸ್ಸು. ಆದರೂ ಅವನ ಖತ್ನಾ ಆಗಿರಲಿಲ್ಲ. ಯಾಕೋ ನವಾಬನಿಗೆ ಆ ಅದೃಷ್ಟವೇ ಕೂಡಿಬಂದಿರಲಿಲ್ಲ. ಪ್ರತಿಸಾಲಿನ ಬೇಸಿಗೆಯಲ್ಲಿಯೂ ನವಾಬನ ಖತ್ನಾದ ಕನಸು ಕಾಣುತ್ತಿದ್ದ ನಯೀಮಾ ಅಂತಹ ಕನಸು ಕಾಣುವುದರಲ್ಲಿಯೇ ಇಪ್ಪತ್ನಾಲ್ಕು ಸಾಲುಗಳನ್ನು ಕಳೆದುಬಿಟ್ಟಿದ್ದಳು. ಈಗ ನವಾಬನಿಗೆ ಇಪ್ಪತ್ತೈದು ಸಾಲು. ಈಗಲೂ ಖತ್ನಾ ಮಾಡಿಸದಿದ್ದರೆ ಛೀಮಾರಿ ಹಾಕುತ್ತಿರುವ ಜನ ಮುಂದೆ ನಡುಬೀದಿಯಲ್ಲಿ ಉಗಿಯಲೂ ಆರಂಭಿಸಿದರೆ ಆಶ್ಚರ್ಯವಲ್ಲ. ಯಾವ ಗಂಡುಮಕ್ಕಳ ಅಮ್ಮಿಗಳೂ ಇಷ್ಟೊಂದು ತಡವಾಗಿ ಖತ್ನಾ ಮಾಡಿಸಿದ ಉದಾಹರಣೆ ಆ ಕೆರೆಯಂಗಳದ ಕೇರಿಯಲ್ಲಿಯೇ ಸಿಗುತ್ತಿರಲಿಲ್ಲ. ಪ್ರತಿ ವರ್ಷವೂ ನವಾಬನಿಗೆ ಖತ್ನಾ ಮಾಡಿಸಬೇಕೆಂದು ಪ್ರಯತ್ನಿಸಿದಾಗಲೆಲ್ಲಾ ಒಂದಲ್ಲ ಒಂದು ತಾಪತ್ರಯಗಳು ಎದುರಾಗಿಬಿಡುತ್ತಿದ್ದವು. ನಯೀಮಾ ಕಂಗಾಲಾಗಿ ಮುಂದಿನ ಬೇಸಿಗೆಗೆ ಮಾಡಿಸಿಯೇ ಬಿಡಬೇಕು ಎಂದುಕೊಳ್ಳುತ್ತಿದ್ದಳು. ಅದ್ಯಾವುದೂ ಸಾಧ್ಯವಾಗದೇ ಆಸ್ಮಾನನ್ನು ನೋಡುತ್ತಾ ಎದುರಾದ ಬೇಸಿಗೆಯನ್ನು ದೂಡಿ ಮತ್ತೊಂದು ಬೇಸಿಗೆಯ ಕನಸಿಗೆ ಸಿದ್ಧಗೊಳ್ಳುತ್ತಿದ್ದಳು.

ತನ್ನಮ್ಮಿ ಯಾವಾಗಲೂ ಹೀಗೇ ಎಂದು ಕೆಲವೊಮ್ಮೆ ಮೌನ ವಹಿಸಿಬಿಡುತ್ತಿದ್ದ ನವಾಬನಿಗೆ ನಿಜವಾಗಲೂ ಚಿಂತೆ ಶುರುವಾಗಿದ್ದು ಗೆಳೆಯರ ಜೊತೆ ಬೆರೆತು ಜಗತ್ತಿನ ಹುಡುಗಿಯರ ಬಗ್ಗೆ ಕತೆ ಕಟ್ಟತೊಡಗುತ್ತಿದ್ದ ಹದಿನೆಂಟರ ವಯಸ್ಸಿನಲ್ಲಿ. ರಮ್ಜಾನಿನ ರೋಜೆಗಳನ್ನು (ಉಪವಾಸ) ದಿನಕ್ಕೆ ಐದು ನಮಾಜುಗಳನ್ನು ಆಚರಣೆಗೆ ತರುತ್ತಲೇ ಬೆಳೆಯತೊಡಗಿದ್ದ ನವಾಬ ಹೋಗುತ್ತಿದ್ದುದು ಕನ್ನಡ ಶಾಲೆಯೊಂದಕ್ಕೆ. ಆದರೂ ಖುರಾನಿನ ಪ್ರತಿಶಬ್ದವೂ ಇವನ ಬಾಯಿಯಲ್ಲಿ ಉಚ್ಚಾರಣೆಗಾಗಿ ಸಾಲುಗಟ್ಟಿ ನಿಂತಂತೆ ಭಾಸವಾಗುತ್ತಿತ್ತು. ಕನ್ನಡ ಶಾಲೆಯಲ್ಲಿ ಖುರಾನನ್ನು ಹಿಂದೂ ಹುಡುಗರಿಗೆ ಕಲಿಸಿ ಕೊಡುತ್ತಿದ್ದಾನೇನೋ ಎಂಬಂತೆ ನವಾಬನ ವಿರುದ್ಧ ಮಾತು ಕೇಳಿಬಂದರೂ ಆತನ ಜೊತೆಯ ಹುಡುಗರೇ ಅದನ್ನು ನಿರಾಕರಿಸ ತೊಡಗುತ್ತಿದ್ದರು. 'ನವಾಬನಿಗೆ ರಾಮಾಯಣಾನೂ ಗೊತ್ತು ಮಹಾಭಾರತಾನೂ ಗೊತ್ತು' ಎಂದು ನವಾಬನ ಪರವಾಗಿಯೇ ಹಿಂದೂ ಹುಡುಗರು ಹಣೆಗೆ ಉದ್ದದ ನಾಮ ಎಳೆದು ತನಿಖೆಗೆ ಬಂದವರಿಗೆ ಹೇಳಿಕಳಿಸುತ್ತಿದ್ದರು.

ಕನ್ನಡ ಶಾಲೆಗೆ ನವಾಬನೆಂದರೆ ಒಂದು ರೀತಿಯಲ್ಲಿ ಅವನು ನವಾಬನೇ ಆಗಿಬಿಟ್ಟಿದ್ದ. ಅರಬ್ಬಿ, ಉರ್ದುವಿನಂತೆ ನವಾಬ ಕನ್ನಡವನ್ನು ಸ್ಪಷ್ಟವಾಗಿ ಉಚ್ಚರಿಸುತ್ತಿದ್ದ, ಬರೆಯುತ್ತಿದ್ದ. ಹಿಂದೂ ಗೆಳೆಯರು ಎಷ್ಟೋ ನೋಟ್ಸುಗಳನ್ನು ನವಾಬನಿಂದಲೇ ಬರೆಸಿಕೊಳ್ಳುತ್ತಿದ್ದುದರಿಂದ ಎಷ್ಟೋ ಹಬ್ಬಗಳಲ್ಲಿ ನವಾಬನೇ ಮುಖ್ಯ ಅತಿಥಿಯಾಗಿರುತ್ತಿದ್ದ. ಹೀಗೇ ಕೆಲವೊಮ್ಮೆ ಗೆಳೆಯರೆಲ್ಲ ಸೇರಿಕೊಂಡಾಗ ಗೆಳೆಯರು ಕುತೂಹಲದಿಂದ ಕೇಳುತ್ತಿದ್ದ ಒಂದೇ ಒಂದು ಪ್ರಶ್ನೆಗೆ ಮಾತ್ರ ನವಾಬ ತಲೆತಗ್ಗಿಸಿ ನಿಂತುಬಿಡುತ್ತಿದ್ದ. 'ಖತ್ನಾ ಮಾಡೋವಾಗ ನೋವಾಗ್ತದೆನೋ ? ನಿಂದು ಖತ್ನಾ ಮಾಡೋವಾಗಾನೂ ನೋವಾಗಿತ್ತೇನೋ ?' ಭಯ

ಮಿಶ್ರಿತ ಕುತೂಹಲದ ಪ್ರಶ್ನೆ ಯಾವಾಗಲೂ ನವಾಬನನ್ನು ಚುಚ್ಚಿ ಹಾಕುತ್ತಿತ್ತು. 'ನಂಗೆ ನೆನ್ಪಿಲ್ರೋ' ಎಂದಷ್ಟೇ ಹೇಳಿ ನವಾಬ ಆ ಗುಂಪಿನಿಂದ ದೂರವಾಗುತ್ತಿದ್ದ.

ಗೆಳೆಯರಿಂದ ದೂರವಾಗಿ ಸೀದಾ ಕೆರೆಯಂಗಳದ ಕೇರಿಗೆ ಊದಿಸಿಕೊಂಡ ಮುಖದೊಂದಿಗೆ ಬರುತ್ತಿದ್ದ ನವಾಬ ಝೋಪಡಿಗೆ ನುಗ್ಗಿ ತನ್ನಮ್ಮಿಯ ಸೆರಗು ಹಿಡಿದು ಕಣ್ಣೀರು ಹಾಕುತ್ತಿದ್ದ. ತಮ್ಮ ಭೈಯ್ಯಾ ಅಳುತ್ತಿರುವುದು ನೋಡಿ ನವಾಬನ ಸುತ್ತುವರಿದ ತಂಗಿಯರು ಮೌನವಾಗಿಯೇ ತಮ್ಮ ಭೈಯ್ಯಾನ ಮುಖ ನೋಡಿ, ಏನಾಯ್ತೆಂದು ಕಣ್ಣಲ್ಲಿಯೇ ಪ್ರಶ್ನಿಸಿದಾಗ ನವಾಬ ಮತ್ತಷ್ಟು ಕಂಗಾಲಾಗಿ ಅಮ್ಮಿಯ ಸೆರಗಿನಿಂದಲೇ ಕಣ್ಣು ತಿಕ್ಕಿ ಅಂಗಳಕ್ಕೆ ಹೋಗಿ ನಿಂತುಬಿಡುತ್ತಿದ್ದ. ಒಂದೊಂದು ಸಾಲಿನ ವ್ಯತ್ಯಾಸ ದೊಳಗೆಯೇ ಹುಟ್ಟಿದ ರೇಷ್ಮಾ ಮತ್ತು ನೂರಿಯರಿಬ್ಬರಿಗೂ ಗೊತ್ತು, ತಮ್ಮ ಭೈಯ್ಯಾ ಯಾಕೆ ಅಳುತ್ತಿದ್ದಾನೆ ಎಂಬುದು. ಆದರೂ ಕಣ್ಣಲ್ಲಿಯೇ ಇವರು ಪ್ರಶ್ನಿಸುವುದು, ನವಾಬ ಅಂಗಳಕ್ಕೆ ಹೋಗಿ ನಿಲ್ಲುವುದು ಮಾಮೂಲಿನಂತೆ ಆಗಿತ್ತು. ನವಾಬ ಹಾಗೆ ಅತ್ತಾಗಲೆಲ್ಲಾ ಆ ಝೋಪಡಿಯ ತುಂಬೆಲ್ಲ ಮೌನ ಆವರಿಸುತ್ತಿತ್ತು. ಆ ಮೌನದಲ್ಲಿ 'ನವಾಬನ ಖತ್ನಾ ಆಗಲಿಲ್ಲ' ವೆಂಬ ಮಾತು ಝೋಪಡಿಯಲ್ಲಿದ್ದ ಎಲ್ಲರಿಗೂ ಸ್ಪಷ್ಟವಾಗಿಯೇ ಕೇಳಿಸುತ್ತಿತ್ತು. ಅಂಥದೊಂದು ಕೀರಲು ಸದ್ದು ಎಷ್ಟೋ ವರ್ಷ ಹಾಗೆಯೇ ಅಲ್ಲಿ ಬೆಳೆಯತೊಡಗಿತ್ತು.

ಈ ನಡುವೆ ನವಾಬ ಚಿಗುರು ಮೀಸೆಯ ಹುಡುಗನಾಗಿ ರಂಗುರಂಗಾಗಿ ದಷ್ಟಪುಷ್ಟವಾಗಿ ಬೆಳೆಯತೊಡಗಿದ್ದ. ಕನ್ನಡ ಶಾಲೆಯಿಂದ ಕಾಲೇಜು ಮೆಟ್ಟಲು ಹತ್ತಬೇಕಿದ್ದವನಿಗೆ 'ತನ್ನ ಖತ್ನಾ ಆಗಲಿಲ್ಲ'ವೆಂಬ ಕೊರಗೇ ದಾರಿ ಮಧ್ಯದಲ್ಲಿ ಎಡವಿ ಬೀಳಿಸಿದಂತಾಗಿತ್ತು. ನವಾಬ ಬರೆದುಕೊಟ್ಟ ನೋಟ್ಸುಗಳಿಂದ ಗೆಳೆಯರು ಪಾಸಾಗಿದ್ದರು. ನವಾಬ ಮಾತ್ರ ಫೇಲಾಗಿಬಿಟ್ಟಿದ್ದ. ರೇಷ್ಮಾಳ ಶಾದಿಯ ಸಂದರ್ಭವೂ ಆಗ ಎದುರಾಗಿದ್ದರಿಂದ ನವಾಬ ಫೇಲಾದ ವಿಷಯ ಝೋಪಡಿಯಲ್ಲಿ ದೊಡ್ಡ ಬಿರುಗಾಳಿಯಾಗಲಿಲ್ಲ. ರೇಷ್ಮಾ, ನೂರಿಯರ ಮುದ್ದು ಮುಖ ನೋಡಿದಾಗಲೆಲ್ಲ ನವಾಬನಿಗೆ ತಾನೂ ಚೋಕರಿಯಾಗಿ ಹುಟ್ಟಬೇಕಿತ್ತು ಎನಿಸುತ್ತಿತ್ತು. ಚೋಕರಿಯಾಗಿದ್ದರೆ ಖತ್ನಾ ಮಾಡಿಸುವ ಸಮಸ್ಯೆ ಇರುತ್ತಿರಲಿಲ್ಲ ಎಂದುಕೊಳ್ಳುತ್ತಿದ್ದ. ಹಾಗೆಯೇ ಕನಸು ಕಂಡು ಮುಗುಳ್ನಕ್ಕು ಸುಮ್ಮನಾಗುತ್ತಿದ್ದ.

ರೇಷ್ಮಾಳ ಶಾದಿಯಾಗಿ ನೂರಿಯ ನಿಕಾಹ್ ಮಾಡಲು ಗಂಡು ಹುಡುಕುವ ಕೆಲಸದಲ್ಲಿ ಈಗ ನಯೀಮಾ ಬಹಳ ಹೊತ್ತು ಕಳೆಯತೊಡಗಿದಾಗ ಕನ್ನಡ ಶಾಲೆಯಲ್ಲಿ ಫೇಲಾಗಿ ಕಾಲೇಜು ಮೆಟ್ಟಲು ಹತ್ತದೇ ಉಳಿದ ನವಾಬ, ಮಿಳಘಟ್ಟದ ಕೆರೆಯ ಸಖ್ಯ ಬೆಳೆಸಿಕೊಂಡಿದ್ದ. ಗಾಳಕ್ಕೆ ಅಂಗಳದಲ್ಲಿಯೇ ಕೊಚ್ಚೆ ಮಣ್ಣು ಸರಿಸಿ ಹುಳು ಹೆಕ್ಕಿ ಸಿಗಿಸಿದವನೇ ಮಿಳಘಟ್ಟದ ಕೆರೆಯತ್ತ ದೌಡಾಯಿಸತೊಡಗಿದ. ಕೆರೆಯ ಏರಿ ಮೇಲಿನ ಮಣ್ಣು ಹಾದಿ ಬಹುದೂರದವರೆಗೆ ಸಾಗಿ, ಆ ಹಾದಿಯಲ್ಲಿ ನೂರಾರು ಝೋಪಡಿಗಳು ಟೊಂಗೆಯೊಂದರ ಮೇಲೆ ಕಟ್ಟಿದ ಹಕ್ಕಿ ಗೂಡುಗಳಂತೆ ನವಾಬನಿಗೆ ಕಾಣತೊಡಗಿ, ಮನಸ್ಸಿನೊಳಗೆ ಪುಳಕದ ಅಲೆಗಳು ಏಳುತ್ತಿದ್ದವು. ಮರುಕ್ಷಣದಲ್ಲಿಯೇ ಆ ಹಕ್ಕಿಗೂಡುಗಳಲ್ಲಿ ತನ್ನಂತೆಯೇ ಯೌವನದ ಹಕ್ಕಿಗಳಿರಬಹುದು ಮತ್ತು ಯಾವ ಹಕ್ಕಿಗೂ ಖತ್ನಾ ಆಗದೇ ಉಳಿದಿರಬಹುದು ಎಂದು ಬಿರುಗಾಳಿಗೆ ಉತ್ತರವೆಂಬಂತೆ ನಗತೊಡಗುತ್ತಿದ್ದ. ಮೀನು ಹಿಡಿಯಲು ಕೂತ ಕೂಗಳತೆ ದೂರದಲ್ಲಿಯೇ ಪಕ್ಕದ ಝೋಪಡಿಯ ಮಲ್ಲಿ, ಯೌವನವನ್ನೆಲ್ಲ ತನ್ನೆದೆ ಮತ್ತು ತೊಡೆಗಳಲ್ಲಿಯೇ ಅದುಮಿಟ್ಟುಕೊಂಡಂತಿದ್ದ ರಾಜಿ, ಜೋತು ಮೊಲೆಯ ವಡ್ಡರ ಅಜ್ಜಿಯೊಂದಿಗೆ ಬಟ್ಟೆ ಒಗೆದೊಗೆದು ಸೊಂಟ ಮುರಿಯುವಾಗೆಲ್ಲ ನವಾಬನ ಮೈಯೊಳಗೆ ಬೆಂಕಿ ಬೀಳುತ್ತಿತ್ತು. ಆಕಾಶದತ್ತ ಮುಚ್ಚಿದ ಕಣ್ಣು ತೂರಿ ನೆಲದಾಳಕ್ಕೆ ಮಣ್ಣ ನಗೆ ಅಗೆದು ಗುಡ್ಡೆ ಹಾಕುತ್ತಿದ್ದಾಗಲೇ ಸೊಂಟ ಮುರಿಯುವ ನೆಪದಲ್ಲಿ ನವಾಬನ ಕಡೆ ಮುಖ ಮಾಡಿದ ರಾಜಿ ಕಿಸಕ್ಕನೆ ನಕ್ಕಿದ್ದು ನೋಡಿ ಕೇಳಿದ ನವಾಬ, ತನ್ನ ಹಗಲುಗನಸಿನಿಂದಲೇ ಬೆಚ್ಚಿಬೀಳಲು ಕಾರಣವಾದಂತಾಯಿತು.

ರಾಜಿ ನಕ್ಕಿದ್ದು, ತನಗೆ ಖತ್ನಾ ಆಗಲಿಲ್ಲವೆಂದೇ ಇರಬಹುದು ಎಂದು ಭಾವಿಸಿದ. 'ಕೇರಿ ರಂಡಿಗೆ ಪೂರಾ ಗೊತ್ತಾಗೈತೆ' ಎನ್ನುತ್ತಲೇ ಗಾಳವನ್ನೆಲ್ಲ ಕೆರೆ ನೀರಿಗೆಸೆದು ರಾಜಿಗೆ ಬೆನ್ನು ನೀಡಿ ಝೋಪಡಿಗಳತ್ತ ಮುಖ ಮಾಡಿ ಕುಳಿತ. ಏನೋ ಮೋಹ ಮತ್ತೆ ಆವರಿಸಿ ಖತ್ನಾದ ವಿಷಯ ಮರೆವಿಗೆ ಸರಿದು ರಾಜಿಯ ಬಲಿತ ಸೊಂಟದ ಭಾಗವನ್ನು ಎಡೆಬಿಡದೆ ನೋಡಿ, ಮುಳುಗುವ ಸೂರ್ಯನ ಕೆಂಪು ಬೆಳಕಲ್ಲಿ ಬಂಗಾರದಂತೆ ಹೊಳೆಯುತ್ತಿರುವ ಮಂಡಿಯವರೆಗಿನ ಕಾಲುಗಳ ಮೇಲೆ ದೃಷ್ಟಿ ಹಾಯಿಸಿ ಅದೆಷ್ಟೋ ಹೊತ್ತು ಕಾಲ ತಳ್ಳಿದ. ರಾಜಿಯೂ ತನ್ನ ಕಡೆಯೇ ಕಳ್ಳನೋಟ ಹರಿಸುತ್ತಿದ್ದಾಳೆಂದು ಭ್ರಮಿಸಿಕೊಂಡ. ತನಗೆ ಖತ್ನಾ ಆಗಿಲ್ಲವೆಂಬ ವಿಷಯ ಅವಳಿಗೆ ಗೊತ್ತಿರಲಿಕ್ಕಿಲ್ಲ ಎಂದು ಸಮಾಧಾನ ತಂದುಕೊಂಡು ರಾಜಿಗೆ ಬೈದದಕ್ಕೆ ದಯಾಳುವಾದ ಅಲ್ಲಾಹನೇ ತನ್ನನ್ನು ಕ್ಷಮಿಸು ಎಂದು ಪ್ರಾರ್ಥಿಸುವಷ್ಟು ಭಾವುಕನಾಗತೊಡಗಿದ. ನವಾಬನ ಪ್ರಾರ್ಥನೆ ಮುಗಿಯುವಷ್ಟರಲ್ಲಿ ಕತ್ತಲಾವರಿಸಿ, ರಾಜಿಯ ಮುಖವೂ ಅಸ್ಪಷ್ಟವಾಗತೊಡಗಿತು. ನೆರಳಿನಂತಹ ಆಕೃತಿಗಳು ದೊಡ್ಡ ಬಿದಿರು ಬುಟ್ಟಿಗಳನ್ನು ತಲೆಯ ಮೇಲೆ ಹೊತ್ತು ಕೆರೆಯಂಗಳದ ಏರಿಯ ದಾರಿ ಹಿಡಿದಿದ್ದು ಅಂತಿಮವಾಗಿ ಗೋಚರಿಸಿದಾಗ, ನವಾಬನೂ ಅಂಡಿಗೆ ಅಂಟಿದ ಕೆಸರು ಮಣ್ಣು ಒರೆಸಿಕೊಂಡವನು ಆಕೃತಿಗಳನ್ನು ಹಿಂಬಾಲಿಸುವವನಂತೆ ಹೊರಟುನಿಂತ.

ತನ್ನ ಝೋಪಡಿಯಲ್ಲಿ ನಿಂತು ರಾಜಿಯ ಝೋಪಡಿಯತ್ತ ಸೂಕ್ಷ್ಮ ದೃಷ್ಟಿ ಹಾಯಿಸಿದಾಗ ಉರಿಯುತ್ತಿರುವ ದೀಪವೊಂದರ ಪುಟ್ಟ ಬೆಳಕು ನವಾಬನಿಗೆ ಕೈಬೀಸಿ ಕರೆದಂತಾಯಿತು. ಅತ್ತ ಹೋಗಿ ರಾಜಿಯನ್ನೊಮ್ಮೆ ಕಣ್ತುಂಬ ನೋಡಿ ಅವಳನ್ನು ಮುಟ್ಟಬರಬೇಕೆಂದು ನವಾಬ ನಿರ್ಧರಿಸುವ ಹೊತ್ತಿಗೆಯೇ ರಾಜಿಯ ಗಂಡ ಭೀಮ ತನ್ನ ಮುಂದೆ ರಸ್ತೆ ಅಳೆಯುತ್ತಾ ಎದ್ದುಬಿದ್ದು ಹೋಗುತ್ತಿದ್ದುದು ಕಂಡು ನವಾಬ ಇಡೀ ಕೆರೆಯಂಗಳದ ಕೇರಿಯನ್ನೊಮ್ಮೆ ಮೊದಲಬಾರಿಗೆ ಎಂಬಂತೆ ನೋಡತೊಡಗಿದ. ಸುಖತ್ತು ಬಿಸಿಲಿನ ದಿನಗಳಾಗಿದ್ದರಿಂದ ನೆಮ್ಮದಿಯ ನಿದ್ದೆಗಾಗಿ ಗಂಡಸರು ಹೆಂಗಸರೆನ್ನದೇ ಹೊಸದಾಗಿ ಡಾಂಬರು ಹಾಕಿದ್ದ ಕೇರಿಯ ಮೇಲೆ ಚಾಪೆ ಹಾಸಿ ಮೈಚೆಲ್ಲಿ ಮಲಗಿದ್ದ ದೃಶ್ಯ ನವಾಬನಲ್ಲಿ ಏನೋ ಆಸೆ ಹುಟ್ಟಿಸತೊಡಗಿತು. ಇಬ್ಬರು ಮಲಗಿದರೇನೇ ತುಂಬಿ ಇಕ್ಕಟ್ಟುಗೊಳ್ಳುವ ಝೋಪಡಿಗಳಲ್ಲಿ ಸೆಖೆಯಲ್ಲಿ ಅಂಟಿ ಮಲಗುವುದು ರಾಜಿಗೂ ಸಾಧ್ಯವಾಗಲಿಕ್ಕಿಲ್ಲ ಎಂದು ಯೋಚಿಸಿದವನ ತೊಡೆ ಮತ್ತೆ ಕಂಪನಕ್ಕೊಳಗಾಗಿ ತನ್ನ ಝೋಪಡಿಯ ಒಳಗೆ ತೂರಿಕೊಂಡ. ಹಾಸಿದ್ದ ಚಾಪೆಯ ಮೇಲೆ ಮಲಗಿಕೊಂಡವನು ಕೆಲವಾರು ಕ್ಷಣಗಳಲ್ಲಿಯೇ 'ಹಾಳು ಸೆಖೆ, ಇಕ್ಕಟ್ಟಿನೊಳಗೆ ಮಲಗೋದು ಹೇಗೆ ? ಹೊರಕ್ಕೆ ಹಾಸಿ




ಕೊಳ್ಳುತ್ತೇನಮ್ಮಿ' ಎಂದವನು ನಯೀಮಾಳ ಪ್ರತಿಮಾತಿಗೂ ಕಾಯದೆ ಕೆರೆಯಂಗಳದ ಕೇರಿಗೆ ಚಂಗನೆ ಜಿಗಿದು ಹಾಸಿಕೊಂಡ ಹಾಸಿಗೆ ಮೇಲೆ ಮೈಚೆಲ್ಲಿ ನಯೀಮಾ ಝೋಪಡಿಯ ತಟ್ಟಿ ಎಳೆದುಕೊಳ್ಳುವವರೆಗೆ ಸತ್ತವನಂತೆ ನಿದ್ದೆ ಹೋದ. ತಟ್ಟಿ ಎಳಕೊಳ್ಳುವ ಸದ್ದಾಗುತ್ತಿದ್ದಂತೆಯೇ ಕಣ್ಣುಬಿಟ್ಟು ರಾಜಿಯ ಝೋಪಡಿಯ ಅಂಗಳದಂತಿದ್ದ ಡಾಂಬರು ರಸ್ತೆಗೆ ಕಣ್ಣು ಹಾಕಿದ. ಕತ್ತಲೊಳಗೆ ಮುಳುಗಿ ಸ್ಮಶಾನದಂತಾಗಿದ್ದ ಕೆರೆಯಂಗಳದ ಕೇರಿಯಲ್ಲಿ ರಾಜಿಯ ಝೋಪಡಿಯ ಪುಟ್ಟ ಬೆಳಕು ಮಾತ್ರ ಕತ್ತಲನ್ನು ಎತ್ತಿ ಹಿಡಿದ ಲೈಟು ಕಂಬದಂತೆ ಕಾಣುತ್ತಿರುವುದು ಗಮನಿಸುವಾಗಲೇ ಅಲ್ಲಿಯೂ ಕತ್ತಲಾಗಿ ತಟ್ಟಿಯನ್ನು ಬಿಗಿದ ಸದ್ದಾಗಿ ನವಾಬನ ಬೆಂಕಿಗೆ ನೀರು ಬಿತ್ತು.

ದೂರದ ಕಳ್ಳಿ ಗಿಡಗಳಲ್ಲಿ ಮಿಂಚಿ ಮಿಂಚಿ

ಮರೆಯಾಗುವ ಕ್ಷಣಿಕ ಬೆಳಕು ನವಾಬನಲ್ಲಿ ಜೋಸೆಫನ ಚಿತ್ರ ಮೂಡಿಸಿ, ಅವನು ಹೇಳಿದ ಪುಟ್ಟ ಕಥೆಯೊಂದು ದೆವ್ವಗಳು ಓಡಾಡುವ ಹೊತ್ತೆಂದು ಕೆರೆಯಂಗಳದ ಜನ ಭಾವಿಸುವ ಅಮಾಸೆಯ ರಾತ್ರಿಯಲ್ಲಿ ನೆನಪಾಗಿ ಕಾಡಿತು.

ದೇವರು ಮಾನವರನ್ನೆಲ್ಲ ಸೃಷ್ಟಿಸಿ ಭೂಮಿಗೆ ಕಳಿಸಿದ. ಹಾಗೆ ಕಳಿಸುವಾಗ ಒಂದು ನಿಯಮವನ್ನು ಕಿವಿಯಲ್ಲಿ ಊದಿದನಂತೆ. ಇಲ್ಲಿಂದ ಹೇಗೆ ಹೊರಡುತ್ತೀರೋ ಹಾಗೆಯೇ ಜೀವನ ಮುಗಿಸಿ ವಾಪಸ್ ಬಂದರೆ ಮಾತ್ರ ನಿಮಗೆ ಸ್ವರ್ಗ. ಮಾನವರೆಲ್ಲ ಸರಿ ಹಾಗೆಯೇ ಆಗಲಿ ಎಂದು ಭೂಮಿಗೆ ಹೊರಟುಬಂದರಂತೆ. ಮಜವಾಗಿ ಭೂಮಿಯ ಮೇಲೆ ಕಾಲ ಕಳೆದವರು ಯಾವುದಾವುದೋ ಧರ್ಮಗಳ ಜಂಜಡಕ್ಕೆ ಬಿದ್ದು ಅಸಲಿ ಮನುಷ್ಯ ಧರ್ಮವನ್ನೇ ಮರೆತುಬಿಟ್ಟರಂತೆ. ಅವರವರ ಜೀವನಾವಧಿ ಮುಗಿಸಿಕೊಂಡು ಸ್ವರ್ಗಕ್ಕೆ ಹೋದವರಿಗೆ ಕಟ್ಟುನಿಟ್ಟಿನ ಯಂತ್ರದೊಳಕ್ಕೆ ಹಾಕಿ ಯಾವ ಯಾವ ಅಂಗಗಳು ಊನವಾಗಿವೆ ಎಂಬ ವಿವರ ಪಡೆದುಕೊಂಡ ದೇವರು, ಧರ್ಮಧರ್ಮಗಳ ಜಗಳದಲ್ಲಿ ತಲೆ, ಕೈಕಾಲು ಕತ್ತರಿಸಿಕೊಂಡವರನ್ನೆಲ್ಲ ನಡುರಾತ್ರಿ ಎನ್ನದೇ ನಿಮ್ಮ ನಿಮ್ಮ ಕತ್ತರಿಸಲ್ಪಟ್ಟ ಅಂಗಗಳನ್ನೆಲ್ಲ ಹುಡುಕಿ ತನ್ನಿ ಎಂದು ಭೂಮಿಗೆ ಮಾನವರ ಗುಡ್ಡೆಯೊಂದನ್ನು ಹೊತ್ತುಹಾಕಿದನಂತೆ. ನಡುರಾತ್ರಿಯಲ್ಲಿ ಕಳೆದುಕೊಂಡ ಅಂಗಗಳನ್ನು ಹುಡುಕಲು ಬೆಳಕು ಬೇಕಲ್ಲವೇ ? ಮಿಂಚು ಹುಳುಗಳನ್ನು ಸೃಷ್ಟಿಸಿ ಈ ಮಾನವರ ಜೊತೆಗಿದ್ದು ಸಹಕರಿಸಿ ಎಂದು ಆಜ್ಞೆ ಮಾಡಿದನಂತೆ. ಮಾನವರಿಗೆ ಕಳೆದುಕೊಂಡ ತಮ್ಮ ತಮ್ಮ ಅಂಗಗಳು ಕತ್ತಲಲ್ಲಿ ಸಿಕ್ಕವೋ ಇಲ್ಲವೋ, ಆದರೆ ಮಿಂಚುಹುಳುಗಳು ಕತ್ತಲಾದ ಕೂಡಲೇ ಮಿಂಚತೊಡಗುತ್ತಿವೆ.

ಈ ಕಥೆಯನ್ನು ಸ್ಪಷ್ಟವಾಗಿ ನೆನಪಿಸಿಕೊಂಡ ನವಾಬ ತಾನಂತೂ ಜನ್ನತ್ತಿಗೇ ಹೋಗುವುದು ತನ್ನ ಯಾವುದೇ ಅಂಗ ಕತ್ತರಿಸಲ್ಪಟ್ಟಿಲ್ಲ ಎಂಬ ಜಂಬಕ್ಕೆ ಒಂದು ಕ್ಷಣ ಒಳಗಾಗಿ ಮತ್ತೊಂದು ಕ್ಷಣ ಏನೋ ನೆನಪಿಸಿಕೊಂಡವನಂತೆ ಧಕ್ಕನೆ ಎದ್ದು ಕುಳಿತ. ಹಾಗೆ ಎದ್ದು ಕುಳಿತ ನವಾಬನಲ್ಲಿ ಆತನ ಅರಿವಿಗೆ ಬರದಂತೆಯೇ 'ನನ್ನ ಖತ್ನಾ ಆಗಿಬಿಟ್ಟರೆ, ಜನ್ನತ್ತಿಗೆ ಹೋಗಲಾದರೂ ಸಾಧ್ಯವೇ ?' ಎಂಬ ಪ್ರಶ್ನೆ ಸುತ್ತಲಿನವರಿಗೂ ಕೇಳಿಸುವಂತೆ ಸದ್ದು ಮಾಡಿತು.

• • •

ನಾಲ್ಕು ಜನ ಒಟ್ಟಾಗಿ ತಿರುಗಾಡಿದರೆ ಚಿಕ್ಕದೆನಿಸತೊಡಗುವ ಕೆರೆಯಂಗಳದ ಬೀದಿಯಲ್ಲಿ ಲಾರಿಗಳು ಒಮ್ಮೆಲೇ ನುಗ್ಗಿ ರಣಕಹಳೆಯ ಸದ್ದು ಮಾಡಿದಾಗ ಇಡೀ ಕೇರಿಗೆ ಎಚ್ಚರವಾದಂತಾಯಿತು. ಈ ಕೇರಿಗೆ ಲಾರಿಗಳು ನುಗ್ಗಿ ಬಂದದ್ದನ್ನು ಕೆರೆಯಂಗಳದ ಜನ ಈವರೆಗೆ ನೋಡಿಯೇ ಇರಲಿಲ್ಲವಾದ್ದರಿಂದ ತಮ್ಮ ತಮ್ಮ ಝೋಪಡಿಗಳಿಂದ ಏನೋ ಆಗಬಾರದ್ದು ಆಗಿಹೋಯಿತೇನೋ ಎಂಬಂತೆ ಬಿಟ್ಟ ಕಣ್ಣು ಬಿಟ್ಟು ಹೊರಕ್ಕೆ ದೌಡಾಯಿಸಿ ಗುಂಪು ಗುಂಪಾಗಿ ನಿಲ್ಲತೊಡಗಿದರು. ತಡರಾತ್ರಿಯಲ್ಲಿ ಮೈಮರೆತು ನಿದ್ದೆಹೋಗಿದ್ದ ನವಾಬನಿಗೆ ಅದೇಕೋ ಎಚ್ಚರವಾಗದಿದ್ದಾಗ ನಯೀಮಾ ತಂದು ಸುರಿದ ಚೊಂಬು ತಣ್ಣೀರು ಅವನ ನಿದ್ದೆ ಓಡಿಸಲು ಸಾಕಾದಂತಿತ್ತು. ಎದ್ದು ಕುಳಿತ ನವಾಬನಿಗೂ ಕೆರೆಯಂಗಳದ ಕೇರಿಯ ಜನಕ್ಕೆಲ್ಲ ಆದ ಆಘಾತವೇ ಆಯಿತು ಎಂದು ಹೇಳಬೇಕಾಗಿಲ್ಲ ತಾನೆ ? ಮುಖ, ಮೈಮೇಲೆ ಬಿದ್ದ ನೀರನ್ನು ಕೊಡವಿಕೊಂಡ ನವಾಬನಿಗೆ ಲಾರಿಗಳು ಧೂಳೆಬ್ಬಿಸಿ ನುಗ್ಗಿ ಬರುತ್ತಿರುವ ದೃಶ್ಯ ಯಾಕೆಂದು ಅರ್ಥವಾಗಿ ಇನ್ನು ರಾಜಿಯನ್ನು ಕೆರೆಯ ಬಂಡೆಕಲ್ಲುಗಳ ಮೇಲೆ ನೋಡಲು ಸಾಧ್ಯವೇ ಇಲ್ಲವೇನೋ ಎಂದು ತನ್ನಷ್ಟಕ್ಕೇ ವಿಷಾದಕ್ಕೆ ಜಾರಿಬಿದ್ದ. ಕಳೆಹೀನಗೊಂಡ ನವಾಬನ ಮುಖದಲ್ಲಿ ಮತ್ತೂ ಒಂದು ಸಮಸ್ಯೆ ಎದ್ದುಕಾಣುತ್ತಿತ್ತು. 'ನನ್ನ ಖತ್ನಾ ಆಗುವವರೆಗೆ ಈ ಝೋಪಡಿಗಳಿಗೇನೂ ಆಗದಿರಲಿ.' ಅವನು ಪ್ರಾರ್ಥನೆ ಸಲ್ಲಿಸಲು ಶಿಸ್ತಾಗಿ ನಿಂತುಕೊಂಡಂತೆ ಕಾಣಬರುತ್ತಿರುವಾಗಲೇ ನಾಲ್ಕಾರು ಲಾರಿಗಳ ಸಾಲು ಅವನ ಬಳಿಗೆ ಬಂದು ನಿಂತುಕೊಂಡಿತು. ಮುಂದಿನ ಲಾರಿಯ ಡ್ರೈವರೇನೋ ಜೋಸೆಫ ಆಗಾಗ ಭಯಂಕರವಾಗಿ ಹೇಳುತ್ತಿದ್ದ ನರಕದ ಅಧಿಪತಿ 'ಲೂಸೀಫೆರ'ನಂತೆ ಕಂಡು ಕಂಪಿಸತೊಡಗಿದ. 'ಹಡ್ಸೀ ಮಗನ, ಅತ್ಲಾಗ ಸರಿಯೋ' ಎಂದು ಆ ಲೂಸೀಫೆರ ಬೆದರಿಸಿದಾಗಲಂತೂ ನವಾಬ ಕಕ್ಕಾಬಿಕ್ಕಿಯಾಗಿ ಝೋಪಡಿಯೊಳಗೆ ಹೊಕ್ಕು ತಟ್ಟಿಯನ್ನು ಆಧಾರಕ್ಕೆ ಹಿಡಿದು ಲಾರಿಗಳು ಮುಂದೆ ಹೋಗುವುದನ್ನು ಇನ್ನಿತರರಂತೆ ಭಯದ ದೃಷ್ಟಿಯಲ್ಲಿಯೇ ನೋಡತೊಡಗಿದ. ಲಾರಿಗಳು ಕೆರೆಯ ಏರಿಯತ್ತ ಒಂದೇ ಓಟದಲ್ಲಿ ದೌಡಾಯಿಸಿ ರಣಕಹಳೆಯ ಸದ್ದನ್ನು ಕೆರೆ ನೀರಿನಲ್ಲಿ ಅಂತಿಮವಾಗಿ ಮುಳುಗಿಸಿದಾಗ 'ಅಬ್ಬಾ ಬದುಕಿದೆವು' ಎಂದುಕೊಳ್ಳುತ್ತಲೇ ಕೆರೆಯಂಗಳದ ಕೇರಿಯ ಜನ ಮುನ್ಸಿಪಾಲ್ಟಿಯ ಏಕಮಾತ್ರ ನಲ್ಲಿಗೆ ಹಂಡೆ ಕೊಡಪಾನಗಳೊಂದಿಗೆ ಮುತ್ತಿಗೆ ಹಾಕಿ ಅವರಿವರನ್ನು ಬೈಯುತ್ತಲೇ ತಮ್ಮ ದಿನನಿತ್ಯದ ಕೆಲಸಗಳಿಗೆ ಕೈಕಾಲು ಸೊಂಟಗಳನ್ನು ಬಳಸಿಕೊಂಡರು.

ತನ್ನ ಕೇರಿಯ ಜನರ ಈ ಬಗೆಯ ವರ್ತನೆಯನ್ನು ತಟ್ಟಿ ಹಿಡಿದೇ ನೋಡುತ್ತಿದ್ದ ನವಾಬ 'ಹಾಳಾದ ಜನ ಗೂಟ ಕೀಳೋ ಹೊತ್ತು ಬಂದು ಜಗಳಕ್ಕಿಳಿಯೋದನ್ನ ಬಿಡೋದಿಲ್ಲ. ಇವರದು ದಿನನಿತ್ಯದ್ದು ಇದೇ ಬದುಕಾಗಿ ಹೋಯ್ತು. ಇವ್ರ ಉದ್ಧಾರನಾದ್ರೂ ಹೇಗೆ ?' ಒಳಗೊಳಗೇ ಅಸಮಾಧಾನಪಟ್ಟುಕೊಂಡು ಝೋಪಡಿಯೊಳಗೆ ನಿಲ್ಲಲಾರದೆ ಕೆರೆಯತ್ತ ಚೊಂಬು ಹಿಡಿದು ಸಂಡಾಸಿಗೆ ಹೊರಟುನಿಂತ. ಹಾಗೆ ಹೊರಡುವ ಮುನ್ನ ಅಮ್ಮಿ ನಡುಬಗ್ಗಿಸಿ ಕಟ್ಟಿಟ್ಟಿದ್ದ ಒಂದೆರಡು ಒಣ ಬೀಡಿಗಳನ್ನು ಕೇರುವ ಮರದಿಂದ ಕಣ್ಣುತಪ್ಪಿಸಿ ಹೆಕ್ಕಿ ಜೇಬೊಳಗೆ ಇಳಿಸಿ, ಅಲ್ಲಿಯೇ ಬಿದ್ದಿದ್ದ ಬೆಂಕಿ ಪೊಟ್ಟಣದೊಡನೆ ಕೆರೆಯತ್ತ ಹೆಜ್ಜೆ ಹಾಕಿದ. ಹಾಗೆ ಹೋಗುವಾಗಲೇ ಕೇರಿಯ ಪ್ರತಿಯೊಂದು ಝೋಪಡಿಯನ್ನೂ ನೋಡುತ್ತಾ ಇದೆಲ್ಲವೂ ನೆಲಸಮವಾಗುವ, ಝೋಪಡಿಗಳ ಮುರಿದುಬಿದ್ದ ದೇಹದ ಮೇಲೆಲ್ಲ ಬಸ್ಸುಗಳು ಓಡಾಡುವ ಸಂಗತಿ ಕಲ್ಪಿಸಿಕೊಂಡು ಬೆಂಕಿಯಿಟ್ಟ ಬೀಡಿಯಿಂದ ಹೊಗೆ ಬಿಡಲು ಶುರುಹಚ್ಚಿಕೊಂಡ. ಇದ್ದಕ್ಕಿದ್ದ ಹಾಗೆ ಬಂದೊದಗಿದ ಸಮಸ್ಯೆಯಿಂದಾಗಿ ನವಾಬನಿಗೆ ಏನು ಮಾಡುವುದೆಂದು ಅರ್ಥವಾಗದೇ ತೊಳಲಾಡಿ ಕೊನೆಗೆ ತಾನು ಹೊರಟಿದ್ದು ಸಂಡಾಸಿಗೆಂದು ನೆನಪಿಸಿಕೊಂಡು ಕೆರೆಯತ್ತ ಹೋಗಿ ತನ್ನ ಮಾಮೂಲಿನ ದಟ್ಟ ಕಳ್ಳಿಗಳಲ್ಲಿ ತೂರಿಕೊಂಡು ಕುಳಿತ. ಮತ್ತೊಂದು ಬೀಡಿ ಹಚ್ಚಿಕೊಂಡವನು ಕಳ್ಳಿಗಳ ಮರೆಯಲ್ಲಿಯೇ ನಿಂತ ಲಾರಿಗಳ ಕಡೆ ನೋಡಿದ. ಕೆರೆ ಮುಚ್ಚಿ ಹಾಕುವ ಅವರ ಹುನ್ನಾರಗಳು ಅಲ್ಲಲ್ಲಿ ಕೈ ಸನ್ನೆ ಮಾಡುತ್ತಾ ನಿಂತ ಮಂದಿಯಿಂದ ಸ್ಪಷ್ಟವಾಗತೊಡಗಿತ್ತು. ನವಾಬನಿಗೆ ತನ್ನ ಜನರ ಬದುಕು ಈ ಹೇಲಿಗಿಂತ ಕಡೆಯಾಗುತ್ತಿರುವ ಕುರಿತು ಅವನ ಮೈ ಉರಿಯತೊಡಗಿತ್ತು. ತಾನೂ ಆ ಜನರ ನಡುವೆ ಇರುವುದು ನೆನಪಾಗಿ ತನ್ನ ಮೇಲೆಯೂ ಕನಿಕರ ಹುಟ್ಟತೊಡಗಿತು.

ದಿನಗಳು ಮುಂದೆ ನಡೆದಂತೆಲ್ಲಾ ಕೆರೆಯಂಗಳದ ಬೀದಿಯಲ್ಲಿ ಸ್ಮಶಾನ ಮೌನದ ಛಾಪು ಹೆಚ್ಚಾಗಿ ಕೆರೆಯಂಗಳದ ಏರಿಯಲ್ಲಿ ಕೊಳಕು ಜನರ ಬದಲು ಸೂಟು ಬೂಟಿನ ಅಧಿಕಾರಿಗಳು ಬಂದು ಹೋಗುವುದು ಹೆಚ್ಚಾಯಿತು. ಎಲೆಕ್ಷನ್ನಿನ ವೇಳೆಯಲ್ಲಿ ಬ್ಯಾನರು ಕಟ್ಟಿದ, ಮತ ಕೊಡಿ ಎಂದು ಕೈ ಮುಗಿದು ನಿಂತ ಚಿತ್ರಗಳಿದ್ದ ಹಾಳೆಗಳನ್ನು ಹಂಚಿ ವಿವಿಧ ಪಾರ್ಟಿಗಳ ಪರ ಝೋಪಡಿಗಳ ತಟ್ಟಿ ತಟ್ಟಿದ್ದ. ಅಕ್ಕಪಕ್ಕದ ಕೊನೆಗೆ ಇದೇ ಕೇರಿಯ ಹುಡುಗರ ದಂಡು 'ಯಾರೋ ಮಿನಿಸ್ಟ್ರು ಬರ್ತಾರಂತಪ್ಪೋ' ಎಂದು ಕೂಗುತ್ತಾ ಕೆರೆ ಏರಿಗೆ ನುಗ್ಗಿ ಬಂದು ಮಿನಿಸ್ಟ್ರು ಬರೋದನ್ನೆ ಕಾಯುತ್ತಾ ಸಂದಿಗೆ ಹೋಗಿ ಬೀಡಿ ಸೇದಿ ಬಾರಿಬಾರಿಗೆ ಬರುತ್ತಾ ನೋಡುತ್ತಾ ಮಾಡುತ್ತಿದ್ದರು. 'ಮಿನಿಸ್ಟ್ರು

ಬರ್ತಾವ್ರೆ, ಬರೋದಿಲ್ವೇನೇ ಬೂವಮ್ಮಾ?' ಗೌರಕ್ಕ ಕೂಗಿ ಕರೆದಾಗ ನಯೀಮಾ ಪ್ರತಿಕ್ರಿಯಿಸದೆ ಇರಲಿಲ್ಲ. 'ಬಂದೇನವ್ವೆ ಗೌರಿ, ಹೋಗದಿರು, ತಾಳು' ಎಂದು ಹೇಳಿದ್ದನ್ನು ಗೌರಕ್ಕ ಕೇಳದೇ ಇರಲಿಲ್ಲ. ನಯೀಮಾಳ ಜೊತೆ ನವಾಬನೂ ಹೊರಡಲು ಅನುವಾದ, ತಟ್ಟೆಯನ್ನು ತಂತಿಯಲ್ಲಿ ಬಿಗಿದು. ಕೇರಿಗೆ ಕೇರಿಯೇ ಏರಿಗೆ ಹೋಗಿ ನೂಕುನುಗ್ಗಲು ಆರಂಭವಾಯಿತು. ಪೊಲೀಸ್ನೋರ ದೊಣ್ಣೆಗಳು ಜನರನ್ನು ಸಂಭಾಳಿಸುವಲ್ಲಿ ಸುಸ್ತಾಗತೊಡಗಿದ್ದವು.

ಏರಿಯ ಮೇಲೆ ಮಿನಿಸ್ಟ್ರು ಯಾಕೆ ಬರುತ್ತಿದ್ದಾರೆ? ಲಾರಿಗಳು ಯಾಕೆ ನುಗ್ಗಿಬಂದವು? ಸೂಟುಬೂಟಿನ ಅಧಿಕಾರಿಗಳಿಗೆ ಏರಿಯ ಮೇಲೆ ಕೆಲಸವೇನು? ಯಾವ ಯಾವುದೂ ನಿಂತು ನೂಕುನುಗ್ಗಲು ಆರಂಭಿಸಿದ್ದ ಜನಕ್ಕೆ ಗೊತ್ತಿರಲಿಲ್ಲವೋ? ಗೊತ್ತಾಗಿದ್ದರೂ ಮಾಡುವುದೇನು? ಎಂದು ಸುಮ್ಮನಾಗಿ ಬಂದೋರ ಹೋಗೋರ ನೋಡಿಕೊಂಡರಾತು ಎಂಬಂತಿದ್ದರು ಆ ಜನ. ನವಾಬನೂ ಹಿಂದಿನಿಂದ ಮುಂದಕ್ಕೆ ಮುಂದಿನಿಂದ ಹಿಂದಕ್ಕೆ ನೂಕಲ್ಪಟ್ಟು ಜನ ಜಾತ್ರೆಯ ನೂಕುನುಗ್ಗಲಲ್ಲಿ ಜೋಲಿ ಆಡುತ್ತಲೇ ಆಗಬಹುದಾದ ಅನಾಹುತವನ್ನು ಯೋಚಿಸುತ್ತಿದ್ದ. ತನ್ನ ಪಕ್ಕಕ್ಕೇ ಬಂದು ನಿಂತು ಜೋಲಿ ಆಡುತ್ತಿದ್ದ ರಾಜಿಯನ್ನು ನೋಡಿದ ಕೂಡಲೇ ಅವನ ಯೋಚನೆಯ ದಿಕ್ಕು ಬದಲಾಗಿ ಅವಳ ಇನ್ನಷ್ಟು ಪಕ್ಕಕ್ಕೆ ಮೈ ಉಜ್ಜುವಷ್ಟು ಅಂಟಿ ಪುಳಕಿತಗೊಂಡು ಮೈಮೇಲೆ ಹಿಡಿತವೇ ಇಲ್ಲದಷ್ಟು ಮೈಮರೆತು ರಾಜಿಯೊಂದಿಗೆ ಜೋಲಿ ಆಡತೊಡಗಿದ. ರಾಜಿಗೂ ತನ್ನ ಪಕ್ಕ ನವಾಬ ನಿಂತಿರುವುದು ಹಿತವೆನಿಸಿ, ಎಂದಿನ ಧಾಟಿಯಲ್ಲಿಯೇ ಅತೀ ಸಲಿಗೆಯಿಂದ ಎಂಬಂತೆ ಮಾತಿಗಾರಂಭಿಸಿದಾಗ ಮೈಮರೆತಿದ್ದ ನವಾಬ ತನ್ನನ್ನು ಸಂಭಾಳಿಸಿಕೊಂಡು ತನ್ನ ಮೇಲೆ ರಾಜಿ ಅನುಮಾನಪಟ್ಟಾಳೆಂದು ಹೆದರಿ, 'ಹಾಳು ಜನ, ನೂಕೋದು ನಿಲ್ಲಿಸ್ರಪ್ಪ' ಎಂದು ಉಸುರಿದ್ದು ರಾಜಿಗಷ್ಟೇ ಕೇಳುವಂತೆ ಹೇಳಿ ಅವಳ ಮುಖ ನೋಡಿದ. ಆ ಮಾತಿಗವಳು ಪ್ರತಿಕ್ರಿಯೆ ವ್ಯಕ್ತಪಡಿಸದಿದ್ದಾಗ ಹಿಂದಕ್ಕೊಮ್ಮೆ ಒತ್ತಿ ನೂಕಿ ನಿಂತ ನವಾಬನ ಸಾಹಸ ರಾಜಿಯ ಮುಖದಲ್ಲಿ ಮುಗುಳ್ನಗು ಅರಳುವಂತೆ ಮಾಡಿತು.

'ನವಾಬ್ ಸಾಬಿ....' ಎಂದು ಮಾತಿಗೆ ತೊಡಗಿದ ರಾಜಿಯ ಈ ರೀತಿಯ ಸಲಿಗೆ ಕ್ಷಣಮಟ್ಟಿಗೆ ಕೋಪ ತರಿಸಿದರೂ, ಹಲ್ಕಿರಿಯುತ್ತಲೇ 'ಆಂ' ಎಂದು ಕಿವಿ ಚುರುಕು ಮಾಡಿಕೊಂಡು ನವಾಬ ರೋಮಾಂಚನಕ್ಕೊಳಗಾಗಿ ನಿಂತಾಗ 'ಮಿನಿಸ್ಟ್ರಂದ್ರೆ ಯಾವ್ ಮಿನಿಸ್ಟ್ರಪ್ಪ?' ಎಂದು ಪ್ರಶ್ನಿಸಿಬಿಡುವುದೇ ರಾಜಿ? ನವಾಬ ರಾಜಿಯ ಪ್ರಶ್ನೆಗೆ ಉತ್ತರಿಸುವುದೇನು ಎಂದು ಗೊತ್ತಾಗದೇ ಗೊಂದಲಕ್ಕೆ ಬಿದ್ದು 'ಏ ಸುವ್ವರ್‌ಗಳಾ ಹಿಂದಕ್ಕೆ ಸರೀರೋ' ಎಂದು ಕೂಗಿ ತನ್ನ ಕುಂಡಿಯನ್ನು ಮತ್ತೊಮ್ಮೆ ಹಿಂದಕ್ಕೆ ನೂಕಿ ನೆಟ್ಟಗೆ ನಿಂತು ಗೊತ್ತಿಲ್ಲವೆಂಬಂತೆ ತುಟಿಗಳನ್ನು ವಿಚಿತ್ರಗೊಳಿಸಿ ರಾಜಿಯ ಮುಖ ನೋಡಿದ. 'ಕೆರೆಗೆ ಬರ್ತಾವ್ರಂದ್ರೆ, ಕೆರೆಮಿನಿಸ್ಟ್ರೇ ಇರ್ಬೇಕಲ್ವೆನೋ ಸಾಬಿ' ಎಂದಾಗ, ರಾಜಿ ಎಷ್ಟು ದಡ್ಡಿ ಇದ್ದಾಳೆ ಎಂದರಿತು ಮೌನವಾಗಿಯೇ ಮುಗುಳ್ನಕ್ಕು 'ಹೂಂ, ಇರ್ಬೋದು' ಎಂದ. ಯಾವ ಮಿನಿಸ್ಟ್ರು ಬರುತ್ತಿದ್ದಾನೆಂದು ಅವನಿಗೂ ಗೊತ್ತಿರಲಿಲ್ಲದ್ದರಿಂದ ಹಾಗನ್ನುವುದು ಅನಿವಾರ್ಯವಾಗಿತ್ತು ಅವನಿಗೆ. ನವಾಬ ಹೂಂ ಗುಟ್ಟಿದ್ದು ತನ್ನ ಬುದ್ಧಿವಂತಿಕೆಗೆ ಸಾಕ್ಷಿ ಎಂದು ಭಾವಿಸಿದ ರಾಜಿ ಅವನ ಮತ್ತಷ್ಟು ಪಕ್ಕಕ್ಕೆ ನಿಂತುಕೊಂಡಳು. ತಾನು ಸುಳ್ಳೇ ಹೂಂಗುಟ್ಟಿದ್ದು ರಾಜಿಯ ಎದೆ ಉಜ್ಜಲು ಕಾರಣವಾಯಿತೆಂದರಿತ ನವಾಬ ತಾನೂ ಮತ್ತಷ್ಟು ಪಕ್ಕಕ್ಕೆ ಸರಿದು ಸಂಪೂರ್ಣ ಅಂಟಿ ನಿಂತು ಮೈ ಸ್ಪರ್ಶದ ಸುಖಕ್ಕೆ ಜಾರಿಕೊಂಡ. ಇಂಥ ಎಷ್ಟೋ ಸ್ಪರ್ಶಗಳಿಗೆ ಒಳಗಾಗಿ ಅಂಥ ಸುಖಗಳನ್ನು ಕ್ಷಣವೆಂದು ಭಾವಿಸುವ ಮಟ್ಟಕ್ಕೆ ಬಂದಿದ್ದ ರಾಜಿ ನವಾಬನ ಆಂತರ್ಯ ಅರ್ಥ ಮಾಡಿಕೊಂಡವಳಂತೆ ಅವನು ತನ್ನನ್ನು ಸ್ಪರ್ಶಿಸಿ ಪಡುತ್ತಿರುವ ಸುಖಕ್ಕೆ ಈ ಸಾರ್ವಜನಿಕ ಸ್ಥಳದಲ್ಲಿ ತಡೆಯೊಡ್ಡಬೇಕೆಂದು ಎಣಿಸಿದ ರಾಜಿ 'ನಿನ್ನಮ್ಮಿ ಖತ್ನಾ ಮಾಡ್ಸೋದ್ಯಾವಾಗಂತೋ?' ಎಂದು ಹಲ್ಕಿರಿಯುತ್ತಲೇ ಪೋಲಿ ಹೆಂಗಸಂತೆ ನಾಚಿಕೆ ಬಿಟ್ಟು ನೇರವಾಗಿ ಕೇಳಿಬಿಟ್ಟಾಗ ನವಾಬನ ಸ್ಪರ್ಶ ಸುಖದ ಮೂಡೆಲ್ಲ ಹಾಳಾಯ್ತು. ಅವನ ಮುಖ ಸುಣ್ಣದ ಕಲರಿನಿಂದ ರಕ್ತದ ಕೆಂಪಿಗೆ ಬದಲಾಗಿಹೋಯ್ತು. ಅಲ್ಲಿ ನಿಲ್ಲಲಾಗದೆ ನಾಚಿಕೆ-ಅವಮಾನದಿಂದ ನವಾಬ ನೂಕುನುಗ್ಗಲಿನ ನಡುವಿನಿಂದ ಮಾಯವಾದ.

ಮಿನಿಸ್ಟ್ರು ಬಂದು ಹೋದ ಮೇಲೆ ಕೆರೆಯಂಗಳದ ಜನಕ್ಕೆ ನಿಜವಾಗಲೂ ಬಾಯಿ ಹುಣ್ಣಿನ ರೋಗ ಬಂದಾಯ್ತು ಎನ್ನುವ ರೀತಿಯಲ್ಲಿ ವಾತಾವರಣವೇ ಬದಲಾಯ್ತು. ಯಾರ ಮುಖದಲ್ಲೂ ಅವರಿವರ ಬಗ್ಗೆ ಆಡಿಕೊಳ್ಳುವ ಹುಮ್ಮಸ್ಸು ಇರಲಿಲ್ಲ. ಮುನ್ಸಿಪಾಲ್ಟಿಯ ಏಕಮಾತ್ರ ನಲ್ಲಿಯ ಬಳಿಯೂ ಎಳ್ಳಷ್ಟು ಮಾತು ಕೇಳಿಬರದಂತಾಯಿತು. ಆ ಜನರ ಬದುಕು ಮೊದಲ ಬಾರಿಗೆ ಭಾರವೆನಿಸತೊಡಗಿತು. ಊರಿಗೆ ಊರೇ ತನ್ನ ಕೊಳಕನ್ನು ತೊಳೆಕೊಳ್ಳುವ, ದುಡ್ಡಿಲ್ಲದಿದ್ದಾಗ ಮೀನಿಗೆ ಗಾಳ ಎಸೆಯುವ ಈ ಜನರ ಕೆರೆಯನ್ನು ಒಡೆದು ಬಸ್‌ಸ್ಟ್ಯಾಂಡ್ ನಿರ್ಮಿಸುವ ಕೆಲಸಕ್ಕೆ ದೊಡ್ಡ ದೊಡ್ಡ ಯಂತ್ರದ ಕೈಗಳು ಕೈ ಹಾಕಿದ್ದವು. ಕೆರೆ ಏರಿಯ ಒಂದು ಕಡೆ ದಾರಿಯಲ್ಲಿ ತುಂಡರಿಸಿಹಾಕಿದ್ದ ಯಂತ್ರಗಳು ಮತ್ತೊಂದು ಕಡೆ ಲಾರಿಗಟ್ಟಲೆ ಮಣ್ಣನ್ನು ಅದಾಗಲೇ ಖಾಲಿಗೊಂಡಿದ್ದ ಕೆರೆಯ ಚಕ್ಕಳದ ಮೇಲೆ ಮುಚ್ಚುತ್ತಿದ್ದವು. ಅಲ್ಲಿನ ಮುದುಕಿಯರಿಗಿಂತ ಹಳೆಯದಾಗಿ ಕಾಣುತ್ತಿದ್ದ ಹೇಗೋ ಬೆಳೆದು ಹೇಗೋ ಬಾಗಿ ಇನ್ನೂ ಜೀವ ಉಳಿಸಿಕೊಂಡಿದ್ದ ಈಚಲು ಮರಗಳ ಅಸಂಖ್ಯ ತುಂಡುಗಳು ಕೆರೆಯಂಗಳದ ಸರ್ವನಾಶವನ್ನು ಪ್ರತಿಬಿಂಬಿಸುತ್ತಿದ್ದವು. 'ಶಿವಮೊಗ್ಗೆಗೆ ಬರ ಬಂದರೂ ಈ ಕೆರೆಗೇನೂ ಆಗುವುದಿಲ್ಲ. ಇಲ್ಲಿನ ನೀರು ಇಂಗುವುದೇ ಇಲ್ಲ' ಎಂದು ಹೇಳುತ್ತಿದ್ದ ಕೆರೆಯಂಗಳದ ಜನ, ಜೀವಂತ ಕೆರೆಯೊಂದು ಮಣ್ಣು ಹಾಸಿದ ಹೊಸ ರಸ್ತೆಯಂತೆ ಕಾಣುತ್ತಿರುವುದನ್ನು ಕಂಡು ಕಣ್ಣೀರು ಹಾಕಿದರು. ಎಲ್ಲದಕ್ಕೂ ಕೆರೆಯೊಂದಿಗೆ ನೆಂಟಸ್ತನ ಬೆಳೆಸಿಕೊಂಡಿದ್ದ ಕೆರೆಯಂಗಳದ ಜನರಲ್ಲಿ ಏನೋ ಕಳೆದುಕೊಂಡ ನೋವು ಮಾತ್ರ ದಿನದಿಂದ ದಿನಕ್ಕೆ ಬೆಳೆಯುತ್ತಾ ಹೋಗಿತ್ತು. ಏರಿಗೆ ಸಮನಾಗಿ ಕೆರೆಯನ್ನು ಮುಚ್ಚಿದ ಸೂಟುಬೂಟಿನ ಜನ ಝೋಪಡಿಗಳ ಮುಂದೆ ನಿಂತು ಕಣ್ಣಳತೆ ಮಾಡಿ, ಗೆರೆ ಕೊರೆದು ಹೋದಾಗಲಂತೂ ಈ ಜನರ ಕಣ್ಣೀರು ತಡೆಯುವ ಏರಿಯೂ ಅಲ್ಲಿ ಇರದಹಾಗಾಯಿತು. ಕೆರೆಯಂಗಳದ ಝೋಪಡಿಗಳು ಅವರವರಿಗೆ ತಮ್ಮ ಮಕ್ಕಳಂತೆ ಕಂಡು ಮಕ್ಕಳ ಮೇಲೆ ಸಾವಿನ ನೆರಳು ಬಿದ್ದು ಅವಚುತ್ತಿರುವುದನ್ನು ನೋಡಿಯೂ ಮೌನ ವಹಿಸಬೇಕಾದ ಅನಿವಾರ್ಯತೆಗೆ ಒಳಗಾದಂತಾಗಿದ್ದರು.

ನವಾಬನ ಖತ್ನಾ ಮಾಡಿಸಲೇಬೇಕೆಂದು ಹಟತೊಟ್ಟಿದ್ದ ನಯೀಮಾ ಮತ್ತೀಗ ಗೊಂದಲದಲ್ಲಿ ಬೀಳುವಂತಾಯ್ತು. ಮೂರು ಬೀದಿಗಳಲ್ಲಿ ಘೋಡಾ ಸವಾರಿ ಮಾಡಿಸಿ, ಕೆರೆಯಂಗಳದ ಜನರೆಲ್ಲ ನಿಂತು ಆಶ್ಚರ್ಯಪಡುವಂತೆ ನವಾಬನ ಖತ್ನಾ ಮಾಡಿಸುತ್ತೇನೆ. ಮೂರು ಕೇರಿಗೂ ತಪ್ಪದೇ ಕುರಿ ಊಟ ಹಾಕಿಸ್ತೇನೆ ಎಂದು ಜಂಬ ಕೊಚ್ಚಿಕೊಂಡಿದ್ದ ನವಾಬನ ಅಮ್ಮಿ ನಯೀಮಾಳ ಜೋಪಡಿಗೂ ಸೂಟು ಬೂಟಿನ ಅಧಿಕಾರಿಗಳು ಗೆರೆ ಎಳೆದು ಹೋಗಿದ್ದರು. ನವಾಬನ ಖತ್ನಾಕ್ಕೆಂದು ಜೋಡಿಸಿಕೊಂಡಿದ್ದ ತಾಂಬೆಯ ಕೊಡ, ಕೆಂಪು ಕಲರಿನ ಪಂಚೆಯಾಕಾರಕ್ಕೆ ಕತ್ತರಿಸಿದ ಬಟ್ಟೆ, ಆ ಬಟ್ಟೆಯ ನಾಲ್ಕು ತುದಿಗೂ ಹೊಲಿದ ಮಿರಿ ಮಿರಿ ಮಿಂಚುವ ರೇಶಿಮೆಯ ಪಟ್ಟಿ, ತುಪ್ಪದೊಳಗೆ ಅದ್ದಲು ತಯಾರು ಮಾಡಿಕೊಂಡ ಖರ್ಜೂರ, ಒಣಗಿದ ದ್ರಾಕ್ಷಿ.... ಎಲ್ಲ ಎಲ್ಲವನ್ನೂ ಮೂಟೆಕಟ್ಟಿ ಝೋಪಡಿಯನ್ನು ಖಾಲಿ ಮಾಡಲು ಸಿದ್ಧವಾಗಿ ನಿಂತಳು.

ಕೆರೆಯಂಗಳದ ಕೇರಿಯ ಛಾತಿ ಬೆಳೆದ ಹುಡುಗಿಯರು, ತಾವೂ ಸರದಿಯಂತೆ ಖಾಲಿಯಾಗುತ್ತೇವೆ ಎಂಬ ಭಾವನೆಯೊಂದಿಗೆ ನಯೀಮಾಳಿಗೆ ಮೌನದಲ್ಲಿಯೇ ಸಹಕರಿಸತೊಡಗಿದರು. 'ಖತ್ನಾ ಮಾಡಿಸಿಕೊಂಡು ನಮ್ಮ ಕುತೂಹಲ ಕಾಣಿಸಲೇ ಇಲ್ಲವಲ್ಲೋ' ಎಂಬಂತೆ ಮೂಲೆಯಲ್ಲಿ ನಿಂತಿದ್ದ ನವಾಬನತ್ತ ಈ ಹುಡುಗಿಯರು ದೃಷ್ಟಿ ಹಾಯಿಸಿ, 'ಜಟ್‌ಪಟ್ ನಗರದೊಳ್ಗೆ, ಜಾಗವಿದ್ರೆ ನಮ್ಮ ಅಜ್ಜ ಅಮ್ಮಿಗೂ ತಿಳಿಸು. ಝೋಪಡಿ ಕಿತ್ತು ಬರ್ತೇವೆ' ಎಂದು ಉಸುರಿದಂತಾಯಿತು.

ರಾಜಿಯೂ ಅಲ್ಲಿಗೆ ಬಂದು, ನವಾಬನ ಪಕ್ಕಕ್ಕೆ ನಿಂತವಳೇ ಹೆಗಲಿಗೆ ಕೈಹಾಕಿ 'ಬೂವಕ್ಕಾ, ನವಾಬನ ಖತ್ನಾಕ್ಕೆ ನಮ್ಗೂ ಕರಿಯೇ ಮರೀಬ್ಯಾಡ' ಎಂದು ಕೋಳಿಯಂತೆ ಕೂಗು ಹಾಕಿ, ಅವನ ತಲೆಯನ್ನು ಪ್ರೀತಿಯಿಂದ ತಟ್ಟಿದಾಗ, ನವಾಬನಲ್ಲಿ ಮುಂದಿನ ಬೇಸಿಗೆಯು ಜನ್ನತ್ತಿನ ಸಂತೋಷವನ್ನು ಕನಸಿನ ಮೂಲಕ ತಂದೊಡ್ಡಿತು.

ಶಿ. ಜು.
ಜನವಾಹಿನಿ, ನಟರಾಜ ಫ್ರೇಂ ವರ್ಕ್ಸ್ ಬಿಲ್ಡಿಂಗ್, ದುರ್ಗಿ ಗುಡಿ
ನೆಹರು ರಸ್ತೆ, ಶಿವಮೊಗ್ಗ - ೫೭೭ ೨೦೧



# ಅಡಿಗೆಯ ಒಳಗೆ

**ದಮಯಂತಿ ನರೇಗಲ್**

ಮದುವೆಯಾದ ಮೇಲೆ ನಾನು-ಶ್ರೀಧರ ಮೊದಲ ಸಲ ಮುಂಬಯಿಯಿಂದ ನಮ್ಮ ಊರಿಗೆ ಹೊರಟಿದ್ದೆವು. ನಮ್ಮಿಬ್ಬರ ಮದುವೆ ಹಿರಿಯರ ಮುಖಾಂತರ, ಪದ್ಧತಿ ಪ್ರಕಾರ ಆಗಿರಲಿಲ್ಲ. ಮದುವೆಯ ಸಮಾರಂಭಕ್ಕೆ ವ್ಯರ್ಥ ಹಣ ವ್ಯಯ ಮಾಡುವುದೂ ನಮಗಿಷ್ಟ ವಿರಲಿಲ್ಲ. ಅಂತೆಯೇ ಮುಂಬಯಿಯಲ್ಲಿ ನಾವೇ ಪರಸ್ಪರ ನಿರ್ಧರಿಸಿಕೊಂಡು ನಾಲ್ಕಾರು ಗೆಳೆಯ-ಗೆಳತಿಯರ ಮಧ್ಯೆ ಮದುವೆ ಮಾಡಿಕೊಂಡಿದ್ದೆವು. ಆ ಬಗ್ಗೆ ಇಬ್ಬರ ಮನೆಯಲ್ಲಿಯೂ ಅಸಮಾಧಾನವಿತ್ತು. ಹೋದ ವರ್ಷ ಭೆಟ್ಟಿಯಾಗಲು ಬರುತ್ತೇವೆಂದಾಗ ಇಬ್ಬರ ಮನೆಯಿಂದಲೂ ಉತ್ಸಾಹದ ಪ್ರತಿಕ್ರಿಯೆ ಬರಲಿಲ್ಲ. ಈ ವರ್ಷ ಮತ್ತೆ ಬರೆದಾಗ ಸಿಟ್ಟಿನ ಮಟ್ಟ ಸಾಕಷ್ಟು ಕೆಳಗಿಳಿದಿತ್ತೆಂದು ಕಾಣುತ್ತದೆ. ಇಬ್ಬರ ಕಡೆಯಿಂದಲೂ ಸ್ವಾಗತ ದೊರೆಯಿತು.

ಶ್ರೀಧರ ಬೆಂಗಳೂರಿನವನು. ನನ್ನ ಊರು ವಿಜಾಪುರದ ಹತ್ತಿರದ ಒಂದು ಸಣ್ಣ ಹಳ್ಳಿ. ನನ್ನ ತಂದೆ, ಇಬ್ಬರು ಕಕ್ಕಂದಿರು ಅಲ್ಲಿ ಹೊಲಮನೆ ಸಾಗುವಳಿ ಮಾಡಿಕೊಂಡಿದ್ದರು. ಜೋಡೆತ್ತಿನ ಕಮಟ. ಸಾಕಷ್ಟು ಆಳು ಕಾಳುಗಳು, ರೈತರು ಯಾವಾಗಲೂ ಮನೆಗೆ ಬರು-ಹೋಗುವುದು ನಡೆದೇ ಇರುತ್ತಿತ್ತು.

ಮೊದಲು ನಮ್ಮ ಊರಿನಲ್ಲಿ ಮೂರು ದಿನ ಇದ್ದು ಆಮೇಲೆ ಬೆಂಗಳೂರಿಗೆ ಶ್ರೀಧರನ ತಂದೆ-ತಾಯಿಯರನ್ನು ಕಾಣಲು ಹೋಗುವುದೆಂದು ನಿಶ್ಚಯಿಸಿದ್ದೆವು. ನಾವು ನಮ್ಮೂರಿನಲ್ಲಿ ಬಸ್ಸಿನಿಂದಿಳಿದಾಗ ಬೆಳಗಿನ ಹನ್ನೊಂದು ಗಂಟೆಯಾಗಿತ್ತು. ರಾಘು ಕಾಕಾ ಚಕ್ಕಡಿ ತೆಗೆದುಕೊಂಡು ಬಸ್‌ಸ್ಟ್ಯಾಂಡಿಗೆ ಕರೆಯಲು ಬಂದಿದ್ದ. ಶಹರದಲ್ಲಿಯೇ ಹುಟ್ಟಿ ಬೆಳೆದಿದ್ದ ಶ್ರೀಧರ ಏನು ಮಾಡಿದರೂ ಚಕ್ಕಡಿಯಲ್ಲಿ ಕೂಡಲು ತಯಾರಾಗಲಿಲ್ಲ. ಸಾಮಾನುಗಳನ್ನು ಮಾತ್ರ ಚಕ್ಕಡಿಯಲ್ಲಿಟ್ಟು ನಾವು ಮೂವರೂ ನಡೆದೇ ಹೊರಟೆವು. ಹೊರಟಾಗ ನಾವು ಮೂವರೇ ಇದ್ದರೂ ಮನೆ ಮುಟ್ಟುವವರೆಗೆ ನಮ್ಮ ಗುಂಪು ಬೆಳೆದು ಹತ್ತಿಪ್ಪತ್ತು ಜನರ ಗುಂಪಾಗಿತ್ತು. ದಾರಿಯಲ್ಲಿ ಚಿಕ್ಕಂದಿನಿಂದ ನನ್ನ ಜೊತೆಗೆ ಆಡಿದ ಗದ್ದನಕೇರಿ ಆಚಾರ್ಯರ ಮಗ ರಂಗ ಕೂಡಿಕೊಂಡ. ರಾಘು ಕಾಕಾನ ಲಂಗೋಟಿ ಗೆಳೆಯ ಸಿದ್ರಾಮ ಕೂಡಿಕೊಂಡ. ನನ್ನ ಬಾಲ್ಯದ ಗೆಳತಿ ಮಣ್ಣೂರ ಶಾಸ್ತ್ರಿಗಳ ಮಗಳು ಯಮುನಾ ನದಿಯಿಂದ ನೀರು ಹೊತ್ತುಕೊಂಡು ಬರುತ್ತಿದ್ದವಳು ಕೊಡ ಹೊತ್ತುಕೊಂಡೇ ನನ್ನೊಡನೆ ನಡೆಯತೊಡಗಿದಳು. ನಮ್ಮ ಊರಿನ ರೇಡಿಯೋ ಸ್ಟೇಷನ್ ಎಂದೇ ಹೆಸರಾದ ನಾರಣಾಚಾರು ಅಲ್ಲಿಂದಲೇ ನನ್ನ ಬೆನ್ನು ಹತ್ತಿದರು. ''ಮುಂಬಯಾಗಽ ಲಗ್ನಾ ಮಾಡಿಕೊಂಡ್ಯಾ ? ಇವನಽ ಏನು ನಿನ್ನ ಗಂಡಾ ? ಛಲೊ ಇದ್ದಾನ ಬಿಡು. ಎಲ್ಲಿ ನೌಕರಿ ಮಾಡ್ತಾನ ? ನೀನೂ ನೌಕರೀ ಮಾಡ್ತೀ ಅಂತಲ್ಲಾ? ಎಷ್ಟು ಪಗಾರಾ ?'' ಇತ್ಯಾದಿ ಇತ್ಯಾದಿ. ಗುರುತಿದ್ದ ಇಲ್ಲದ ಹುಡುಗರು ಏನೋ ಮೆರವಣಿಗೆ ಹೊರಟಿದೆ ಎನ್ನುವಂತೆ ಕೂಡಿಕೊಂಡರು ನಮ್ಮನ್ನು. ಹಳ್ಳಿಯೂರಿನ ರೀತಿಯನ್ನೇ ಅರಿಯದ ಶ್ರೀಧರ ಸ್ವಲ್ಪ ಕಕ್ಕಾಬಿಕ್ಕಿಯಾಗಿದ್ದ.

ಮನೆ ಮುಟ್ಟಿದಾಗ ನಮ್ಮ ತಂದೆ ಹೆಬ್ಬಾಗಿಲಲ್ಲೇ ನಿಂತಿದ್ದರು. ನಮ್ಮ ಊರಿನಲ್ಲಿ ನಮ್ಮದೇ ದೊಡ್ಡ ಮನೆ. ಮಣ್ಣಿನ ಗೋಡೆ, ಕುಂಬಿಯ ಮನೆಯಾದರೂ ದೊಡ್ಡ, ಪ್ರಶಸ್ತವಾದ ಮನೆ. ಬಾಗಿಲಲ್ಲಿ ಆರತಿ ಹಿಡಿದು ಅವ್ವ, ಕಕ್ಕಿ ನಿಂತಿದ್ದರು. ಅಳಿಯ ಮೊದಲ ಸಲ ಮನೆಗೆ ಬಂದಿದ್ದನಲ್ಲ ಮತ್ತೆ! ಆರತಿ ಮಾಡಿಸಿಕೊಂಡು ಹಿರಿಯರಿಗೆಲ್ಲ ನಮಸ್ಕಾರ ಮಾಡಿ ಒಳಗೆ ಬಂದೆವು. ಒಳಗೆ ಬಂದೊಡನೆ ಹೊಡೆದ ಸೆಗಣಿಯ ಗಬ್ಬುನಾತಕ್ಕೆ ಶ್ರೀಧರ ಮೂಗು ಮುಚ್ಚಿಕೊಂಡ. ''ಏನಿದು, ಈ ವಾಸನೆ ಸಹಿಸಿ ಹೇಗಪ್ಪಾ ನಾಲ್ಕು ದಿನ ಕಳೆಯುವುದಿಲ್ಲ'' ಎಂದು ನನಗೆ ಮಾತ್ರ ಕೇಳಿಸುವಂತೆ ಮೆಲ್ಲಗೆ ಕೇಳಿದ. ನಾನು ಅವನ ಪಾಡನ್ನು ನೋಡಿ ನಗುತ್ತಾ ಹೇಳಿದೆ – ''ಮನೀ ಒಳಗೇನೂ ವಾಸನಿ ಬರೂದುಲ್ಲಾ, ಗಾಬರ್‍ಯಾಗಬ್ಯಾಡಾ.''

ಹೆಬ್ಬಾಗಿಲಿನಿಂದ ಒಳಗೆ ಕಾಲಿಟ್ಟೊಡನೆ ದೊಡ್ಡ ಅಂಗಳ, ಅಂಗಳದ ಎರಡೂ ಬದಿಯಲ್ಲಿ ಆಕಳು, ಎತ್ತು, ಎಮ್ಮೆಗಳನ್ನು ಕಟ್ಟಲು ಗೋದಲಿಗಳಿದ್ದವು. ಅಂಗಳವನ್ನು ದಾಟಿದ ಮೇಲೆ ಇನ್ನೂ ಒಂದು ದೊಡ್ಡ ಬಾಗಿಲು, ಒಂದು ಪೂಟು ಎತ್ತರದ ಹೊಸ್ತಿಲ. ಅದನ್ನು ದಾಟಿ ಒಳಗೆ ಕಾಲಿಟ್ಟಾಗ ಕಲ್ಲು ಫರಸಿ ಹಾಕಿದ, ಸ್ವಚ್ಛವಾದ, ಆಕಾಶಕ್ಕೆ ತೆರೆದ ಅಂಗಳ. ಅಂಗಳದ ಮೂರೂ ಬದಿಗೆ ಎತ್ತರದ ಕಟ್ಟೆಯ ಪಡಸಾಲೆ. ಒಂದು ಬದಿಯ ಕಟ್ಟೆಯ ಮೇಲೆ ಧಾನ್ಯದ ಚೀಲಗಳನ್ನೊಟ್ಟಿದ್ದರು. ಇನ್ನೊಂದು ಬದಿಯ ಕಟ್ಟೆಯ ಮೇಲೆ ಆಳು ಕಾಳುಗಳ ನ್ಯಾರಿಯ ಕಾರ್ಯಕ್ರಮ ನಡೆದಿತ್ತು ಎಂದಿನಂತೆ. ಎರಡು ವರ್ಷಗಳ ನಂತರ ನನ್ನ ಮನೆಯ ಅಂಗಳವನ್ನು ಕಂಡು ನನ್ನ ಮನವರಳಿತ್ತು. ಹತ್ತು ವರ್ಷಗಳ ಹಿಂದಿನಂತೆ ಮೈಮರೆತು ಓಡುತ್ತ ಹೋಗಿ ಕಟ್ಟೆಯನ್ನು ಹತ್ತಿದೆ. ಹತ್ತಿ ತಿರುಗಿ ನಿಂತು ನನ್ನ ಅವ್ವನ ಮುಖವನ್ನು ನೋಡಿದೆ. ಅವ್ವನ ಕಣ್ಣಲ್ಲಿ ನಗು ತುಂಬಿತ್ತು. ಆದರೂ ಸೆರಗಿನ ತುದಿಯಿಂದ ಕಣ್ಣೊರೆಸಿಕೊಳ್ಳುತ್ತ ''ಲಗ್ನಾ ಮಾಡಿಕೊಂಡರೂ ನೀ ಏನೂ ಸುಧಾರಿಸಿಲ್ಲಾ ನೋಡು, ಬರ್‍ರಿ ಒಳಗ'' ಎಂದು ಅಡಿಗೆಯ ಮನೆಯ ಕಡೆಗೆ ಹೋದಳು.

ಮುಂಬಯಿಯಿಂದ ಬಂದ ಆಧುನಿಕ ಅಳಿಯ ಎಂದು ಶ್ರೀಧರನ ಆದರ-ಸತ್ಕಾರ ಚೆನ್ನಾಗಿಯೇ ನಡೆದಿತ್ತು. ಅಟ್ಟದ ಮೇಲಿನ ಒಂದು ಕೋಣೆಯನ್ನು ನಮಗಾಗಿಯೇ ಸಜ್ಜುಗೊಳಿಸಲಾಗಿತ್ತು. ಕೋಣೆಯಲ್ಲಿ ಒಂದು ಕಬ್ಬಿಣದ ಮಂಚವನ್ನೂ ಹಾಕಲಾ ಗಿತ್ತು. ಬಹುಶಃ ನಮಗಾಗಿ ವಿಜಾಪುರ ದಿಂದ ಹೊಸದು ಖರೀದಿಯಾಗಿರ ಬೇಕು. ಇಲ್ಲವಾದರೆ ನಮ್ಮ ಮನೆಯಲ್ಲಿ ಎಲ್ಲರಿಗೂ ಪ್ರತ್ಯೇಕ ಮಂಚದ ಪದ್ಧತಿಯೇ ಇರಲಿಲ್ಲ. ಐದಂಕಣದ ನಡುಮನೆಯಲ್ಲಿ ಹರಿಹಾಸಿಗೆ ಹಾಸಿ ಎಲ್ಲ ಮಕ್ಕಳು ಸಾಲಾಗಿ ಮಲಗಿಕೊಳ್ಳುತ್ತಿದ್ದೆವು.

ಶ್ರೀಧರನನ್ನು ರೂಮಿನಲ್ಲಿ ಬಿಟ್ಟು ನಾನು ಕೆಳಗಿಳಿದು ಅಡಿಗೆಯ ಮನೆಗೆ ಹೋದೆ. ಅಲ್ಲಿಯ ದೃಶ್ಯ ನಾನು ನಿರೀಕ್ಷಿಸಿದ್ದೇ. ಆಗಲೇ ಚಕ್ಕಲಿಯ ಬಳ್ಳಿಗಳು ತಾಟಗಿಳಿದಿದ್ದವು. ನಾನು ಸ್ವಲ್ಪ ರೇಗಿಯೇ ಕೇಳಿದೆ – ''ಅವ್ವಾ, ಏನಿದೆಲ್ಲಾ? ಇಷ್ಟೆಲ್ಲಾ ಯಾಕ ಮಾಡಿಕೋತ ಕೂತೀರಿ ಈಗ ?''

ಅವ್ವನ ಬದಲು ಅತ್ಯಾ ಉತ್ತರ ಕೊಟ್ಟಳು– ''ಅಂದರೇನಽ ಅಕ್ಕಮ್ಮಾ ? ಮೊದಲೇ ಸರ್‍ತೆ ಅಳ್ಯಾ ಬಂದಾನ, ಅದರಾಗೂ ನಮ್ಮ ಮನೀ ಹಿರೇ ಅಳ್ಯಾನವಾ... ಇಷ್ಟು ಮಾಡಬಾರದಽ? ಲಗ್ನಾ ಅಂತೂ ನಮ್ಮನ್ನೆಲ್ಲಾ ಬಿಟ್ಟು ಮಾಡಿಕೊಂಡ್ರಿ...''

ಅವ್ವ ಹೇಳಿದಳು : –''ಕೈಕಾಲು ತೊಳಕೊಂಡು ಬರ್‍ರಿ, ಫರಾಳಾ ಮಾಡಿ ಸ್ನಾನಾ-ಗೀನಾ ಮಾಡೀರಂತ.''

''ಅವ್ವಾ, ಈಗ ಹನ್ನೆರಡು ಹೊಡೀಲಿಕ್ಕೆ ಬಂದದ. ಬಂದ ಕೂಡಲೇ ಚಹಾ ಆಗೇದಲ್ಲಾ, ಈಗ, ಈಗೇನು

ಫರಾಳಾ-ಗಿರಾಳಾ ಬ್ಯಾಡಾ. ಸುಮ್ಮನಽ ಅಡಿಗೀನಽ ಮಾಡಿಬಿಡಬಾರದಿತ್ತಽ ? ಲಗೂ ಊಟಾ ಮುಗಿಸಿ ನಾಳಿನ ತಯಾರೀಗೆ ಹತ್ತಲಿಕ್ಕಾಗತಿತ್ತು.'' ನಾಳೆ ಸಂಧ್ಯಾನ ಲಗ್ನದ ನಿಶ್ಚಿತಾರ್ಥದ ಸಮಾರಂಭವಿದೆಯೆಂದು ರಾಘು ಕಾಕಾ ದಾರಿಯಲ್ಲಿಯೇ ಹೇಳಿದ್ದ.

''ಹಾಂಗ ಹ್ಯಾಂಗಾಗತಽದಽ, ನೀನೂ ಒಬ್ಬಾಕಿ ? ಸಾವಕಾಶ ಊಟಾ ಮಾಡಿದರಾತು, ಊಟದ್ದೇನು ಅವಸರಾ ? ನಾಳಿನ ತಯಾರಿ ಎಲ್ಲಾ ರಾತ್ರಿ ಕೂತು ಮಾಡೂಣಂತ ನಿಶ್ಚಿಂತೀಲೆ'' ಪದ್ಮಾ ಕಾಕು ಹೇಳಿದಳು.

ಅಷ್ಟರಲ್ಲೇ ಹೊರಗಿನಿಂದ ಶೀನು ಕಾಕಾ ಬಂದ – ''ನನ್ನ ಪಕ್ಷಗಾರರು ಬಂದಾರ, ಒಂದ ಹತ್ತಕಪ್ಪ ಚಹಾ ಕಳಸರಿ ಅಂತ ಹೇಳಿ ಒಂದ ತಾಸಾತು...'' ಎಂದು ರೇಗುತ್ತ.

''ಸಧ್ಯಾ ತಯಾರದಽರಿ, ಭಾವಜಿ, ಕಳಿಸಿಕೊಡ್ತೇನಿ.. ರಜನೀ..'' ಚಹಾ ಒಯ್ಯಲು ಆಶಾ ಕಾಕು ಮಗಳನ್ನು ಕೂಗಿದಳು. ''ಇವರದೊಂದು ಯಾವಾಗಲೂ ಅವಸರದಾಗ ಅವಸರಾ''– ಪದ್ಮಾ ಕಾಕು ಗಂಡನ ಬಗ್ಗೆ ಗೊಣಗಿದಳು.

ನಾನು ಒಂದು ಕ್ಷಣ ಅಲ್ಲಿಯೇ ನಿಂತೆ ಎಲ್ಲವನ್ನೂ ನೋಡುತ್ತ. ಏನೂ ಬದಲಾಗಿಲ್ಲ. ಈ ಹತ್ತು ವರ್ಷಗಳಲ್ಲಿ ಜಗತ್ತು ಎಲ್ಲಿಂದೆಲ್ಲಿಗೆ ಹೋಗಿದೆ ! ರಾಜ್ಯಗಳು ಬಿದ್ದಿವೆ, ಎದ್ದಿವೆ, ಕಂಪ್ಯೂಟರ್ ಸಂಪರ್ಕದಿಂದಾಗಿ ಜಗತ್ತೆಲ್ಲ ನಡುವಿನ ಅಂತರಗಳನ್ನು ಅಳಿಸಿಹಾಕಿ ಒಂದು ದೊಡ್ಡ ನಗರವಾಗಿ ಮಾರ್ಪಟ್ಟಿದೆ. ಆದರೆ ಈ ನಮ್ಮ ಮನೆ ಮಾತ್ರ ತಾನೇ ಒಂದು ಹಳೇ ಜಗತ್ತಿನ ಏಕಮೇವ ಮಾದರಿ ಎನ್ನುವಂತೆ ಹಾಗೇ ಉಳಿದುಕೊಂಡಿದೆ. ಏನೇನೂ ಬದಲಾಗಿಲ್ಲ. ಹತ್ತು ವರ್ಷಗಳ ಹಿಂದೆ ನಡೆದಂತೆಯೇ ಇಂದೂ ಅಡಿಗೆ ಮನೆಯ ಫ್ಯಾಕ್ಟರಿ ನಡೆದೇ ಇತ್ತು. ಒಲೆಗಳು ಉರಿಯುತ್ತಲೇ ಇದ್ದವು; ಹೊಗೆಯ, ಎಣ್ಣೆ-ತುಪ್ಪಗಳ ವಾಸನೆಗಳ ಮಧ್ಯದಲ್ಲಿ ನಗೆ-ಚೇಷ್ಟೆಗಳ, ಮುನಿಸು-ಅಣಕುಗಳ ದನಿಯೂ ಸೇರಿತ್ತು. ಮುಂಬಯಿಯಲ್ಲಿದ್ದು ಈ ಅಡಿಗೆ ಮನೆಯ ನಿತ್ಯೋತ್ಸವ ಮರೆತಂತಾಗಿತ್ತು ನನಗೆ.

ಫರಾಳ, ಊಟ, ನಿದ್ದೆ ಎಲ್ಲ ಮುಗಿದು ಆಕಳಿಸುತ್ತ ಕೆಳಗಿಳಿದು ಬಂದಾಗ ಆಗಲೇ ಆರು ಹೊಡೆದಿತ್ತು. ಕೆಳಗೆ ಚಹಾದ ಗದ್ದಲ ನಡೆದಿತ್ತು. ಚಹಾದ ಪ್ರಕರಣವೂ ಸುಮ್ಮನೆ ಸಣ್ಣದರಲ್ಲಿ ಮುಗಿಯುವುದಿಲ್ಲ ನಮ್ಮ ಮನೆಯಲ್ಲಿ. ಪ್ರತಿಯೊಬ್ಬರೂ ಕಪ್ಪು ಹಿಡಿದುಕೊಂಡು ಬಂದಷ್ಟು ಸಲ ಚಹಾ ಸುರಿಬೇಕು ಅದರಲ್ಲಿ. ಅಲ್ಲದೆ ಪಡಸಾಲೆಯಲ್ಲಿ ಬರು-ಹೋಗುವವರಿಗೆ ಚಹಾದ ಸರಬರಾಯಿ ನಡೆಯುತ್ತಲೇ ಇರುತ್ತದೆ. ಅಡಿಗೆ ಮನೆಯಲ್ಲಿ ನಾನು ಈಗ ನೋಡಿದ ಒಂದು ಸುಧಾರಣೆಯೆಂದರೆ ಚಹಾ ಮಾಡಲು ಗ್ಯಾಸಿನ ಒಲೆ ಬಂದಿತ್ತು. ಒಲೆಗೆ ಉರಿ ಹಾಕಿದ್ದಿಲ್ಲ. ಗ್ಯಾಸಿನ ಒಲೆಯ ಮೇಲೆ ಒಂದು ದೊಡ್ಡ ಪಾತ್ರೆಯಲ್ಲಿ ಚಹಾ ಕತಕತನೆ ಕುದಿಯುತ್ತಿತ್ತು.

ರಾಘು ಕಾಕಾ ಒಳಗೆ ಬಂದು ಹೇಳಿದ – ''ಇವತ್ತ ಇಸ್ಪೀಟಾಡಲಿಕ್ಕೆ ನಮ್ಮ ಮನ್ಯಾಗ ಕೂಡಾವರಿದ್ದೀವಿ ಹಾಂ... ಅವಲಕ್ಕಿ ತಯಾರಿಟ್ಟಬಿಡ್ರಿ.''

''ಛೆ ನಿಮ್ಮದೂ ಒಂದು... ಇವತ್ಯಾಕ ? ಸುಮ್ಮಕ್ಕ-ಆಕೀ ಗಂಡಾ ಬಂದಾರ, ಎಲ್ಲಾರ ಜೋಡಿ ಕೂತು ಹರಟೀ ಹೊಡಿಯೂದು ಬಿಟ್ಟು...'' ಆಶಾ ಕಾಕೂ ರೇಗಿದಳು.

''ಛೇ, ಛೇ, ಹಾಂಗ ತಪ್ಪಿಸಿಗೊಳ್ಳಿಕ್ಕೆ ಬರೂದುಲ್ಲಾ, ನಮ್ಮ-ನಮ್ಮ ಪಾಳೀ ನಿಭಾಯಿಸಲಿಕ್ಕೇ ಬೇಕು. ಅದಕ್ಕಽ ತಡಾಮಾಡಿ ರಾತ್ರಿ ಹತ್ತಘಂಟೇಕ್ಕ ಬರ್ರಿ ಅಂದೀನಿ.''

''ನಾಳಿನ ತಯಾರಿ ಆಗಬೇಕು ಇನ್ನೂ...''

''ಒಂದ ಅವಲಕ್ಕಿ ಹಚ್ಚಲಿಕ್ಕೆ ಎಷ್ಟು ಹತ್ತತಽದ ಆಶಾ, ಹಚ್ಚಿಬಿಡು... ಬರ್ರಿ ಅಂತ ಹೇಳ್ಯಾನ ಅಂದಮ್ಯಾಲೆ ಏನು ವಾದಸೂದು ಅದು ?'' ಅವ್ವನ ಆಜ್ಞೆಯಾದ ಮೇಲೆ ಆಶಾ ಕಾಕು ಸುಮ್ಮನಾಗಬೇಕಾಯಿತು. ''ಅವರ ಅಚ್ಚಾದ ಮೈದನಾ, ಏನೂ ಇಲ್ಲಾ ಅನಬಾರದು ನೋಡು ಅವರಿಗೆ'' – ಅವಳು ನನ್ನ ಕಡೆಗೆ ತಿರುಗಿ ಮೆಲ್ಲಗೆ ದೂರಿದಳು. ನಿಜವೇ, ರಾಘು ಕಾಕಾ ನಮ್ಮ ಅವ್ವನಿಗೆ ಹಿರಿಯ ಮಗನಂತೆಯೇ ಇದ್ದ.

ರಾತ್ರಿಯ ಊಟಕ್ಕೆ ನಮ್ಮ ಕುಟುಂಬವೆಲ್ಲ ಜಮಾಯಿಸಿತ್ತು. ನಡುಮನೆಯ ನಾಲ್ಕೂ ಗೋಡೆಗೆ ಸಮಾನಾಂತರವಾಗಿ ಎಲೆ ಹಾಕಿದ್ದರು. ಆಗಲೇ ಶ್ರೀಧರನಿಗೆ ಎಲ್ಲರ ಪರಿಚಯ ಮಾಡಿಕೊಟ್ಟೆ. ಅದೇನೂ ಸುಲಭದ ಕೆಲಸವಾಗಿರಲಿಲ್ಲ. ನಿಮ್ಮ ಮನೆಯಲ್ಲಿರುವವರು ಎಷ್ಟು ಜನ ಎಂದು ತಟ್ಟನೆ ಕೇಳಿದರೆ ನನಗೇ ಎಣಿಸದೆ ಉತ್ತರ ಹೇಳಲು ಶಕ್ಯವಿರಲಿಲ್ಲ. ಇನ್ನು ಹೊರಗಿನವರಿಗೇನು ತಿಳಿಯ ಬಲ್ಲದು ? ನಮ್ಮ ತಾಯಿ-ತಂದೆಯೇ ಹಿರಿಯರು ಮನೆಯಲ್ಲಿ. ಅವರಿಗೆ ನಾವು ಹನ್ನೊಂದು ಜನ ಮಕ್ಕಳು. ಇಬ್ಬರು ನಾನು ಹುಟ್ಟುವುದಕ್ಕಿಂತ ಮೊದಲೇ ತೀರಿಹೋಗಿದ್ದರಂತೆ. ಈಗ ಇರುವವರು ನಾವು ಒಂಬತ್ತು ಜನ. ಹಿರಿಯ ಅಣ್ಣ ಪಿ.ಡಬ್ಲ್ಯು.ಡಿ.ಯಲ್ಲಿ ಎಂಜಿನಿಯರು. ಅವನು ಇರುವುದು ಬೆಳಗಾವಿಯಲ್ಲಿ. ಎರಡನೆಯ ಅಣ್ಣ ವಕೀಲ, ಇಲ್ಲಿಯೇ ಶೀನು ಕಾಕಾನ ಜೊತೆ ಪ್ರ್ಯಾಕ್ಟೀಸು ಮಾಡುತ್ತಾನೆ. ಅವನ ಹೆಂಡತಿ ರೂಪಾ, ಹೆಸರಿಗೆ ತಕ್ಕಂತೆ ರೂಪವತಿ. ಮದುವೆಗೆ ಮೊದಲು ಏಳೆಂಟು ವರ್ಷಗಳ ಕಾಲ ನೃತ್ಯ-ಗಾಯನ ಕಲಿತಿದ್ದಳು. ಸಾಕಷ್ಟು ಕಾರ್ಯಕ್ರಮಗಳನ್ನು ಕೊಟ್ಟು ಆ ಕ್ಷೇತ್ರದಲ್ಲಿ ಹೆಸರೂ ಗಳಿಸಿದ್ದಳು. ಆದರೆ ಮದುವೆಯಾದ ಮೇಲೆ ಈ ಹಳ್ಳಿಯಲ್ಲಿ ಅವಳಿಗೆಂತಹ ಅವಕಾಶ ಸಿಕ್ಕೀತು ? ಅದರಲ್ಲಿಯೂ ನನ್ನ ತಂದೆಗಂತೂ ಇದೆಲ್ಲ ಸರಿಬೀಳುವುದಿಲ್ಲ. ತಮ್ಮಂತಹ 'ಪ್ರತಿಷ್ಠಿತ ಮನೆತನದ ಸೊಸೀ ಸ್ಟೇಜಮ್ಯಾಲೆ ಕುಣಿಯೂದಂದ್ರೇನು, ಛಿ, ಛಿ,' ಎನ್ನುತ್ತಾರೆ ಅವರು. ಅಲ್ಲದೆ ರೂಪಾ ಹೇಳಿದ್ದಳು ಒಮ್ಮೆ – ''ಮಾವನವರಿಗೆ ಅಷ್ಟಽ ಯಾಕ್ರೀ ಸುಮ್ಮಕ್ಕಾ, ನಿಮ್ಮ ಅಣ್ಣಗೂ ಪಸಂದಿಲ್ಲಾ ಅದೆಲ್ಲಾ, ದಿನವಂದಕ್ಕೂ ಮನ್ಯಾಗ ಸಿಟ್ಟು, ಧುಸುಮುಸು ಎಲ್ಲೀದು ಅಂತ ಬಿಟ್ಟಬಿಟ್ಟೆ ನೋಡ್ರಿ ಅದರ ಆಶಾ.'' ಬಹಳ ಹಿಂದಕ್ಕೆ ಹೇಳಿದ ಮಾತು, ಆಗ ಅವಳ ವಯಸ್ಸು ಇಪ್ಪತ್ತಾದರೂ ಇತ್ತೋ ಇಲ್ಲವೊ.

ನಾನು ಮೂರನೆಯವಳು. ನನ್ನ ಕೆಳಗಿನ ತಂಗಿ ಸುಂದರಾ ಸ್ವಲ್ಪ ಮಂದಬುದ್ಧಿಯವಳು. ಅವಳು ಸಣ್ಣವಳಿದ್ದಾಗ ಬಹಳ ಜ್ವರ ಬಂದಿದ್ದವಂತೆ ಅವಳಿಗೆ. 'ಆಗ ನಮ್ಮ ಕುಲದೇವತೆ ತುಳಜಾಭವಾನಿಗೆ ಹರಕೆ ಹೇಳಿಕೊಂಡಾಗ ಜ್ವರವಿಳಿದವು, ಆದರೆ ಏನೋ ಕಾರಣವಶಾತ್ ಹರಕೆಯನ್ನು ಬೇಗ ಮುಟ್ಟಿಸಲಾಗಲಿಲ್ಲ, ಆಕೆಯ ಶಾಪದಿಂದಲೇ ಹೀಗಾದಳು' ಎನ್ನುತ್ತಾಳೆ ಅವ್ವ. ಅವಳ ಸಿಟ್ಟಿಳಿಸುವುದಕ್ಕಾಗಿ ಅನಂತರ ಪ್ರತಿವರ್ಷವೂ ತುಳಜಾಭವಾನಿಯ ದರ್ಶನಕ್ಕೆ ಹೋಗಿ ಕಾಣಿಕೆಯಿತ್ತು ಬರುತ್ತಾರೆ ಅವ್ವ-ಅಪ್ಪ. ಇಂದಿಲ್ಲ, ನಾಳೆ ಉಶ್ಶಾಪ ದೊರೆತೀತೆಂದು ದಾರಿ ಕಾಯುತ್ತಿದ್ದಾರೆ. ಪಾಪ, ಆ ತುಳಜಾಭವಾನಿಗೆ ಬೇರೆ ಉದ್ಯೋಗವೇ ಇರಲಿಕ್ಕಿಲ್ಲವೇ, ಇವರ ಹರಕೆ ಕಾಣಿಕೆಗಳಿಗಾಗಿಯೇ ದಾರಿ ಕಾಯುತ್ತ ಕುಳಿತಿರಬಹುದೇ ಅವಳು ? ಕಾಣಿಕೆ ಸಿಕ್ಕರೇ ಕಲ್ಯಾಣ ಎನ್ನಲು ಅವಳೇನು ಸರಕಾರಿ ಅಧಿಕಾರಿಯೇ ?

ಸುಂದರಾನ ಕೆಳಗಿನವಳು ಮಾಲತಿ. ಅವಳ ಮದುವೆಯಾಗಿ ಆಗಲೇ ಎರಡು ಮಕ್ಕಳ ತಾಯಿಯಾಗಿದ್ದಾಳೆ, ತನ್ನ ಅತ್ತೆಯ ಮನೆಯಲ್ಲಿಯೇ ಇದ್ದಾಳೆ. ಅವಳ ಮದುವೆಯಲ್ಲಾದ ಏನೋ ಒಂದು ಜಗಳದ ಕಾರಣ ಅವಳ ಪತಿಯ ಮನೆಯವರು ನಮ್ಮ ಕುಟುಂಬದ ಸಂಪರ್ಕವನ್ನೇ ಇಟ್ಟುಕೊಂಡಿಲ್ಲ. ಅವಳನ್ನು ಕಳಿಸುವುದಿಲ್ಲ ತವರಿಗೆ. ತನ್ನ ಮನೆಯಲ್ಲಿ ಸುಖವಾಗಿಯೇ ಇದ್ದಾಳೆ ಎಂದು ಎಲ್ಲರೂ ಹೇಳುತ್ತಾರೆ. ಆದರೆ ನಿಜಸ್ಥಿತಿ ಹೇಗಿದೆಯೋ... 'ಏನಿದ್ದರೂ ಫಾಯರ್ ಬ್ರ್ಯಾಂಡ್ ಅಕ್ಕನ್ನ ಮಾತ್ರ ಕಳಿಸಕೂಡದು ಅಲ್ಲಿ' ಎಂದು ಅವಳ ಕಟ್ಟಾಜ್ಞೆ. ಅಂತೆಯೇ ನಾನೂ ಹೋಗಿ ನೋಡಿಲ್ಲ.

ಇನ್ನುಳಿದವರು ಇಬ್ಬರು ತಮ್ಮಂದಿರು ಮತ್ತು ಎಲ್ಲರಿಗಿಂತ ಚಿಕ್ಕವರಾದ ಇಬ್ಬರು ತಂಗಿಯರು. ತಮ್ಮಂದಿರಲ್ಲಿ ಹಿರಿಯವನು ಸಾಫ್ಟ್‌ವೇರ್ ಎಂಜಿನಿಯರಿಂಗ್ ಶಿಕ್ಷಣವನ್ನು ಮುಗಿಸಿ ಅಮೆರಿಕೆಗೆ ಹೊರಟಿದ್ದಾನೆ. ನಮ್ಮ ಊರಿನಿಂದ ಅಮೆರಿಕೆಗೆ ಇದುವರೆಗೆ ಯಾರೂ ಹೋಗಿರಲಿಲ್ಲ. ಇವನೇ ಮೊದಲಿಗನು. ಇಡೀ ಊರಿಗೆ ಊರೆ ಹೆಮ್ಮೆಯಿಂದ ಬೀಗುತ್ತಿದೆಯಂತೆ. ಉಳಿದ ಮೂವರೂ ಇನ್ನೂ ಶಾಲೆ-ಕಾಲೇಜುಗಳಲ್ಲಿದ್ದಾರೆ. ನಮ್ಮ ಅವ್ವ ಹೇಳುವಂತೆ ಎಲ್ಲಕ್ಕಿಂತ ಸಣ್ಣವಳು ಪುಟ್ಟಿ ನನ್ನ ಹಾಗೆ ಯಡವಟ್ಟಂತೆ. ಈಗಲೇ ಹೇಳುತ್ತಿದ್ದಾಳಂತೆ – ''ಎಸ್.ಎಸ್.ಸಿ. ಆದ ಕೂಡ್ಲೇ ನಾ ಮುಂಬಯಿಗೆ ಹೋಗೋ ಆಕೀ, ಸುಮ್ಮಕ್ಕನ ಹಾಂಗ ಭಾಳ ಕಲತು ನೌಕರಿ ಮಾಡೂದದ ನನಗ'' ಎಂದು.

ಇನ್ನು ಶೀನು ಕಾಕಾ-ಪದ್ಮಾ ಕಾಕು ಅವರ ಏಳು ಮಕ್ಕಳು. ಸಂಧ್ಯಾನೇ ಅವರಲ್ಲಿ ಹಿರಿಯಳು. ಆಶಾ

## ಟಿಪ್ಸ್ ಕೊಡದಿದ್ದುದರ ಫಲ

ಓರ್ವ ಪ್ರವಾಸಿಗ ಲಂಡನ್‌ನಲ್ಲಿ 'ದಿ ಮೌಸ್ ಟ್ರ್ಯಾಪ್' ಎಂಬ 'ಮಿಸ್ಟರಿ ಥ್ರಿಲ್ಲರ್' ಪಿಕ್ಚರನ್ನು ನೋಡಲು ತಾನು ಇಳಿದುಕೊಂಡಿದ್ದ ಹೊಟೇಲಿನಿಂದ ಟ್ಯಾಕ್ಸಿ ಮಾಡಿಕೊಂಡು ಹೋದ.

ಟಾಕೀಸ್ ಬಂದಾಗ ಅಲ್ಲಿಳಿದು ಮೀಟರನ್ನು ಇಣುಕಿ ನೋಡಿ ಅದರಲ್ಲೆಷ್ಟಿತ್ತೋ ಅಷ್ಟೇ ಫೇರ್‌ನ್ನು ಆ ಟ್ಯಾಕ್ಸಿ ಡ್ರೈವರ್‌ಗೆ ನೀಡಿದ. ರೂಢಿ ಪದ್ಧತಿಯಂತೆ ಟಿಪ್ಸ್ ಸೇರಿಸಿ ಫೇರ್ ಕೊಡಬೇಕಾಗಿತ್ತು. ಆದರೆ ಆತ ಹಾಗೆ ಮಾಡಲಿಲ್ಲ.

ಆಗ ಆ ಟ್ಯಾಕ್ಸೀ ಡ್ರೈವರ್, ಟ್ಯಾಕ್ಸಿಯನ್ನು ಸ್ಟಾರ್ಟ್ ಮಾಡುತ್ತಾ, ಕೋಪದಿಂದ, ''ಪಿಕ್ಚರ್‌ನಲ್ಲಿ ಕೊಂದದ್ದು ಪತ್ತೆದಾರಿಯೇ....'' ಎಂದು ಜೋರಾಗಿ ಕೂಗಿ ಹೇಳಿ, ಅಲ್ಲಿಂದ ಹೊರಟುಹೋದ !

ಎಸ್. ವಿಶ್ವನಾಥ
ಕೆ. ೨೪೬, ಬಸ್‌ಸ್ಟಾಪ್ ಎದುರು, ಕಲ್ಲಹಳ್ಳಿ, ಮಂಡ್ಯ - ೫೭೧೪೦೧

ಕಾಕು-ರಾಘು ಕಾಕಾ ಅವರಿಗೆ ಇಬ್ಬರೇ ಮಕ್ಕಳು. ಅಲ್ಲದೆ ಅತ್ಯಾನ ಇಬ್ಬರು ಮಕ್ಕಳು. ಮದುವೆಯಾದ ನಾಲ್ಕು ವರ್ಷಗಳಲ್ಲಿಯೇ ವಿಧವೆಯಾದ ಅತ್ಯಾ ಮಕ್ಕಳೊಂದಿಗೆ ತವರು ಮನೆಗೆ ಬಂದು ಸೇರಿದ್ದಳು. ಅತ್ಯಾ, ಆಶಾ ಕಾಕು ಮತ್ತು ನಾನು ಹೆಚ್ಚು ಕಡಿಮೆ ಒಂದೇ ವಯಸ್ಸಿನವರು. ಅತ್ಯಾ ಆಗಲೇ ಮುಪ್ಪಿನ ಮುದುಕಿಯಂತೆ ಜೀವಿಸುತ್ತಿದ್ದಳು, ಪುರಾಣ-ಪುಣ್ಯಕಥೆಗಳನ್ನೋದುತ್ತ. ನನಗೆ ಇನ್ನೂ ನೆನಪಿದೆ, ನಾನು ಶಾಲೆಯಲ್ಲಿದ್ದಾಗ ನಾನು ಓದಲೆಂದು ತಂದ ಕತೆ-ಕಾದಂಬರಿಗಳನ್ನು ಕದ್ದು-ಕದ್ದು ಓದುತ್ತಿದ್ದಳು, ಪಾಪ !

ಇಷ್ಟೆಲ್ಲರ ಪರಿಚಯವಾಗುವ ಹೊತ್ತಿಗೆ ಊಟವೂ ಮುಗಿದಿತ್ತು, ಶ್ರೀಧರನೂ ದಣಿದಿದ್ದ. ನಾನು ಪರಿಚಯ ಮಾಡಿ ಮುಗಿಸಿದೊಡನೆ ಹೇಳಿದ – ''ಸ್ವಲ್ಪ ತಡೆ, ಇಷ್ಟೆಲ್ಲ ಹೆಸರುಗಳ್ನ ನೆನಪಿಟ್ಟುಕೊಳ್ಳೋದು ಕಷ್ಟ, ಬರೆದುಕೊಂಡುಬಿಡ್ತೇನೆ.''

ಅವನ ಮಾತು ಕೇಳಿ ಎಲ್ಲರೂ ಗೊಳ್ಳನೆ ನಕ್ಕರು. ರಾಘು ಕಾಕಾ ಹೇಳಿದ – ''ಏನೂ ಬ್ಯಾಡ, ಮ್ಯಾಲಿಂದ ಮ್ಯಾಲೆ ನಮ್ಮ ಊರಿಗೆ ಬರ್ರಿ, ತಾನಽ ನೆನಪುಳೀತಾವ.''

ಊಟವಾದ ಮೇಲೆ ಅಡಿಗೆ ಮನೆಯ ಕೆಲಸ ಮುಗಿಯುವುದರಲ್ಲಿಯೇ ಹತ್ತೂವರೆಯಾಗಿತ್ತು. ಸಣ್ಣವರೆಲ್ಲ ಮಲಗಿದ್ದರು. ಅಡಿಗೆ ಮನೆಯ ಫ್ಯಾಕ್ಟರಿ ಮತ್ತೆ ಪ್ರಾರಂಭವಾಯಿತು. ಎಲ್ಲರೂ ಕೂಡಿ ಕರ್ಚಿಕಾಯಿ ಮಾಡುವ ಕಾರ್ಯಕ್ರಮವಿತ್ತು. ನಾನು, ಸಂಧ್ಯಾ ಇಬ್ಬರೂ ಸಹಾಯ ಮಾಡಲು ಕುಳಿತಿದ್ದೆವು. ಶ್ರೀಧರನಿಗೆ ನಮ್ಮ ಮನೆಯ ಗದ್ದಲಕ್ಕೆ ತಲೆಶೂಲೆಯೆದ್ದಿರಬೇಕು, ಮೇಲೆ ಕೋಣೆಯಲ್ಲಿ ಓದುತ್ತ ಕುಳಿತಿದ್ದ. ಹೊರಗೆ ರಾಘು ಕಾಕಾನ ಗೆಳೆಯರ ಬಳಗದ ಇಸ್ಪೀಟಾಟ ನಡೆದಿತ್ತು. ಅವಲಕ್ಕಿಯ ತಾಟುಗಳು ಹೊರಗೆ ಹೋಗಿದ್ದವು. ಚಹಾ ತಯಾರಾಗುತ್ತಲಿತ್ತು.

ಸಂಧ್ಯಾನನ್ನು ಎಲ್ಲರೂ ಚೇಷ್ಟೆ ಮಾಡಿ ಕಾಡುತ್ತಿದ್ದರು. ಇನ್ನೂ ಈಗ ಬಿ.ಎ.ಯ ಮೊದಲನೆಯ ವರ್ಷವನ್ನು ಮುಗಿಸಿದ್ದಾಳೆ ಸಂಧ್ಯಾ. ನಾನವಳನ್ನು ಕೇಳಿದೆ – ''ಇಷ್ಟ ಲಗೂ ಯಾಕ ಲಗ್ನಕ್ಕೆ ತಯಾರಾದೇ ? ಬಿ.ಎ. ಆದರೂ ಮುಗಸಬಾರದಿತ್ತs?''

''ಯಾವಾಗರs ಲಗ್ನಾ ಮಾಡಿಕೊಳ್ಳೂದs ಅಲ್ಲಾ...ಬಿ.ಎ. ಆದ ಮ್ಯಾಲರs ಏನು ಬಿಡತsದೇನು ?'' ಅವಳು ನನ್ನ ಅಜ್ಜಿಯಂತೆ ಮಾತಾಡಿದಳು.

''ಖರೇ ಅದ ಆಕೀ ಅನ್ನೂದು, ನೋಡು'' ಅತ್ಯಾ ಹೇಳಿದಳು – ''ಎಷ್ಟು ತಿಳಿವಳಿಕೆ ಅದ ಆಕೀಗೆ.'' ನಿನ್ನ ಹಾಗೆ ಎಡವಟ್ಟಲ್ಲ ಎಂದು ಅದರರ್ಥ.

''ಛೋಲೋ ಸ್ಥಳಾ, ತಾವs ಕೇಳಿಬಂದರು. ಆಕೀನೂ ಹೂಂ ಅಂದಾಳ, ನೀ ಇನ್ನ ಇಲ್ಲದ್ದs ಏನರs ಆಕೀ ತಲ್ಯಾಗ ಹಾಕಬ್ಯಾಡಾ'' ಅವ್ವ ಹೇಳಿದಳು.

ನಾನೂ ಸುಮ್ಮನಾಗಲಿಲ್ಲ– ''ಇಲ್ಲದ್ದs ಏನಲ್ಲಾ, ಯಾವಾಗಲೂ ಇದ್ದದ್ದs ಇದು. ಆಕೀ ಕಲಿಯೂದು ಮುಗಿಯೂ ತನಕಾ ತಡೀಬಾರದೇನು ? ಇನ್ನು ಹದಿನೆಂಟಾಗಿಲ್ಲ ಆಕೀಗೆ ?''

''ಮುಂದಿನ ತಿಂಗಳ ಆಗತಾsವ ಹದಿನೆಂಟು ಪೂರಾ, ಅಪ್ಪ ವಕೀಲ ಇದ್ದಾನ, ಅಂವಾ ಏನು ಹಾಂಗಾ ಕಾಯದೇದ ವಿರುದ್ಧ ಏನೂ ಮಾಡೂದುಲ್ಲಾ, ಮ್ಯಾಲಾಗಿ ಆಕೀನs ಹೂಂ ಅಂದಾಳ...''

''ಹೌದೇನs ಸಂಧ್ಯಾ ? ನಿನಗ ಬಿ.ಎ. ಮುಗಸಬೇಕು ಅಂತ ಅನಸಲಿಲ್ಲಾ ?''

''ಅನಸತಿತ್ತು, ಖರೇ. ಆದರೇನು, ಬಿ.ಎ. ಆದರೂ ಏನು ಅಡಿಗೀ ಮನೀ ತಪ್ಪದ್ದಲ್ಲs ನಮಗ.''

ಮತ್ತೆ ಅದೇ ಮಾತು... ನನ್ನಕಿಂತ ಹತ್ತು ವರ್ಷ ಸಣ್ಣವಳ ಬಾಯಿಂದ. ನಾನು ತಲೆ ಗಟ್ಟಿ ಹಿಡಿದುಕೊಂಡು ಅಲ್ಲಿಂದ ಎದ್ದುಹೋದೆ.

ರಾತ್ರಿ ಒಂದು ಗಂಟೆಯವರೆಗೆ ಅಡಿಗೆ ಮನೆಯಲ್ಲಿ ಗಲಾಟೆ ನಡೆದೇ ಇತ್ತು.

ಮರುದಿನ ಬೆಳಗಿನಲ್ಲಿ ಎದ್ದು ಕೆಳಗಿಳಿದು ಬಂದಾಗ ಅವ್ವ ಒದ್ದೆಯ ಪಂಚೆಯುಟ್ಟು ಹಿತ್ತಲದಲ್ಲಿಯ ಬಾವಿಯಿಂದ ಮಡಿನೀರು ತುಂಬುತ್ತಿದ್ದಳು. ಯಾವಾಗಲೂ ಮಡಿನೀರು ತುಂಬುವುದು ಅತ್ಯಾನ ಕೆಲಸ, ಅವ್ವ ಏಕೆ ನಿಂತಿದ್ದಾಳೆ ಇವತ್ತು ? ಅದೂ ಒದ್ದೆಯುಟ್ಟು ? ಕೇಳಿದೆ ಅವ್ವನನ್ನು. ಅವ್ವ ಹೇಳಿದಳು – ''ಎಲ್ಲಾ ಇದಿ ವ್ಯಾಳ್ಯಾ ನೋಡೇ ಹಿಡೀತಾವ ನೋಡು. ಇವತ್ತs ಕಡಿಗ್ಯಾಗಬೇಕs ಆಕೀ ? ನಸೀಬಾ, ಎಲ್ಲಾ ಫರಾಳಾ ಮಾಡಿ ಮುಗಿಸಿಂದ ಆದಳು, ಇಲ್ಲಾಂದರ ಅದೂ ಎಲ್ಲಾ ನಮ ಮೈಮ್ಯಾಲೇ ಬೀಳತಿತ್ತು''. ''ಆದರ ಒದ್ದೀ ಯಾಕ ಉಟಗೊಂಡೀ ನೀನು ? ಅತ್ಯಾನ ಮಡಿಸೀರಿ ಒಣಗೇದಲ್ಲಾ ಕೋಲಮ್ಯಾಲೆ ?''

''ಹೋಗs ಕತ್ತೆ, ಮುಂಜಾನೆದ್ದು ಅಭದ್ರ ಮಾತಾಡಬ್ಯಾಡಾ, ಆಕೀ ಕೆಂಪು ಸೀರಿ ನಾ ಏನು ಉಟಗೋತೀನಿ ?''

ಆ ತುಂಡು ಪಂಚೆಯ ಮರೆಯಲ್ಲಿ ಕಾಣುತ್ತಿದ್ದ ಅವ್ವನ ಒಣಗಿದ ದೇಹವನ್ನು ನೋಡುತ್ತ ಅಲ್ಲಿಯೇ ಒಂದು ಕ್ಷಣ ನಿಂತೆ. ಏನು ಅವಸ್ಥೆಯಾಗಿದೆ ಅದರದು ! ಕೈ-ಕಾಲುಗಳು ಒಣಗಿ ಕಟ್ಟಿಗೆಯಂತಾಗಿವೆ. ಎಲುವುಗಳ ಮೇಲೆ ನಿರಿಗೆಗಟ್ಟಿದ ತೊಗಲು ಜೋತಾಡುತ್ತಿದೆ. ಹೊಟ್ಟೆಯ ಮೇಲಿನ ಚರ್ಮದ ಜೋಳಿಗೆಗಳು, ಉದ್ದಕ್ಕೆ ಜೋತುಬಿದ್ದ ಮೊಲೆಗಳು ಹನ್ನೊಂದು ಬಾಣಂತಿತನದ ಇತಿಹಾಸವನ್ನು ಸಾರಿ ಹೇಳುತ್ತಿದ್ದವು. ಅಡಿಗೆ ಮನೆಯ ಹೊಗೆಯುಂಡು ನೀರಾಡುತ್ತಿದ್ದ ಕಣ್ಣುಗಳು, ಕೆಂಪಗಿನ ಮೈಬಣ್ಣದ ಮೇಲೆ ಸುಟ್ಟ ಕಲೆಗಳಂತೆ ಮೈ-ಮುಖಗಳ ಮೇಲೆ ಎದ್ದು ಕಾಣುವ ಕಪ್ಪು ಕಲೆಗಳೂ... ಅವ್ವನಿಗೆ ತಾನು ಹೇಗಾಗಿದ್ದೇನೆಂಬುದರ ಅರಿವಿದೆಯೇ ? ಅಲ್ಲಿಯೇ ಜಿಗಿಜಿಗಿದು ಹೂ ಹರಿಯುತ್ತಿದ್ದ ಪುಟ್ಟಿಯಂತೆ ದುಂಡುಗಾಲಲ್ಲಿ ಗೆಜ್ಜೆ ಕಟ್ಟಿಕೊಂಡು, ಕಣ್ಣುಗಳಲ್ಲಿ ಕನಸುಗಳನ್ನು ತುಂಬಿಕೊಂಡು ಈ ಮನೆಯ ಸೇರಿರಬೇಕಲ್ಲವೇ ಅವ್ವ ?

ಒಳಗೆ ಬಂದೆ. ಅಲ್ಲಿಯೇ ಅಡಿಗೆಮನೆಯಲ್ಲಿ ಮಣೆಯ ಮೇಲೆ ಕುಳಿತುಕೊಂಡು ನನ್ನ ತಂದೆ ಚಹಾ ಕುಡಿಯುತ್ತಿದ್ದರು. ಅವರೂ ಮೈಯಲ್ಲಿ ಕೇವಲ ಬನಿಯನ್ ತೊಟ್ಟುಕೊಂಡು ಹೆಗಲಮೇಲೆ ನೀಲಿ ಬಣ್ಣದ ಟಾವೆಲ್ಲು ಹಾಕಿಕೊಂಡು ಕುಳಿತಿದ್ದರು. ಸಾಕಷ್ಟು ಬೊಜ್ಜು ಬೆಳೆದಿತ್ತು ನಮ್ಮ ಅಪ್ಪನಿಗೆ ಇತ್ತೀಚೆಗೆ. ಅರವತ್ತರ ನಂತರ ಅವರು ಹೊಲದ ಧೇಖರೇಖಿಗೆ ಸ್ವತಃ ಹೋಗುತ್ತಿರಲಿಲ್ಲ. ಇತ್ತೀಚೆಗೆ ಅವರ ತೂಕವೂ ಹೆಚ್ಚಾಗಿತ್ತು, ನಿನ್ನೆಯೇ ಹೇಳುತ್ತಿದ್ದರು –''ವಯಸ್ಸಿನ ಜೋಡಿ ಸುರೂ ಆಗೂ ತಕರಾರೆಲ್ಲಾ ಸುರು ಆಗ್ಯಾವ ನೋಡು, ಡಯಾಬಿಟೀಸು, ಬಿ.ಪಿ. ಎಲ್ಲಾ...''

ನಾನೂ ಚೇಷ್ಟೆ ಮಾಡುತ್ತ ಹೇಳಿದ್ದೆ. ''ಅಪ್ಪಾ, ಹಾಂಗಾದರ ಇನ್ನರs ಅವ್ವಗs ಸಂಡಿಗೀ ಕರೀ, ಹಪ್ಪಳಾ ಕರಿ ಅಂತ ತ್ರಾಸ ಕೊಡೂದು ಬಿಡ್ರಿ.''

''ನಾ ಹೇಳೂದs ಇಲ್ಲಾ, ಆಕೀ ತಾನs ಮಾಡತಾಳೇನವಾ, ಇನ್ನ ಮಾಡಿದ ಮ್ಯಾಲೆ ತಿನಬ್ಯಾಡ ಅಂದರ ಹ್ಯಾಂಗ ?''

ಆ ದಿನ ಹೇಗೆ ಕಳೆಯಿತೋ ಗೊತ್ತಿಲ್ಲ. ಬೀಗರ ಪಾರ್ಟಿ ಬರುವುದೇ ಹನ್ನೆರಡು ಗಂಟೆಯಾಯಿತು. ಆಮೇಲೆ ಅವರ ಚಹಾ-ಫರಾಳ ಮುಗಿದ ನಂತರ ನಿಶ್ಚಿತಾರ್ಥದ ಕಾರ್ಯಕ್ರಮ ಸುರುವಾಯಿತು. ಆ ಕಡೆಯ ಹಿರಿಯರು, ಈ ಕಡೆಯ ಹಿರಿಯರು ಕೂಡಿ ಕೊಡಕೊಳ್ಳುವ ಯಾದಿಯ ಬಗ್ಗೆ ಎರಡು ಗಂಟೆ ಹಿಗ್ಗಾಮುಗ್ಗಾ ಎಳೆದಾಡಿದರು. ನನಗೆ ನನ್ನ ತಂಗಿ ಸಂಧ್ಯಾಳ ಕೈ-ಕಾಲುಗಳನ್ನೇ ಹಿಡಿದು ಜಗ್ಗಾಡುತ್ತಿದ್ದಾರೆ ಇವರೆಲ್ಲ ಎನಿಸುತ್ತಿತ್ತು. ಅವಳಿಗೆಷ್ಟು ನೋವಾಗುತ್ತಿರಬೇಕು ಇದನ್ನೆಲ್ಲ ಕೇಳಿ ಎಂದುಕೊಂಡು ಒಳಗೆ ಕೋಣೆಯಲ್ಲಿ ಗೆಳತಿಯರೊಡನೆ ಕುಳಿತಿದ್ದ ಸಂಧ್ಯಾಳ ಕಡೆಗೆ ನೋಡಿದೆ. ಅವಳು ಹೊರಗೆ ನಡೆದದ್ದೆಲ್ಲ ತನಗೇನೂ ಸಂಬಂಧವೇ ಇಲ್ಲವೆನ್ನುವಂತೆ ಗೆಳತಿಯರೊಡನೆ ನಗುತ್ತ-ಕೆಲೆಯುತ್ತ ತನ್ನದೇ ಬೇರೆ ಕನಸಿನ ಜಗತ್ತಿನಲ್ಲಿದ್ದಳು.

ನಂತರ ಸುಮಾರು ನಾನೂರು ಜನರ ಊಟವಾಯಿತು. ನಾನು ಪದ್ಮಾ ಕಾಕುನನ್ನು ಕೇಳಿದೆ – ''ಕಾಕೂ, ಇಷ್ಟು ಎಲ್ಲಾ ಮಂದಿ ಕೂಡ್ಯಾರ, ಹುಡಗಾ - ಹುಡುಗೀನೂ ತಯಾರಿದ್ದಾರ, ಪುರೋಹಿತರೂ ಇದ್ದಾರ, ಸುಮ್ಮನs ಅಕ್ಕೀಕಾಳು ಹಾಕಿಬಿಟ್ಟಿದ್ದರ ಮದುವೀನs ಮುಗದುಹೋಗತಿತ್ತಲ್ಲಾ ?''

''ಆಗಿ ಹೋತವಾ, ಲಗ್ನಾ ಅಂದರs ಇಷ್ಟು ಸುಸೂತ್ರ ಆಗತsದs ? ಈಗೆಲ್ಲ ಹೀಂಗs ನೋಡು, ನಿಶ್ಚಾಕ್ಕ ಇಷ್ಟು ಹೂಂ ಅಂತ ಖರ್ಚು, ಮ್ಯಾಲೆ ಲಗ್ನಕ್ಕೆ ಆತೋನಾತು ಖರ್ಚು... ಹೆಣ್ಣಿನ ಕಡೇ ಅವರದು ದಿವಾಳೀ ತಗದು ಹೋಗತsದ.''

ಅಷ್ಟರಲ್ಲೇ ಬೀಗರ ಕಡೆಯವಳೊಬ್ಬಳು ನಡುವೆ ದನಿ ಸೇರಿಸಿದಳು – ''ಮಾಡsಬೇಕರೆವಾ ಮತ್ತ, ಮುಂದ ಮಗಳು ಆರಾಮಿರಬೇಕಂದರ...''

ಅಂತೂ ಅವರು ಹೇಳಿದ್ದಕ್ಕೆಲ್ಲ ಕೌಲೆತ್ತಿನಂತೆ ಗೋಣು ಹಾಕಿ ಅವ್ವ-ಅಪ್ಪ, ಕಾಕಾ-ಕಾಕೂ ಬೀಗರನ್ನು ಬೀಳ್ಕೊಟ್ಟರು.

ಮರುದಿನ ನಾನು-ಶ್ರೀಧರ, ಸಣ್ಣ ತಂಗಿಯರಿಬ್ಬರು ವಿಜಾಪುರವನ್ನು ನೋಡಲು ಹೊರಟೆವು. ಅವ್ವನನ್ನು ಕರೆದೆ – ''ಅವ್ವಾ, ನೀನೂ ನಡೀ ಅಲ್ಲಾ, ರಾತ್ರಿ ತಿರಗಿ ಬಂದ ಬಿಡೂಣಂತ, ಎಲ್ಲೆಲ್ಲೂ ಹೋಗಿರೂದೇ ಇಲ್ಲಾ ನೀನು, ಒಂದ ದಿನಾ ಅರಾಮ, ನಿನಗೂ ಸ್ವಲ್ಪ ಬದ್ಲೀ ಆಗತsದ.'' ''ಎಲ್ಲೀದವ್ವಾ ನಮ್ಮವ್ವಾ, ನೀವು ಹೋಗಿಬರ್ರಿ, ನನ್ನ ಕಡಿಂದ ಅಡ್ಯಾಡಲಿಕ್ಕೆ ಆಗೂದುಲ್ಲಾ ನೋಡೀಗ.''

''ಏನೂ ಅಡ್ಯಾಡೂದು ಬೇಕಾಗಿಲ್ಲಾ, ಕಾರು ಮಾಡೀವಿ, ನಿನಗೆ ಏನೂ ತ್ರಾಸು ಆಗೂದುಲ್ಲಾ ನಡೀ..''

''ಛೇ, ಬ್ಯಾಡವ್ವಾ, ನಿನ್ನೀದೆಲ್ಲಾ ಸಾಮಾನು ಹಾಂಗs ಬಿದ್ದಾವ.'' ನನ್ನ ಹತ್ತಿರ ಬಂದು ಪಿಸು ಮಾತಿನಲ್ಲಿ ಹೇಳಿದಳು – ''ನಾ ಒಂದ ಕ್ಷಣಾ ಹೊರಗ ಹೋದರಾತು ನೋಡು, ಅಡಕಲ ಖೋಲೀ ಕೀಲಿಕೈ ಸಿಕ್ಕಿತಂದ್ರ, ಎಲ್ಲಾ ಸಾಮಾನು ಹಿತ್ತಲ ಬಾಗಲಲೇ ನಿನ್ನ ಕಾಕೂನ ತವರಮನೆ ಸೇರತಾವ.'' ಪದ್ಮಾ ಕಾಕೂನನ್ನುದ್ದೇಶಿಸಿ ಇತ್ತು ಈ ಮಾತು. ಅವಳ ತವರುಮನೆ ಅದೇ ಊರು. ಅವರ ಪರಿಸ್ಥಿತಿ ಅಷ್ಟು ಸರಿಯಾಗಿರಲಿಲ್ಲ.

''ಹೀಂಗ ನೀ ಅಡಕಲ ಖೋಲಿ ಕಾಯಕೋತ ಕೂತರ ಯಾವಾಗಲೂ ಮನ್ಯಾಗs ಕೂಡಬೇಕಾಗತsದ.''

''ಸಾವಕಾಶs ನಮ್ಮವ್ವಾ, ಎಲ್ಲೆರs ಆಕೀ ಕಿವೀಗೆ ಬಿತ್ತಂದರ ರಣಖತ್ರಾ ಮಾಡಾತಾsಳ. ನೀವು ಹೋಗಿಬರ್ರಿ, ನನಗೆ ಮನೀ ಕೆಲಸ ರಗsಡ ಬಿದ್ದsದ. ಬೆಳಗಾದರ ವಸಂತಾ ಪರದೇಶಕ್ಕ ಹೋಗಾಂವಾ. ಅಂವಗ ಒಯ್ಯಲಿಕ್ಕೆ ಒಂದಿಷ್ಟು ಏನರs ಮಾಡಿಡಬೇಕು ಇನ್ನೂ...''

ಈ ಕಾರಖಾನೆಯ ಯಂತ್ರಗಳಿಗೆ ಪುರುಸತ್ತೇ ಇಲ್ಲ. ಒಂದು ಕೆಲಸ ಮುಗಿಯುವುದರಲ್ಲಿಯೇ ಇನ್ನೊಂದು ಕೆಲಸ ಬಂದೇ ಇರುತ್ತದೆ, ಯಂತ್ರದ ಗಾಲಿಗಳು ತಿರುಗುತ್ತಲೇ ಇರುತ್ತವೆ ಹನ್ನೆರಡು ತಿಂಗಳೂ...

ನಮ್ಮ ಊರಿನಲ್ಲಿ ಎಲ್ಲರನ್ನೂ ಬೀಳ್ಕೊಂಡು ಬೆಂಗಳೂರಿನಲ್ಲಿ ಬಂದಿಳಿದೆವು. ಶ್ರೀಧರನ ಊರು. ಅವನ ತಂದೆ, ತಾಯಿ, ಒಬ್ಬ ತಂಗಿ ಇದ್ದಾರೆ. ಕಳೆದ ಮೂವತ್ತು ವರ್ಷಗಳಿಂದ ಅಲ್ಲಿಯೇ ಇದ್ದಾರೆ. ಈಗ ಜಯನಗರದಲ್ಲಿ ಒಂದು ಪುಟ್ಟ ಬಂಗಲೆಯನ್ನು ಕಟ್ಟಿಸಿಕೊಂಡು ನಿವೃತ್ತ ಜೀವನ ಸಾಗಿಸುತ್ತಿದ್ದಾರೆ. ಮೂವರೂ ನಮ್ಮನ್ನೆದುರುಗೊಳ್ಳಲು ಸ್ಟೇಷನ್ನಿಗೆ ಬಂದಿದ್ದರು. ನಮ್ಮ ಮದುವೆ ಯಾದ ಮೇಲೆ ನಾವಿಬ್ಬರೂ ಕೂಡಿ ಬೆಂಗಳೂರಿಗೆ ಬಂದದ್ದು ಇದೇ ಮೊದಲ ಸಲ. ಈಗ ಮೂರು ನಾಲ್ಕು ತಿಂಗಳ ಹಿಂದೆ ಅವರೆಲ್ಲ ಮುಂಬಯಿಗೆ ಬಂದಿದ್ದರು. ಯಾವುದೋ ಮದುವೆಗಾಗಿ. ಆಗ ನಮ್ಮೆಲ್ಲರ ಭೇಟಿಯಾಗಿತ್ತು.

ಸ್ಟೇಷನ್‌ನಿಂದ ಹೊರಟು ಅವರ ಮನೆ ಮುಟ್ಟಿದಾಗ ಏಳೂವರೆ ಗಂಟೆಯಾಗಿರಬೇಕಷ್ಟೇ. ಮನೆಯನ್ನು ಪ್ರವೇಶಿಸಿದೊಡನೆ ಅತ್ತೆ ಹೇಳಿದರು – ''ಕೈಕಾಲು ಮುಖ ತೊಳೆದು ಬನ್ನಿ. ತಿಂಡಿ ಮಾಡಿಟ್ಟಿದ್ದೇನೆ. ತಿಂಡಿ-ಕಾಫಿ ಆದ ಮೇಲೆ ನಿಧಾನವಾಗಿ ಸ್ನಾನ ಮಾಡಿ.''

''ಅಮ್ಮಾ ನೀವು ಆರು ಗಂಟೆಗಿಂತ ಮೊದಲೇ ಮನೀ ಬಿಟ್ಟಿರಬೇಕು. ಅಷ್ಟರಾಗs ತಿಂಡಿ ಮಾಡಿಟ್ಟು ಬಂದಿದ್ದಿರಾ ?'' ನಾನು ಆಶ್ಚರ್ಯದಿಂದ ಕೇಳಿದೆ.

''ಹೌದಮ್ಮಾ, ಶ್ರೀಧರನ ತಂದೆಗೆ ಬೆಳಿಗ್ಗೆ ಬೇಗ ತಿಂಡಿ ತಿಂದು ಅಭ್ಯಾಸ, ಅದಕ್ಕೇ ಇಡ್ಲಿ ಚಟ್ನಿ ಮಾಡಿಬಿಟ್ಟೆ ಸ್ವಲ್ಪ ಬೇಗ ಎದ್ದು. ಶ್ರೀಧರನಿಗೆ ಇಡ್ಲಿ ಜೊತೆ ಸಾಂಬಾರ್ ಇಷ್ಟಾ ಅಲ್ಲವೇ ? ಅದಕ್ಕೆ ಸ್ವಲ್ಪ ಸಾಂಬಾರೂ ಮಾಡಿಬಿಟ್ಟೆ. ಫಿಲ್ಟರಿಗೆ ಕಾಫೀನೂ ಹಾಕಿಟ್ಟುಬಿಟ್ಟಿದ್ದೇನೆ. ವಿಜೂ, ನಿನ್ನೆ ಮಾಡಿದ ಮೈಸೂರುಪಾಕು ಯಾವ ಡಬ್ಬದಲ್ಲಿ ಇಟ್ಟಿದ್ದೀಯಾ, ನೀನೇ ಬಂದು ತಟ್ಟೆಗೆ ತೆಗೆದಿಡಮ್ಮಾ.''

ನಮ್ಮ ಹಳ್ಳಿಯೇನು, ಬೆಂಗಳೂರೇನು, ಅಡಿಗೆಯ ಒಲೆಗಳು ಎಲ್ಲೆಲ್ಲಿಯೂ ಉರಿಯುತ್ತಲೇ ಇವೆ, ಇಡ್ಲಿಯ ಪಾತ್ರೆಗಳು, ಅವಲಕ್ಕಿಯ ಬುಟ್ಟಿಗಳು ಒಲೆಯ ಮೇಲೇರಿ ಕೆಳಗಿಳಿದು ನಿತ್ಯನೃತ್ಯ ಮಾಡುತ್ತಲೇ ಇವೆ !

ತಿಂಡಿ ತಿನ್ನುವಾಗ ವಿಜಯಾನನ್ನು ಕೇಳಿದೆ – ''ವಿಜೂ, ಬಿ.ಎಸ್‌ಸಿ. ಮುಗಿಸಿದೆಲ್ಲಾ, ಮುಂದೇನು ಮಾಡಬೇಕಂತಿ ?''

''ಎಂ.ಎಸ್‌ಸಿ. ಮಾಡೋಣಾಂತಿತ್ತು, ಚೆನ್ನಾಗಿ ಮಾರ್ಕ್ಸ್ ಬಂದಿದೆ. ಈಝಿಯಾಗಿ ಸೀಟು ಸಿಕ್ಕತ್ತೆ. ಆದರೆ ಅಪ್ಪ ಬೇಡಾಂತಾರೆ. ಎಲ್‌ಎಲ್.ಬಿ. ಮಾಡಿಕೋ ಅಂತಾರೆ.''

''ಚೆನ್ನಾಗಿದೆ ಐಡಿಯಾ, ವಿಜೂ'' ಶ್ರೀಧರ ಉತ್ಸಾಹದಿಂದ ಹೇಳಿದ.

''ನಮ್ಮ ಫ್ಯಾಮಿಲೀಲಿ ಇದುವರೆಗೆ ಯಾರೂ ಲಾಯರಾಗಿಲ್ಲ. ನೀನೇ ಮೊದಲನೆಯವಳಾಗ್ತೀ ನೋಡು.''

''ಸುಮ್ಮನೆ ಸರಿಯಾದ ಗಂಡು ಸಿಕ್ಕೋವರೆಗೆ ಏನಾದರೂ ಮಾಡಬೇಕಲ್ಲ'' ಮಾವ ಹೇಳಿದರು – ''ಅಲ್ಲದೆ ಈಗ ಬರೀ ಬಿ.ಎಸ್‌ಸಿ.ಗೆ ಸರಿಯಾದ ಗಂಡೂ ಸಿಕ್ಕಕ್ಕಿಲ್ಲ. ಏನಾದರೂ ಪ್ರೊಫೆಶನಲ್ ಕ್ವಾಲಿಫಿಕೇಷನ್ ಬೇಕೂ ಅಂತಾರೆ.''

ಕೇಳಿ ನನಗೆ ಚೇಳು ಕಡಿದಂತಾಯಿತು. ತಟ್ಟನೆ ಹೇಳಿದೆ – ''ಅವರು ಕೇಳ್ತಾರ ಅಂತ ಯಾಕ ? ಆಕೀ ಎಲ್‌ಎಲ್.ಬಿ. ಮಾಡಿ, ಪ್ರ್ಯಾಕ್ಟೀಸ್ ಮಾಡಿ, ತನ್ನ ಕರಿಯರ್ ಮಾಡಿಕೊಳ್ಲಿ ಅಂತ ಯಾಕ ಕಲಸಬಾರದು ?''

''ಛೆ, ಅದೆಲ್ಲಾ ಏನು ಬೇಡಮ್ಮಾ'' – ನನ್ನ ಅತ್ತೆ ಹೇಳಿದರು – ''ಬೇಗ ಅವಳಿಗೊಂದು ಒಳ್ಳೇ ಗಂಡು ನೋಡಿ ಮದುವೆ ಮಾಡಿಬಿಟ್ಟರೆ ನಮ್ಮ ರಿಸ್ಪಾನ್ಸಿಬಿಲಿಟಿ ಮುಗಿದ ಹಾಗಾಗ್ತದೆ. ಮದುವೆ ಆದಮೇಲೆ ಅವಳು ಏನುಬೇಕಾದರೂ ಮಾಡಿಕೊಳ್ಳಲಿ.''

ಜೀವನವೆಲ್ಲ ಶಿಕ್ಷಕಿಯಾಗಿ ಕೆಲಸಮಾಡಿ ಹೋದ ವರ್ಷ ನಿವೃತ್ತರಾದ ನಮ್ಮ ಅತ್ತೆಯ ಬಾಯಲ್ಲಿ ಈ ಮಾತು !

''ಈಗ ಸದ್ಯಕ್ಕಂತೂ ಇನ್ನೂ ಎರಡು ತಿಂಗಳು ಏನೂ ಇಲ್ಲ ನೋಡು. ಸ್ವಲ್ಪ ಅಡಿಗೆ ಮಾಡುವುದನ್ನು ಕಲಿತುಕೋ ಎಂದು ಹೇಳಿದ್ದೇನೆ. ಒಂದು ಬೇಕಿಂಗ್ ಕ್ಲಾಸಿಗೂ ಸೇರಿದ್ದಾಳೆ. ಈಗೆಲ್ಲ ಹುಡುಗರಿಗೆ ಹೊರಗಿನ ತಿಂಡಿಗಳು ಬಹಳ ಇಷ್ಟ ಅಲ್ಲ. ಅದಕ್ಕೇ ನಾಳೆ ಗಂಡ ಅದು ಮಾಡು, ಇದು ಮಾಡು ಎಂದರೆ ಗೊತ್ತಿರಬೇಕಲ್ಲ ? ಮನೇಲಿ ನಾನೂ ಹೇಳಿಕೊಡ್ತಿದೀನಿ. ಮದುವೆ ಆದ ಮೇಲೆ ಅಡಿಗೆ ಮನೆ ಸಂಭಾಳಿಸಬೇಡವೇ ?''

ಹೆಣ್ಣು ಹುಟ್ಟಿರುವುದೇ ಅದಕ್ಕೆ ಅಲ್ಲವೇ ? ಎಲ್ಲಿ ಹೊದರೂ ಅದೇ ರಾಗ, ಅದೇ ಹಾಡು, ಆಲಾಪ ಸ್ವಲ್ಪ ಬೇರೆ ಬೇರೆ ಅಷ್ಟೇ.

ನಾನು ಅತ್ತೆಯನ್ನು ಕೇಳಿದೆ – ''ಅಮ್ಮಾ , ಒಂದು ಮಾತು ಹೇಳ್ರಿ, ನನಗ, ಇಷ್ಟು ವರ್ಷ ಟೀಚರಾಗಿ ಕೆಲಸ ಮಾಡಿದಿರಲ್ಲಾ, ಆ ಕೆಲಸದ ಬಗ್ಗೆ ಒಂದು ಪ್ರೀತಿ, ಕೆಲಸಾ ಮಾಡಿದ ಒಂದು ಸಂತೋಷಾ-ಸಮಾಧಾನ ಅನಿಸಿತೋ ಇಲ್ಲೋ ?''

''ಅಯ್ಯೋ, ಅನಿಸದೆ ಇರ್ತದೆಯೇ ? ಟೀಚಿಂಗ್ ತುಂಬಾ ಎಂಜಾಯ್ ಮಾಡಿದೆನಮ್ಮಾ ನಾನು. ಮಕ್ಕಳ ಸಹವಾಸಾನೂ ಬಹಳಾ ಇಷ್ಟವಾಗ್ತಾ ಇತ್ತು ನನಗೆ. ಟೀಚಿಂಗ್ ಮೆಥಡ್‌ನಲ್ಲೂ ತುಂಬಾ ಏನೇನೋ ಓದಿ, ಎಕ್ಸ್‌ಪಿರಿಮೆಂಟೆಲ್ಲಾ ಮಾಡಿ, ನನ್ನದೇ ಒಂದು ಟೀಚಿಂಗ್ ಪದ್ಧತೀನ ಡೆವಲಪ್ ಮಾಡಿದ್ದೆ ನೋಡು. ನಮ್ಮ ಪ್ರಿನ್ಸಿಪಾಲ್ ತುಂಬಾ ಸಲ ಹೇಳಿದರು. 'ನೀವು ಬೇರೆ ಶಾಲೆಗಳಿಗೆ ಹೋಗಿ ಲೆಕ್ಚರ್-ಡೆಮಾನ್‌ಸ್ಟ್ರೇಷನ್ ಕೊಡಬೇಕು, ಈ ಪದ್ಧತಿ ಎಲ್ಲಾ ಕಡೆಗೆ ಪ್ರಸಾರ ಆಗಬೇಕು' ಅಂತ. ಎಲ್ಲಮ್ಮಾ, ನನಗೆ ಅದಕ್ಕೆಲ್ಲಾ ವೇಳೆಯಿತ್ತು ? ಮನೆಯ ಕೆಲಸ, ಸಣ್ಣ ಮಕ್ಕಳು ಎಲ್ಲ ಬಿಟ್ಟು ಅದನ್ನೆಲ್ಲಿ ಬೆನ್ನು ಹತ್ತೋ ಹಾಗಿತ್ತು ?''

ಅಡಿಗೆ ಮನೆಯಲ್ಲಿ ಅರಳಿ, ಉದುರಿದ ಹೂಗಳ ಸಮಾಧಿಯೆದುರು ನನ್ನ ಮನ ಮೌನವಾಗಿ ಎರಡು ಹನಿ ಕಣ್ಣೀರು ಹಾಕಿತು.

ಕಲ್ಪನೆ : ಅಂಬಾಬಾಯಿಯವರ ತಮಿಳು ಕಥೆಯೊಂದರಿಂದ

ದಮಯಂತಿ ನರೇಗಲ್
'ಇಂಪನ', ಆನೆಯ ಕ್ರಾಸ್, ಸಾಧನಕೇರಿ, ಧಾರವಾಡ-೫೮೦ ೦೦೮

## ನನ್ನೊಳಗಿನ ಕವಿಗೆ



ನನ್ನ ಕವಿತೆಯ
ಒಂದೊಂದು ಅಕ್ಷರಕೂ
ಆದರದೇ ಆದ ವ್ಯಥೆಯಿದೆ;
ಯಾರಿಗೂ ಹೇಳಲಾಗದ ಕಥೆಯಿದೆ;
ಕವಿತೆ 'ಮಗು' ಹೊರಬಂದಾಗ
ಹೆರಿಗೆ ನೋವಿನಲೂ
''ಹಗುರಾಗಿಬಿಟ್ಟೆ'' ಎಂಬ
ಬಾಣಂತಿಯ ನಗೆಯಿದೆ !

''ಶುಭವಾಗಲಿ'' ಎಂದು ಹಾರೈಸಿ
ಕ್ಷಿತಿಜದಂಚಿನ ತಾರೆ
ನೀ-ಮರೆಯಾದರೂ
ಅಲ್ಲಿ... ಇಲ್ಲಿ...
ನಿನ್ನ ಕವಿತೆ ಕಣ್ಣಿಗೆ ಕಂಡಾಗ
ಭಾವನೆಗಳು ಕೆರಳುತ್ತವೆ
ನಾನು ನರಳುತ್ತೇನೆ !!

ಅದಕ್ಕೆ ಗೆಳೆಯ
ನೀ ಬರೆದ ಕವಿತೆ
ನನ್ನೆದೆಯಲಿ 'ರಸ'ವಾಗಿ
ಕಣ್ಣೀರಾಗಿ ಜಿನುಗುತ್ತದೆ !

ಶೋಭ ಪ್ರಮೋದ್
ಮಹಾಲಕ್ಷ್ಮೀ ಏಜೆನ್ಸೀಸ್, ಮಾಣಗಾಂವ್ ಪೋಸ್ಟ್-೪೦೨ ೧೦೪,
ರಾಯ್‌ಗಡ ಜಿಲ್ಲೆ, ಮಹಾರಾಷ್ಟ್ರ

**ದೂ**ರದೂರದ ಊರುಗಳಿಗೆ ಬಸ್ಸಿನಲ್ಲಿ ಸಾಗುವಾಗ ನಾವು ಹೊರಗಿನ ನೋಟಗಳಲ್ಲಿ ತಲ್ಲೀನರಾಗುವುದು ಸಾಮಾನ್ಯ. ಆದರ ಜೊತೆಗೆ ಬಸ್ಸಿನೊಳಗಿನ ಪ್ರಪಂಚವನ್ನೂ ಕೊಂಚ ಗಮನಿಸಿದರೆ, ಇಲ್ಲೂ ಮನ ತಟ್ಟುವ ನೋಟಗಳು ಕಾಣಿಸಿಕೊಳ್ಳುತ್ತವೆ.

**ಮೂಡಿಗೆರೆಯಲ್ಲಿ ''ಷೂಟಿಂಗ್''**

ನಮ್ಮ ಬಸ್ ಕೊಟ್ಟಿಗೆಹಾರ ತಲುಪಿದಾಗ ಕತ್ತಲಾಗಿತ್ತು. ರಿಬೊಕ್ ಬನಿಯನ್, ಜೀನ್ಸ್ ಪ್ಯಾಂಟ್ ತೊಟ್ಟುಕೊಂಡು, ಸೊಂಟಕ್ಕೆ ಜೀನ್ಸ್ ಜರ್ಕಿನ್ ಸುತ್ತಿಕೊಂಡಿದ್ದ ಯುವತಿಯೊಬ್ಬಳು ಬಸ್ಸೇರಿದಳು. ತಕ್ಷಣವೇ ''ಎಕ್ಸ್‌ಕ್ಯೂಸ್ ಮೀ'' ಎಂಬ ಏರುಧ್ವನಿಯ ಮಾತು ಕೇಳಿ ಹಿಂದೆ ತಿರುಗಿ ನೋಡಿದೆ. ಆಕೆ ಹಿಂದಿನ ಸೀಟಿನಲ್ಲಿ ಕೂತಿದ್ದ ಮುದುಕನನ್ನು ಸಿಟ್ಟಿನಿಂದ ನೋಡುತ್ತ ಗದರಿಸುತ್ತಿದ್ದಳು. ''ಕಾಲು ಆ ಕಡೆ ಸರಿಸಿಕೊಳ್ಳಿ ಅಂದ್ರೆ ಕೇಳೋದಿಲ್ವೇನ್ರೀ ?'' ಅಂತ ಇನ್ನೊಮ್ಮೆ ಅಬ್ಬರಿಸಿದಳು. ಆದರೆ ಮುದುಕ ಮುಂದೆ ಸಾಗುವ ದಾರಿಗೆ ಕಾಲು ಅಡ್ಡ ಹಾಕಿ ಕುಳಿತಿರಲೇ ಇಲ್ಲ! ಅಂತೂ ಆಕೆ ಮುಂದೆ ಸಾಗಿ, ಡ್ರೈವರಿನ ಹಿಂದಿನ ಸೀಟಿನ ಬಳಿ ಹೋದಳು. ಆ ಸೀಟಿನಲ್ಲಿ ಕೂತಿದ್ದ ಇಬ್ಬರಿಗೆ ''ಇಲ್ಲಿಂದ ಏಳಿ, ಹೋಗಿ ಅಲ್ಲಿ ಕೂತ್ಕೊಳ್ಳಿ'' ಅಂತ ಗದರಿಸಿದಳು. ಅವರು ಮರುಮಾತಾಡದೆ ಎದ್ದು ಅವಳಿಗೆ ಸೀಟು ಬಿಟ್ಟುಕೊಟ್ಟರು.

ಹಿಂದಿನ ಸೀಟುಗಳಲ್ಲಿ ಗುಸುಗುಸು ಮಾತು ಆರಂಭವಾಯಿತು. ಕೊಟ್ಟಿಗೆಹಾರದಲ್ಲಿ ಬಸ್ಸೇರಿದ್ದ ಪೊಲೀಸ್ ಕಂಡಕ್ಟರರಿಗೆ ಹೇಳಿದ್ದನ್ನು ಕೇಳಿಸಿಕೊಂಡೆ: ''ಅವಳಿಗೆ ಸ್ವಲ್ಪ ಹುಚ್ಚು. ಯಾರೋ ಬೊಂಬಾಯವಳಂತೆ. ಈಗ ಕೆಲವು ದಿನಗಳಿಂದ ಹೀಗೆ ಬಸ್ಸಿನಲ್ಲಿ ಓಡಾಡ್ತಾ ಇದ್ದಾಳೆ.''

ಮೂಡಿಗೆರೆಯಲ್ಲಿ ಆ ಯುವತಿ ಬಸ್ಸಿನಿಂದ ಇಳಿದಳು. ಅವಳು ಎಲ್ಲಿಗೆ ಹೋಗ್ತಾಳೆ ಅಂತ ಎಲ್ಲರಿಗೂ ಕುತೂಹಲ. ಸ್ವಲ್ಪ ಹೊತ್ತಿನಲ್ಲೇ ಒಂದಿಬ್ಬರು ಬಸ್ಸಿನೊಳಗೆ ಘೋಷಿಸಿದರು, ''ಅಲ್ನೋಡಿ, ಸರ್ಕಲ್ಲಿನಲ್ಲಿ ಅವಳು ಡ್ಯಾನ್ಸ್ ಮಾಡ್ತಾ ಇದ್ದಾಳೆ, ನೋಡ್ರಿ !'' ಬಸ್ಸಿನಲ್ಲಿದ್ದವರೆಲ್ಲ ಎದ್ದುನಿಂತು ನೋಡಿದರು. ಮೂಡಿಗೆರೆ ಸರ್ಕಲ್‌ನಲ್ಲಿ ಜನ ಸೇರಿತ್ತು. ಅವಳು ಅಲ್ಲಿ ಮನಬಂದಂತೆ ಕುಣಿಯುತ್ತಿದ್ದಳು.

ಬಸ್ ಹೊರಟಾಗ ಆಕೆ ಓಡೋಡಿ ಬಂದು ಬಸ್ಸೇರಿದಳು. ಏದುಸಿರು ಬಿಡುತ್ತಿದ್ದಳು. ಕಂಡಕ್ಟರನ್ನು ಕೇಳಿದಳು, ''ಷೂಟಿಂಗ್ ನೋಡಿದ್ರಾ ?'' ಆತ ಏನೂ ತಿಳಿಯದವನಂತೆ ''ಎಲ್ಲಿ'' ಎಂದಾಗ, ''ಅಲ್ಲೇ ಸರ್ಕಲ್ಲಿನಲ್ಲಿ, ಹೀರೋ ಹೀರೋಯಿನ್ ಎಲ್ಲ ನಾನೇ'' ಅಂದಳು. ''ನೀವು ಪ್ರೇಮನ್ನ ನೋಡಿಲ್ಲ ?'' ಎಂಬ ಅವಳ ಪ್ರಶ್ನೆಯಿಂದ ಗೊಂದಲಕ್ಕೊಳಗಾದ ಕಂಡಕ್ಟರ್ ''ಯಾರು ?'' ಅಂತ ಕೇಳಿದಾಗ ನಗುತ್ತಾ ''ನಾನೇ, ಗೊತ್ತಿಲ್ವಾ ?'' ಎಂದು ಉತ್ತರಿಸಿ, ಮುಂದಿನ ಸೀಟಿನತ್ತ ನಡೆದಳು.

ಕತ್ತಲನ್ನು ಸೀಳಿಕೊಂಡು ಚಿಕ್ಕಮಗಳೂರಿನತ್ತ ಸಾಗುತ್ತಿದ್ದ ಬಸ್ಸಿನಲ್ಲಿ ವಿಚಿತ್ರ ಮೌನ. ಎಲ್ಲರೂ ತಮ್ಮ ತಮ್ಮ ಬದುಕಿನ ''ಷೂಟಿಂಗಿ''ನ ಬಗ್ಗೆ ಯೋಚಿಸುತ್ತಿದ್ದಿರಬೇಕು.

**ಬಸ್ ತಡವಾಗಿ ಹೊರಟದ್ದು ಯಾಕೆ ?**

ಚಿಕ್ಕಮಗಳೂರಿನಿಂದ ಹೊರಡುವ ಬಸ್ಸೇರಿ ಕೂತಿದ್ದೆ. ಡ್ರೈವರ್ ತನ್ನ ಸೀಟ್ ಹತ್ತಿ ಕೂತರು. ಬಸ್ ಹೊರಡುವ ಹೊತ್ತಾದರೂ ಡ್ರೈವರ್ ಎಂಜಿನ್ ಚಾಲೂ ಮಾಡಲಿಲ್ಲ. ಬಸ್ಸಿನೊಳಗೆ ಪ್ರಯಾಣಿಕರ ಮಾತು ಜೋರಾಯಿತು. ಡ್ರೈವರ್ ಆಗಾಗ ಹಿಂತಿರುಗಿ ನೋಡುತ್ತಿದ್ದರು - ಖಾಲಿಯಾಗಿದ್ದ ಎರಡು ಸೀಟುಗಳ ಕಡೆಗೆ. ಹೀಗೆ ಐದು ನಿಮಿಷಗಳು ಸರಿದವು. ಇನ್ನು ತಡೆಯಲಾಗದೆ ಪ್ರಯಾಣಿಕರೊಬ್ಬರು ಕೇಳಿಯೇ ಬಿಟ್ಟರು. ''ಡ್ರೈವರ್ರೇ, ಟೈಂ ಆಯಿತಲ್ವ ? ಇನ್ನೂ ಯಾಕೆ ಹೊರಟಿಲ್ಲ ?'' ಡ್ರೈವರ್ ಸ್ವರ ಏರಿಸಿ ಉತ್ತರಿಸಿದರು, ''ಇಬ್ರು ಪುಣ್ಯಾತ್ಮರು ರಿಸರ್ವ್ ಮಾಡಿ ಇನ್ನೂ ಬಂದಿಲ್ಲ. ಅವರಿಗಾಗಿ ಕಾಯ್ತಾ ಇದ್ದೀನಿ. ಅವರನ್ನು ಬಿಟ್ಟು ಬಸ್ ಹೊರಟರೆ, ಮತ್ತೆ ಅವರು ಕನ್‌ಸ್ಯೂಮರ್ ಕೋರ್ಟಿಗೆ ಹೋದರೆ, ಯಾರಿಗೆ ಬೇಕು ತಾಪತ್ರಯ ?''

ಅಷ್ಟರಲ್ಲಿ ಇಬ್ಬರು ರಿಕ್ಷಾದಿಂದಿಳಿದು ಓಡೋಡಿ ಬಂದು ಬಸ್ಸೇರಿದರು. ಡ್ರೈವರ್ ಎಂಜಿನ್ ಚಾಲೂ ಮಾಡಿ, ಬಸ್ ನಡೆಸಿದರು. ಬಸ್ ಮುಂದೆ ಸಾಗಿದಂತೆ ಪಕ್ಕದಲ್ಲಿದ್ದ ಪ್ರಯಾಣಿಕರೊಂದಿಗೆ ಡ್ರೈವರ್ ಮಾತು ಶುರು ಮಾಡಿದರು. ಬಳಕೆದಾರರ ಕೋರ್ಟಿನಲ್ಲಿ ತಾನು ಎದುರಿಸಬೇಕಾದ ಒಂದು ವ್ಯಾಜ್ಯದ ಬಗ್ಗೆ ತಿಳಿಸಿದರು.



ಕೊನೆಗೆ ಕೋರ್ಟ್ ೫೦೦ ರೂಪಾಯಿಗಳ ದಂಡ ವಿಧಿಸಿ, ಅದನ್ನು ತನ್ನ ಸಂಬಳದಿಂದಲೇ ವಸೂಲಿ ಮಾಡಲಾಯಿತೆಂದು ಹೇಳಿದರು. "ಅಂಥ ಒಂದು ಕೋರ್ಟ್ ಇದೆ ಅಂತಾನೇ ನಂಗೆ ಗೊತ್ತಿರಲಿಲ್ಲ. ಹೀಗೆ ಆದ್ರೇನೆ ಇದೆಲ್ಲ ಗೊತ್ತಾಗೋದು ನೋಡಿ" ಎಂದು ಸ್ವಾನುಭವದ ಕತೆ ಮುಗಿಸಿದರು. ನಾವೆಲ್ಲರೂ ಅವರಂತೆಯೇ ಸ್ವಾನುಭವದಿಂದ ಕಲಿಯುವಂತಾಗಿದ್ದರೆ....

**ಕಿಸೆಗಳ್ಳನ ಚಾಕಚಕ್ಯತೆ**

ಧರ್ಮಸ್ಥಳದಿಂದ ಹೊರಟ ಬಸ್ ಚಾರ್ಮಡಿ ಘಾಟ್ ಏರಿ, ಕೊಟ್ಟಿಗೆಹಾರ ದಾಟಿ, ಮೂಡಿಗೆರೆಗೆ ಬಂದು ನಿಂತಿತು. ಬಸ್ಸಿನಿಂದ ಇಳಿಯುವವರ, ಬಸ್ ಹತ್ತುವವರ ಗಡಿಬಿಡಿ, ಗದ್ದಲ. ಹಿಂಭಾಗದ ಬಾಗಿಲಿನ ಬಳಿ ಜೋರು ಜೋರು ಮಾತು ಕೇಳಿಸಿತು. ಮುಂದಿನ ಸೀಟೊಂದರಲ್ಲಿ ಕೂತಿದ್ದ ನಾನು ಹಿಂತಿರುಗಿ ನೋಡಿದೆ. ವ್ಯಕ್ತಿಯೊಬ್ಬನನ್ನು ಮೂವರು ಹಿಡಿದುಕೊಂಡು, "ಯಾವೂರು ನಿಂದು ? ಹೆಸರೇನು ?" ಎಂದು ಗದರಿಸುತ್ತಿದ್ದರು. ಆತ ತಲೆಕೆಳಗೆ ಹಾಕಿ ನಿಂತಿದ್ದ. "ಇದೇ ಕೆಲಸ ಏನು ನಿಂಗೆ ? ಎಷ್ಟು ಕಳ್ಳತನ ಮಾಡಿದ್ದಿ ಹೇಳು ?" ಅಂತ ದಬಾಯಿಸಿದರು.

ಅಷ್ಟರಲ್ಲಿ ಕಂಡಕ್ಟರ್ ಬಂದರು. "ಏನ್ರೀ ಅದು ?" ಅಂತ ಕೇಳಿದರು. "ನೋಡ್ರೀ, ಇವನು ನನ್ನ ಪ್ಯಾಂಟ್ ಜೇಬಿಗೆ ಕೈಹಾಕಿ ಪರ್ಸ್ ಎಳ್ದಿದ್ದ. ನಾನು ಅವನ ಕೈಹಿಡ್ಕೊಂಡ್ ಬಿಟ್ಟೆ. ಈಗ ಇಲ್ಲ ಅಂತಾನೆ. ಒದೀಬೇಕು ಇವ್ನಿಗೆ" ಅಂತ ಜೇಬುಗಳ್ಳನ ಕತ್ತುಪಟ್ಟಿ ಹಿಡಿದಿದ್ದವರು ಉದ್ವೇಗದಿಂದ ಹೇಳಿದರು. "ಹೋಗ್ಲಿ ಬಿಡ್ರೀ, ಪರ್ಸ್ ಹೋಗಿಲ್ಲ ತಾನೇ ?" ಎಂದು ಕಂಡಕ್ಟರ್ ಸಮಾಧಾನಪಡಿಸಲು ಯತ್ನಿಸಿದರು. "ಅವನನ್ನು ಎಳ್ಕೊಂಡು ಹೋಗಿ ಪೊಲೀಸರಿಗೆ ಕೊಡ್ರಿ," ಎಂದೊಬ್ಬರು ಸಲಹೆ ನೀಡಿದರು. "ಏನಾಗುತ್ತೇರಿ ಪೊಲೀಸರಿಗೆ ಕೊಟ್ರೆ ? ಕೊನೆಗೆ ಸಾಕ್ಷಿ ಇಲ್ಲ ಅಂತ ಕೇಸ್ ಬಿದ್ದುಹೋಗತ್ತೆ." ಮತ್ತೊಬ್ಬರ ಅನುಭವ ವಾಣಿ. "ತಡ ಆಯ್ತು ಕಣ್ರೀ. ಬಸ್ ಹೊರಡತ್ತೆ, ಅವನನ್ನು ಬಿಡ್ರೀ" ಎಂದು ಕಂಡಕ್ಟರ್ ಸೀಟಿ ಊದಿದರು. ಜೇಬುಗಳ್ಳನನ್ನು ಬಿಟ್ಟರು. ಅವನು ಬಸ್ಸಿಳಿದೊಡನೆ ಓಡಿ ಮರೆಯಾದ.

ಇಷ್ಟೆಲ್ಲ ಆಗುವಾಗ ಸುಮ್ಮನೆ ಕೂತಿದ್ದವರೊಬ್ಬರು ಸೀಟಿನಿಂದ ಜಿಗಿದು ನಿಂತು, "ಹಿಡೀರಿ ಅವನನ್ನ, ಬಿಡಬೇಡಿ" ಎಂದು ಕೂಗಿದರು. ತನ್ನ ಪ್ಯಾಂಟಿನ ಜೇಬು ಮುಟ್ಟಿಕೊಳ್ಳುತ್ತಾ ಅವರು "ನನ್ನ ಪರ್ಸ್ ಕದ್ದಿದ್ದಾನೆ ನೋಡಿ. ನಂಗೆ ಈಗ ಗೊತ್ತಾಗಿದ್ದು. ನಾನು ಕೊಟ್ಟಿಗೆಹಾರದಲ್ಲಿ ಟಿಕೆಟ್ ದುಡ್ಡು ಕೊಟ್ಟು ಜೇಬಲ್ಲಿ ಪರ್ಸ್ ಇಟ್ಟಿದ್ದೆ. ಈಗ ಪರ್ಸ್ ಇಲ್ಲ, ಅವನೇ ಕದ್ದಿದ್ದಾನೆ. ಯಾಕಂದ್ರೆ, ಅವನು ಕೊಟ್ಟಿಗೆಹಾರದಲ್ಲಿ ನನ್ ಹಿಂದೇನೇ ನಿಂತಿದ್ದ" ಅಂತ ಕೂಗಾಡಿದರು. "ಅದಕ್ಕೇ ನೋಡಿ, ಅವನನ್ನು ಪೊಲೀಸ್ರಿಗೆ ಕೊಡಬೇಕು ಅಂತ ನಾನಂದಿದ್ದು" ಎಂದು ಮುಂಚೆ ಸಲಹೆ ನೀಡಿದ್ದವರು ಸಮರ್ಥಿಸಿಕೊಂಡರು. "ಇವರನ್ನೆಲ್ಲ ಹೀಗೆ ಬಿಡೋದ್ರಿಂದಲೇ ಇವರು ಸೊಕ್ಕಿರೋದು" ಅಂತ ಮತ್ತೊಬ್ಬರ ಅಂಬೋಣ. ಅಲ್ಲಿಂದ ಚಿಕ್ಕಮಗಳೂರಿನವರೆಗೂ ಬಸ್ ಪ್ರಯಾಣಿಕರ ಬಾಯಿ ತುಂಬ ಜೇಬುಗಳ್ಳರ ಕತೆಗಳೇ.

## ಪ್ರಾಸ (ಣ)

ಹಿಂದೆ ಪೈ
ಪ್ರಾಸ ಬಿಟ್ಟಾಗ
ದೊಡ್ಡ ಕೋಲಾಹಲ;
ಈಗ ಕವಿತೆ
ಪ್ರಾಣ ಬಿಟ್ಟರೂ
ಕೇಳುವವರಿಲ್ಲ!

ಸಿ.ಪಿ.ಕೆ.
ಮೈಸೂರು

**ಟಿಕೇಟ್ ಖರೀದಿಸದ ಪೊಲೀಸ್**

ಅಕ್ಟೋಬರ್ ೨೦೦೦ದ ಒಂದು ಮುಂಜಾನೆ ಚಿಕ್ಕಮಗಳೂರಿಂದ ಮಂಗಳೂರಿಗೆ ಹೋಗುವ ಬಸ್ಸೇರಿದೆ. ಬಸ್ ಹೊರಟೊಡನೆ ಬಸ್ಸಿನೊಳಗಿನ ಲೈಟ್‌ಗಳನ್ನು ಆರಿಸಲಾಯಿತು. ಹಲವು ಪ್ರಯಾಣಿಕರು ತೂಕಡಿಸತೊಡಗಿದರು.

ಮೂಡಿಗೆರೆ ಹತ್ತಿರವಾಗುತ್ತಿದ್ದಂತೆ ಬಸ್ ನಿಂತಿತು. ಎಡಬದಿಯಲ್ಲಿದ್ದ ಅಡ್ಡರಸ್ತೆಯೊಂದರಲ್ಲಿ ಜೀಪ್ ನಿಂತಿತ್ತು. ಇಬ್ಬರು ಸ್ವೆಟರ್‌ಧಾರಿ ವ್ಯಕ್ತಿಗಳು ಚಕಚಕನೆ ಬಸ್ಸನ್ನೇರಿದರು. ಅವರು ಪ್ರಯಾಣಿಕರಿರಬೇಕು ಎಂದುಕೊಂಡರೆ ಅವರಲ್ಲೊಬ್ಬರು ಹಿಂಭಾಗದಲ್ಲಿ ಕೂತಿದ್ದವರೊಡನೆ "ಟಿಕೇಟ್ ತೋರ್ಸಿ" ಅಂತ ಕೇಳತೊಡಗಿದರು. ಇನ್ನೊಬ್ಬರು ಮುಂಭಾಗದವರ ಟಿಕೆಟ್ ಪರಿಶೀಲಿಸಲು ಆರಂಭಿಸಿದರು. ಆಗ ತಿಳಿಯಿತು – ಅವರು ಟಿಕೆಟ್ ಚೆಕಿಂಗ್ ಸ್ಕ್ವಾಡ್‌ನವರು ಅಂತ. ನನ್ನ ಎದುರುಗಡೆ ಒಬ್ಬರು ಬಸ್ಸಿನ ಪಕ್ಕಕ್ಕೆ ತಲೆಯಾನಿಸಿ ಕಣ್ಣು ಮುಚ್ಚಿಕೊಂಡೇ ಕೂತಿದ್ದರು. ಟಿಕೆಟ್ ಇನ್ಸ್‌ಪೆಕ್ಟರ್ ಅವರ ಮೈ ಅಲುಗಿಸಿ ಟಿಕೆಟ್ ಕೇಳಿದರು. ಅವರು ನಿಧಾನವಾಗಿ ಕಣ್ಣುಬಿಟ್ಟು 'ಏನು' ಎಂಬಂತೆ ಇವರ ಮುಖ ನೋಡಿದರು.

"ಚೆಕ್ ಮಾಡ್ತಾ ಇದ್ದೀವಿ. ಟಿಕೆಟ್ ತೋರ್ಸಿ" ಎಂದು ಟಿಕೆಟ್ ಇನ್ಸ್‌ಪೆಕ್ಟರ್ ಜೋರಾಗಿ ಕೇಳಿದರು. ಆ ವ್ಯಕ್ತಿ ತಾನು ಹೊದ್ದಿದ್ದ ಶಾಲನ್ನು ನಿಧಾನವಾಗಿ ತೆಗೆದರು. ಅವರ ಪೊಲೀಸ್ ಯುನಿಫಾರಂ ಗೋಚರಿಸಿತು. ಆಗ ಕಂಡಕ್ಟರ್ ಹತ್ತಿರ ಬಂದು, "ಅವರು ಪೊಲೀಸ್ ಸಾರ್" ಅಂದರು. ಆಗ ಪೊಲೀಸ್ "ನಾನು ಡ್ಯೂಟಿ ಮೇಲಿದ್ದೀನಿ. ಟಿಕೆಟ್ ಬೇಕಾಗಿಲ್ಲ" ಎಂದು ಗಡುಸಾದ ಸ್ವರದಲ್ಲಿ ಹೇಳಿದರು. "ಡ್ಯೂಟಿ ಮೇಲಿದ್ರೆ, ವಾರೆಂಟ್ ತೋರ್ಸಿ" ಅಂತ ಟಿಕೆಟ್ ಇನ್ಸ್‌ಪೆಕ್ಟರ್ ಕೇಳಿದರು. "ನನ್ನ ಕಾರ್ಡ್ ನೋಡಿ" ಅಂತ ಆ ಪೊಲೀಸ್ ಯಾವುದೋ ಕಾರ್ಡ್ ತೋರಿಸಿದರು. "ಇದೆಲ್ಲ ಆಗೋಲ್ಲ. ವಾರೆಂಟ್ ತೋರ್ಸಿ" ಎಂದು ಟಿಕೆಟ್ ಇನ್ಸ್‌ಪೆಕ್ಟರ್ ಬಿರುಸಾಗಿ ಪುನಃ ಕೇಳಿದರು. "ವಾರೆಂಟ್ ಯಾಕೆ ? ನನ್ನ ಕಾರ್ಡ್ ನೋಡಿದ್ರಲ್ಲಾ" ಅಂತ ಪೊಲೀಸ್ ದಬಾಯಿಸಿದ. ಅವರೊಳಗೆ ಜೋರಾಗಿ ಚರ್ಚೆ ನಡೆಯಿತು. ಕೊನೆಗೆ ಟಿಕೆಟ್ ಇನ್ಸ್‌ಪೆಕ್ಟರ್‌ಗಳಿಬ್ಬರೂ ತಮ್ಮೊಳಗೆ ಮಾತಾಡಿಕೊಂಡರು. "ಈ ಸಲ ಬಿಡ್ತೀವಿ. ಇನ್ನೊಮ್ಮೆ ನೀವು ವಾರಂಟ್ ತೋರಿಸದಿದ್ರೆ, ನಾವು ರಿಪೋರ್ಟ್ ಮಾಡಬೇಕಾಗ್ತದೆ" ಎಂದು ಪೊಲೀಸನನ್ನು ಎಚ್ಚರಿಸಿ ಬಸ್ಸಿಳಿದರು.

ಬಸ್ ಹೊರಟಾಗ ಬಸ್ಸಿನೊಳಗೆ ಗಾಢ ಮೌನ. "ನಮಗೆ ಹೀಗಾಗಿದ್ದರೆ ಏನಾಗಿತ್ತು" ಎಂಬ ಪ್ರಶ್ನೆ ಪ್ರಯಾಣಿಕರೆಲ್ಲರ ಮನಸ್ಸನ್ನೂ ಕೊರೆಯುತ್ತಿತ್ತು. ಆದರೆ ಆ ಬಗ್ಗೆ ನಾವು ಬಾಯಿಬಿಟ್ಟು ಮಾತಾಡಿಕೊಂಡದ್ದು ಮೂಡಿಗೆರೆಯಲ್ಲಿ ಆ ಪೊಲೀಸ್ ಬಸ್ಸಿಳಿದು ಹೋದ ಬಳಿಕವೇ !

**ಅರ್ಧ ಟಿಕೆಟಿನ ಚೌಕಾಶಿ**

ನಮ್ಮ ಬಸ್ ಬಿ.ಸಿ. ರೋಡಿನಿಂದ ಉಜಿರೆಯತ್ತ ಹೊರಟಿತು. ನನ್ನ ಪಕ್ಕದಲ್ಲೇ ಒಬ್ಬ ವಯಸ್ಸಾದ ಮಹಿಳೆ ಹಾಗೂ ಅವಳ ಸುಮಾರು ೧೪ ವರ್ಷ ವಯಸ್ಸಿನ ಮಗ ನಿಂತಿದ್ದರು. ಕಂಡಕ್ಟರ್ ಬಂದು ಟಿಕೆಟ್ ಕೇಳಿದಾಗ, ಹರಿದಿದ್ದ ಸೀರೆ ತೊಟ್ಟಿದ್ದ ಈ ತಾಯಿ ಒಂದೂವರೆ ಟಿಕೆಟಿನ ಹಣ ಕೊಟ್ಟು "ಇವನಿಗೆ ಅರ್ಧ ಟಿಕೆಟ್" ಅಂದಳು. ಕಂಡಕ್ಟರ್ "ಅದಾಗೊಲ್ಲ. ಇಷ್ಟ್ ದೊಡ್ಡೋನಿದಾನೆ. ಅವ್ನಿಗೆ ಫುಲ್ ಟಿಕೆಟ್ ತಗೋಬೇಕು" ಅಂದರು. "ಇಲ್ಲಾರೀ, ಅವಂಗೆ ವಯಸ್ಸಾಗಿಲ್ಲ. ಅರ್ಧ ಟಿಕೆಟ್ಟೇ ಅವಂಗೆ" ಅಂತ ತಾಯಿಯ ವಾದ. ತುಸು ಹೊತ್ತು ಚರ್ಚೆ ನಡೆಯಿತು. ಕೊನೆಗೆ ಕಂಡಕ್ಟರ್, "ಅವಂಗೆ ಫುಲ್ ಟಿಕೆಟ್ ತೆಗೀಲೇಬೇಕು. ಐವತ್ತೊಂದು ರೂಪಾಯಿ ಕೊಡು. ಇಲ್ಲಾಂದ್ರೆ ಬಸ್ ನಿಲ್ಲಿಸಿಬಿಡ್ತೀನಿ" ಅಂತ ಸೀಟಿ ಊದಿಯೇಬಿಟ್ಟರು.

ಬಸ್ ನಿಂತಿತು. ಕಂಡಕ್ಟರ್ ಸ್ವರವೇರಿಸಿ ಹೇಳಿದರು, "ಐವತ್ತೊಂದು ರೂಪಾಯಿ ತೆಗಿ, ಇಲ್ಲಾಂದ್ರೆ ಇಲ್ಲೇ ಇಳ್ಕೋ. ನಮಗೂ ಕೇಳೋರಿದಾರೆ. ಏನ್ ಮಾಡ್ತಿ ಹೇಳು." ಆ ತಾಯಿ ತಗ್ಗಿದ ಸ್ವರದಲ್ಲಿ ಹೇಳಿದಳು, "ಹ್ಞೂಂ, ಕೊಡ್ತೀನಿ." ಅನಂತರ ಬಸ್ ಹೊರಟಿತು.

ಆ ತಾಯಿ ನಿಂತಿದ್ದಲ್ಲೇ ಕುಕ್ಕರಗಾಲಿನಲ್ಲಿ ಕೂತಳು. ತನ್ನ ಚೀಲದೊಳಗಿಂದ ಹಳೆಯ ಸಂಚಿಯೊಂದನ್ನು ತೆಗೆದಳು. ಅದರಲ್ಲಿದ್ದ ಮಡಚಿದ್ದ ನೋಟುಗಳನ್ನು ಹೊರತೆಗೆದು ಎಣಿಸಿದಳು. ಅನಂತರ ಎದ್ದು ನಿಂತು, ದೈನ್ಯಭಾವದಿಂದ ಕಂಡಕ್ಟರನನ್ನು ನೋಡ್ತಾ "ಅವನಿಗೆ ಅರ್ಧ ಟಿಕೆಟ್. ಬರುವಾಗ್ಲೂನೂ ಅರ್ಧ ಟಿಕೆಟ್ಟೇ ಮಾಡಿದ್ದು. ನಾನು ಇಷ್ಟು ಹೇಳಿದ್ರೂನೂ ನೀವು ಕೇಳಲ್ಲ. ನಿಮ್‌ದು ಹೆಣ್ಣು ಕರುಳೇನಲ್ವಾ ?" ಅಂದು ನೋಟುಗಳನ್ನಿತ್ತಳು.

ಆಕೆ ಮಹಿಳಾ ಕಂಡಕ್ಟರ್. ಅವಳಿಗೆ ಏನನ್ನಿಸಿತೋ... "ಸರಿ ಬಿಡು, ಅವ್ನಿಗೆ ಅರ್ಧ ಟಿಕೆಟ್ಟೇ ಕೊಡ್ತೀನಿ. ಚೆಕ್ಕಿಂಗ್‌ನವರು ಬಂದ್ರೆ, ಅವರಿಗೆ ನೀನೇ ಹೇಳ್ಬೇಕು" ಅಂತ ಒಂದೂವರೆ ಟಿಕೆಟಿನ ಹಣ ತಗೊಂಡು, ಟಿಕೆಟ್ ಕೊಟ್ಟು ಮುಂದೆ ಸಾಗಿದಳು. ಹೆಣ್ಣು ಕರುಳು ಕೊನೆಗೂ ಮಿಡಿದಿತ್ತು.

ಅಡ್ಡೂರು ಕೃಷ್ಣರಾವ್
ಮೇನೇಜರ್, ಕಾರ್ಪೊರೇಶನ್ ಬ್ಯಾಂಕ್, ಎಂ.ಜಿ.ರಸ್ತೆ,
ಚಿಕ್ಕಮಗಳೂರು-೫೭೭ ೧೦೧

# ನಿರುದ್ಯೋಗ ನಿವಾರಣೆಗೆ ಸ್ವ-ಉದ್ಯೋಗವೇ ಮದ್ದು

**ಸ್ವಾಮಿ ರಾಮಕೃಷ್ಣಾರ್ಪಣಾನಂದ**

ನಮ್ಮಲ್ಲಿ ಯಾವುದಕ್ಕೆ ಕೊರತೆಯಿದ್ದರೂ ಸಂತಾನಾಭಿವೃದ್ಧಿಗೆ ಕೊರತೆಯಿರದ ಕಾರಣ ನಾವು ದಿನೇ ದಿನೇ ಜನಸಂಖ್ಯೆಯಲ್ಲಿ ಶ್ರೀಮಂತರಾಗುತ್ತಾ ಆಹಾರ, ವಸತಿ, ವಿದ್ಯೆ, ಉದ್ಯೋಗಗಳಲ್ಲಿ ಬಡತನವನ್ನು ಎದುರಿಸುತ್ತಿದ್ದೇವೆ.

ನಮ್ಮಲ್ಲಿನ ಬಹುತೇಕ ಸಮಸ್ಯೆಗಳಿಗೆ ವಿದ್ಯೆ ಮತ್ತು ಉದ್ಯೋಗದ ಕೊರತೆಯೇ ಪ್ರಮುಖ ಕಾರಣವಾಗಿದೆ. ಇವುಗಳನ್ನು ಪರಿಹರಿಸಲು ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಾಗಿ ಹೇಳುತ್ತಿರುತ್ತದೆ. ಆದರೆ, ದುರದೃಷ್ಟವಶಾತ್ ಇವೆರಡೂ ಈಗಿನ ಅಗತ್ಯ ಮತ್ತು ಆವಶ್ಯಕತೆಗಳಿಗೆ ಅನುಗುಣವಾಗಿ ಆಗುತ್ತಿಲ್ಲ. ಇದಕ್ಕೆ ಕಾರಣವೆಂದರೆ ಮೊದಲನೆಯದಾಗಿ ಸರ್ಕಾರ ಹಮ್ಮಿಕೊಂಡಿರುವ ಅಭಿವೃದ್ಧಿ ಕಾರ್ಯಗಳೆಲ್ಲಾ ಪ್ರಾಮಾಣಿಕ ಪ್ರಯತ್ನ, ಪರಿಶ್ರಮ ಅಥವಾ ಅನುಷ್ಠಾನವನ್ನು ಕಾಣದಿರುವುದು, ಕೆಲವು ಮಂದಗತಿಯಲ್ಲಿ ಸಾಗುತ್ತಿರುವುದು, ಹಲವು ಘೋಷಣೆಗಳಾಗಿಯೇ ಉಳಿದಿರುವುದು ಹಾಗೂ ಹಲವು ದುರ್ಬಳಕೆಯಾಗುತ್ತಿರುವುದೆಂದು ಹೇಳಬಹುದು. ಎರಡನೆಯದಾಗಿ ಸರ್ಕಾರ ಮತ್ತು ಜನರಲ್ಲಿನ ಆಸಕ್ತಿ ಮತ್ತು ಇಚ್ಛಾಶಕ್ತಿಯ ಕೊರತೆಯೆಂದು ಹೇಳಬಹುದು. ಮೂರನೆಯದಾಗಿ ಜನ ಕೃಷಿ, ಮರಗೆಲಸ, ಪಶುಸಂಗೋಪನೆ ಮೊದಲಾದವುಗಳನ್ನು ತ್ಯಜಿಸುತ್ತಿರುವುದು.

ನಮ್ಮ ಯುವಜನಾಂಗ ಇಂದು ಪಡೆಯುತ್ತಿರುವ ಶಿಕ್ಷಣವಂತೂ ಜೀವನೋಪಾಯಕ್ಕೆ ಪೂರಕವಾಗಿಲ್ಲ. ಅಭ್ಯಸಿಸುವ ಎಷ್ಟೋ ವಿಷಯಗಳಿಗೂ, ಮುಂದೆ ನೌಕರಿಯಲ್ಲಿ ಮಾಡುವ ಕೆಲಸಕ್ಕೂ ಸಂಬಂಧವೇ ಇರುವುದಿಲ್ಲ. ಕೆಲವು ವೃತ್ತಿಪರ ಶಿಕ್ಷಣಗಳನ್ನು ಹೊರತುಪಡಿಸಿ ಉಳಿದಂತೆ ಶಿಕ್ಷಣ ಸಂಸ್ಥೆಗಳು ಗುಮಾಸ್ತರನ್ನು ಸೃಷ್ಟಿಸುವ ಕಾರ್ಖಾನೆಗಳಾಗಿವೆ. ಇದಕ್ಕೆ ನಮ್ಮ ಶಿಕ್ಷಣ ಪದ್ಧತಿಯಲ್ಲಿರುವ ಲೋಪದೋಷಗಳೇ ಕಾರಣ. ಯುವ ಜನತೆಯಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವ, ಸ್ವ-ಉದ್ಯೋಗಿಗಳಾಗುವಂತೆ ಪ್ರೇರೇಪಿಸುವ ಶಿಕ್ಷಣವನ್ನು ನಾವು ನೀಡುತ್ತಿಲ್ಲವಾದ್ದರಿಂದ ಹಾಗೂ ಸ್ವ-ಉದ್ಯೋಗಿಗಳಾಗಬಯಸುವವರಿಗೆ ಸರಿಯಾದ ಶಿಕ್ಷಣ, ಮಾರ್ಗದರ್ಶನ ಮತ್ತು ಆರ್ಥಿಕ ನೆರವು ಹಾಗೂ ಪ್ರೋತ್ಸಾಹಗಳನ್ನು ನೀಡಲು ವಿಫಲರಾಗಿರುವ ಕಾರಣ ನಿರುದ್ಯೋಗ ಸಮಸ್ಯೆ ಉಲ್ಬಣಗೊಂಡಿದೆ.



ಕೇಶಾಲಂಕಾರ

ಎಲ್ಲರಿಗೂ ಸರ್ಕಾರಿ ಕೆಲಸವನ್ನೇ ನೀಡಲು ಯಾವುದೇ ರಾಷ್ಟ್ರಕ್ಕೂ ಇದುವರೆವಿಗೂ ಸಾಧ್ಯವಾಗಿಲ್ಲ. ಇದಕ್ಕೆ ಜಗತ್ತಿನ ಮುಂದುವರಿದ ರಾಷ್ಟ್ರಗಳೂ ಹೊರತಾಗಿಲ್ಲ. ವಿಶ್ವದೆಲ್ಲೆಡೆ ನಿರುದ್ಯೋಗಿಗಳಿದ್ದಾರೆ. ಆದರೆ ಅವರುಗಳಾರೂ ಸರ್ಕಾರಿ ಕೆಲಸಗಳನ್ನೇ ನಿರೀಕ್ಷಿಸಿ ಕೂತಿಲ್ಲ; ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗವನ್ನಾರಂಭಿಸುತ್ತಾರೆ; ಇಲ್ಲವೇ ಸ್ವ-ಉದ್ಯೋಗಿಗಳಾಗಲು ಪ್ರಯತ್ನಿಸುತ್ತಾರೆ.

ಆದರೆ ಭಾರತೀಯರಾದ ನಾವು ವಿದ್ಯಾವಂತರೆಲ್ಲರಿಗೂ ನಮ್ಮ ಸರ್ಕಾರಗಳು ಉದ್ಯೋಗವನ್ನೊದಗಿಸಲು ಅಸಮರ್ಥವಾಗಿದೆಯೆಂಬ ನಗ್ನ ಸತ್ಯವನ್ನು ತಿಳಿದೂ ತಿಳಿದೂ (ಈಗಂತೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈಗಿರುವ ಹುದ್ದೆಗಳಲ್ಲಿ ಶೇ. ೫ರಷ್ಟನ್ನು ಕಡಿತಗೊಳಿಸಿವೆ. ಇನ್ನೂ ಶೇ. ೫-೧೦ ಹುದ್ದೆಗಳು ಕಡಿತಗೊಳಿಸುವ ಆಲೋಚನೆಯಲ್ಲಿವೆ. ಇಷ್ಟೇ ಸಾಲದೆಂಬಂತೆ ಹಲವಾರು ಇಲಾಖೆಗಳನ್ನು ಹಾಗೂ ಉದ್ದಿಮೆಗಳನ್ನು ಖಾಸಗೀಕರಣಗೊಳಿಸುತ್ತಿವೆ.) ಸರ್ಕಾರಿ ಕೆಲಸವನ್ನೇ ಹಂಬಲಿಸಿ, ಅದರ ನಿರೀಕ್ಷೆಯಲ್ಲಿ ಜೀವನವನ್ನೇ ವ್ಯರ್ಥವಾಗಿ ಕಳೆಯುತ್ತಿದ್ದೇವೆ. ಇಲ್ಲವೇ ಸರ್ಕಾರಿ ಹುದ್ದೆಯನ್ನು ಪಡೆಯಲು ಸಾಲಸೋಲಗಳನ್ನಾದರೂ ಮಾಡಿ ಕನಿಷ್ಠ ೫೦ ಸಾವಿರಗಳಿಂದ ಹುದ್ದೆಗೆ ತಕ್ಕಂತೆ ಲಕ್ಷ, ಎರಡು ಲಕ್ಷದವರೆಗೂ ಲಂಚ ನೀಡಲು ಪೈಪೋಟಿಯ ಮೇಲೆ ಮುಂದಾಗುತ್ತಿದ್ದೇವೆ.

ನಾವು ಪ್ರತಿಯೊಬ್ಬರೂ ಸರ್ಕಾರಿ ಕೆಲಸಕ್ಕೆ ಹರಸಾಹಸ ಮಾಡಲು ಕಾರಣ ಸ್ಪಷ್ಟ. ಸರ್ಕಾರಿ ಹುದ್ದೆಗಳಿಗಿರುವ ರಕ್ಷಣೆ, ಹೆಚ್ಚು ಪರಿಶ್ರಮವಿಲ್ಲದೆ ಪಡೆಯಬಹುದಾದ ಸಂಬಳ ಮತ್ತು ಸೌಲಭ್ಯಗಳು ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಈ ಹುದ್ದೆಗಳಲ್ಲಿ ಕೆಲವೆಡೆ ಸಂಬಳಕ್ಕಿಂತ ಹೆಚ್ಚಾಗಿ ಹರಿದುಬರುವ ಲಂಚವೇ ಕಾರಣ. ಆದರೆ, ಯುವ ಮಿತ್ರರು ಸರ್ಕಾರಿ ಕೆಲಸಕ್ಕಾಗಿ ನೀಡುವ ಲಂಚವನ್ನು ಬಂಡವಾಳ ಮಾಡಿಕೊಂಡು, ಶಿಫಾರಸ್ಸಿಗಾಗಿ ಅಲ್ಲಿ ಇಲ್ಲಿ ಅಲೆಯುವ ಶ್ರಮವನ್ನು ಸ್ವಯಂ ಉದ್ಯೋಗಕ್ಕೆ ವಿನಿಯೋಗಿಸಿದರೆ ನ್ಯಾಯವಾಗಿ ಆ ಸಂಬಳದ ಮತ್ತು ಲಂಚದ ಹಣಕ್ಕಿಂತಲೂ ಹೆಚ್ಚಿನ ಹಣವನ್ನು ಗಳಿಸಬಹುದೆಂಬ ಸತ್ಯವನ್ನು ಅರಿತಿಲ್ಲ. ಈ ಬಗ್ಗೆ ಅವರಾರೂ ಆಲೋಚನೆ ಅಥವಾ ಪ್ರಯತ್ನಗಳನ್ನು ಮಾಡದಿರಲು ಸ್ವ-ಉದ್ಯೋಗಕ್ಕೆ ಅಗತ್ಯವಿರುವ ಶಿಕ್ಷಣ, ಮಾರ್ಗದರ್ಶನ, ತರಬೇತಿ, ಆತ್ಮವಿಶ್ವಾಸ, ಧೈರ್ಯ, ಛಲ ಮತ್ತು ಆರ್ಥಿಕ ನೆರವಿನ ಕೊರತೆಗಳು ಕಾರಣವಿರಬಹುದು.

ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ವ-ಉದ್ಯೋಗಿಗಳಾಗಬಯಸುವವರಿಗಾಗಿ ರೋಜ್‌ಗಾರ್ ಯೋಜನೆ ಮತ್ತು ಸ್ವ-ಉದ್ಯೋಗ ಯೋಜನೆಗಳಂತಹ ಅನೇಕ ಯೋಜನೆಗಳನ್ನು ಜಾರಿಗೆ ತಂದಿವೆ. ಆದರೆ, ಅವುಗಳಿಂದ ಆಗಿರುವ ಪ್ರಯೋಜನ ಮತ್ತು ಪ್ರಗತಿಗಳತ್ತ ಒಮ್ಮೆ ಅವಲೋಕನದ ನೋಟ ಬೀರಿದರೆ ಫಲಿತಾಂಶ ನಿರೀಕ್ಷಿತ ಮಟ್ಟದಲ್ಲಿ ಆಗದಿರುವುದು ಕಂಡುಬರುತ್ತದೆ. ಏಕೆಂದರೆ, ಈ ಯೋಜನೆಗಳೆಲ್ಲಾ ಅವುಗಳಿಗೆ ನಿಗದಿಗೊಳಿಸಿರುವ ಅಥವಾ ಮೀಸಲಿಟ್ಟಿರುವ ಹಣ ಮತ್ತು ಅನುದಾನಗಳನ್ನು ಕಾಟಾಚಾರಕ್ಕೆ ವ್ಯಯಿಸಿ, ಕಾಗದದ ಮೇಲೆ ಮಾತ್ರ ಪ್ರಗತಿ ತೋರಿ ಕೈತೊಳೆದುಕೊಳ್ಳುವ 'ಟಾರ್ಗೆಟ್ ಓರಿಯೆಂಟೆಡ್' ಯೋಜನೆಗಳಾಗುತ್ತಿವೆ! ಅಂದರೆ, 'ಗುಳುಂ' ಯೋಜನೆಗಳಾಗುತ್ತಿವೆ. ಸ್ವ-ಉದ್ಯೋಗದ ಸೋಗಿನಲ್ಲಿ ಸಾಲ ಪಡೆಯುವ ಆ ಭೂಪರು ಯಾವುದೇ ಉದ್ಯೋಗವನ್ನೂ ಪ್ರಾರಂಭಿಸದೆ, ಸಾಲಕ್ಕೆ ಬಡ್ಡಿಯನ್ನು ಕಟ್ಟುವುದಿರಲಿ, ಅಸಲನ್ನೂ ಮರುಪಾವತಿಸದೆ ಗೋವಿಂದಾ ಎನ್ನಿಸಿಬಿಡುತ್ತಾರೆ. ಇದರಿಂದ 'ಕೊಟ್ಟವನು ಕಳೆದುಕೊಂಡ, ಪಡೆದವನು



ದಾಹಪರಿಹಾರ



ಕೃಷಿ ಕೆಲಸ



*ಆಹಾರ ಆತಿಥ್ಯ*

ಪರಾರಿಯಾದ' ಎಂಬಂತಾಗಿದೆ.

ಸ್ವ-ಉದ್ಯೋಗಿಯಾಗಬಯಸುವವರಿಗೆ ನಮ್ಮಲ್ಲಿ ಸಾಕಷ್ಟು ಅವಕಾಶಗಳಿವೆ. ತರಬೇತಿ ನೀಡಿ ಆರ್ಥಿಕ ನೆರವಿನೊಂದಿಗೆ ಮಾರ್ಗದರ್ಶನ ಮಾಡುವ ಅನೇಕ ಸಂಘ ಸಂಸ್ಥೆಗಳಿವೆ. ಅಂತಹವುಗಳಲ್ಲಿ ಕೆನರಾ ಮತ್ತು ಸಿಂಡಿಕೇಟ್ ಬ್ಯಾಂಕ್‌ಗಳ ಸಹಭಾಗಿತ್ವದೊಡನೆ ಧರ್ಮಸ್ಥಳ ಧರ್ಮಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಶನಲ್ ಟ್ರಸ್ಟ್‌ನ ವತಿಯಿಂದ ನಡೆಯುತ್ತಿರುವ ಗ್ರಾಮೀಣಾಭಿವೃದ್ಧಿ ಮತ್ತು ಸ್ವ-ಉದ್ಯೋಗ ತರಬೇತಿ ಕೇಂದ್ರ, ಜೆ.ಎಸ್.ಎಸ್. ವಿದ್ಯಾಸಂಸ್ಥೆಯವರ ಸ್ವ-ಉದ್ಯೋಗ ತರಬೇತಿ ಕೇಂದ್ರವನ್ನು ಪ್ರಮುಖವಾಗಿ ಹೆಸರಿಸಬಹುದು. ಇವು ಆಗಿಂದಾಗ್ಗೆ ಯುವಕ ಯುವತಿಯರಿಗಾಗಿ ಹಾಗೂ ಗ್ರಾಮೀಣ ಜನರಿಗಾಗಿ ವಿವಿಧ ರೀತಿಯ ಅಂದರೆ, ಸ್ಕ್ರೀನ್ ಪ್ರಿಂಟಿಂಗ್, ಛಾಯಾಗ್ರಹಣ, ವಿಡಿಯೋ ಕವರೇಜ್, ಟಿ.ವಿ. ರಿಪೇರಿ, ಟೈಲರಿಂಗ್, ಗಂಧದ ಕಡ್ಡಿ ತಯಾರಿಕೆ, ರೇಷ್ಮೆ ಸಾಕಾಣಿಕೆ, ಹೈನುಗಾರಿಕೆ, ದ್ವಿಚಕ್ರ ವಾಹನಗಳ ರಿಪೇರಿ, ಮೋಟಾರ್ ರೀವೈಂಡಿಂಗ್, ಬುಕ್ ಬೈಂಡಿಂಗ್ ಮೊದಲಾದ ವಿಷಯಗಳಲ್ಲಿ ಪ್ರಾಯೋಗಿಕವಾಗಿ ತರಬೇತನ್ನು ನೀಡುತ್ತಾ ಬಂದಿವೆ. ಈ ಕೇಂದ್ರಗಳಲ್ಲಿ ತರಬೇತಿ ಪಡೆದ ಸಾವಿರಾರು ಜನ ಸ್ವ-ಉದ್ಯೋಗಿಗಳಾಗಿ, ಸ್ವತಂತ್ರವಾಗಿ ಸಂತೃಪ್ತಿಯ ಜೀವನ ನಡೆಸುತ್ತಿದ್ದಾರೆ. ಕೆಲವರಂತೂ ಇತರರಿಗೂ ಉದ್ಯೋಗ ನೀಡಿರುವುದೇ ಅಲ್ಲದೆ, ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ.

'ಉದ್ಯೋಗಂ ಪುರುಷ ಲಕ್ಷಣಂ' ಎಂಬ ಒಂದು ಕಾಲವಿತ್ತು. ಆದರೀಗ ಕುಟುಂಬದ ಅಗತ್ಯಗಳು ಪೂರೈಕೆಯಾಗಬೇಕಾದರೆ ಕೇವಲ ಪುರುಷನ ಗಳಿಕೆಯೇ ಸಾಲದಾಗಿರುವುದರಿಂದ ಸ್ತ್ರೀಯರು ಅಂದರೆ ಮಡದಿಯರೂ ಏನನ್ನಾದರೂ ವೃತ್ತಿಯನ್ನು ಅವಲಂಬಿಸುವುದು ಅನಿವಾರ್ಯವಾಗಿದೆ. ಆದ್ದರಿಂದ 'ಉದ್ಯೋಗಂ ಸರ್ವರ ಲಕ್ಷಣಂ' ಆಗಿದೆ. ಆದರೆ, ಸ್ವ-ಉದ್ಯೋಗದ ಬಗ್ಗೆ ಬಹುತೇಕ ಜನರಿಗೆ ಸರಿಯಾದ ಅರಿವು ಮತ್ತು ಕಲ್ಪನೆಯೇ ಇಲ್ಲದಾಗಿದೆ. ಸ್ವ-ಉದ್ಯೋಗವೆಂದರೆ ವಿದ್ಯೆ ಮತ್ತು ಉದ್ಯೋಗವಿಲ್ಲದ ಉಂಡಾಡಿ ಗುಂಡಗಳು ಯಾರದೋ ಒತ್ತಡಕ್ಕೆ ಇಲ್ಲವೇ ಬದುಕಲು ಅವರಿಗೆ ಬೇರೆ ಮಾರ್ಗವೇ ಇಲ್ಲದಾಗ ಎಲ್ಲೋ ಅಲ್ಲೊಂದಷ್ಟು ಇಲ್ಲೊಂದಷ್ಟು ಸಾಲಸೋಲ ಮಾಡಿ ಬಂಡವಾಳ ಹೂಡಿ ಯಾವುದೋ ಒಂದು ಉದ್ಯೋಗವನ್ನು ಪ್ರಾರಂಭಿಸುವುದೆಂದು ಅಥವಾ ಹಣವಂತರು ಕಾಲಹರಣ ಮಾಡಲು ಉದ್ಯಮವನ್ನು ಮಾಡುತ್ತಾರೆಂಬುದು ಸಾಮಾನ್ಯವಾಗಿ ಎಲ್ಲರ ಭಾವನೆ ಅಥವಾ ಅಭಿಪ್ರಾಯ.

ಅತೀ ಬಡವರು ಸ್ವ-ಉದ್ಯೋಗದ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಯಾವುದೇ ರೀತಿಯ ಸಂಕೋಚ, ಕೀಳರಿಮೆಯನ್ನು ಪ್ರದರ್ಶಿಸದೆ ಬೆಳಗಿನಿಂದ ಸಂಜೆಯವರೆಗೂ ಮೈ ಕೈ ಮುರಿದು ದುಡಿದು ಕೂಲಿಯಾಗಿ ದಿನಕ್ಕೆ ಕನಿಷ್ಠ ನೂರನ್ನೋ ಗರಿಷ್ಠ ಇನ್ನೂರು ಮುನ್ನೂರನ್ನೋ ಸಂಪಾದಿಸಿ ಅಂದಿನಂದಿನ ಖರ್ಚು ವೆಚ್ಚಗಳನ್ನು ಸರಿದೂಗಿಸಿಕೊಂಡು ಹಾಯಾಗಿರುತ್ತಾರೆ. ಹಾಗೇ ಶ್ರೀಮಂತರುಗಳೂ ಸಹ ಉದ್ಯೋಗಕ್ಕಾಗಿ ಅಷ್ಟಾಗಿ ತಲೆ ಕೆಡಿಸಿಕೊಳ್ಳುವುದಿಲ್ಲ. ಉದ್ಯೋಗ ಬಾಧಿತರೆಂದರೆ ಮಧ್ಯಮ ವರ್ಗದವರು ಹಾಗೂ ಬಡವರು. ಇದಕ್ಕೆ ಅವರುಗಳೇ ಸೃಷ್ಟಿಸಿಕೊಂಡಿರುವ ಒಂದು ರೀತಿಯ ಪ್ರತಿಷ್ಠೆಯ ಪರಿಸ್ಥಿತಿಯೇ ಕಾರಣ. ಇವರುಗಳು ಇತ್ತ ಶ್ರೀಮಂತರೂ ಅಲ್ಲ, ಅತ್ತ ಒಣ ಪ್ರತಿಷ್ಠೆಯನ್ನು ಬದಿಗಿಟ್ಟು ಕೂಲಿನಾಲಿ ಕೆಲಸವನ್ನೂ ಮಾಡುವುದಿಲ್ಲ. ಇವರುಗಳ ಬಳಿ ಸರ್ಕಾರಿ ಕೆಲಸಕ್ಕೆ ಲಂಚ ನೀಡಲು ಹಣವೂ ಇರುವುದಿಲ್ಲ. ಮಂತ್ರಿಗಳ ಶಿಫಾರಸ್ಸೂ ಇರುವುದಿಲ್ಲ. ಹೋಗಲಿ, ಅದು ಬೇಡವೇ ಬೇಡವೆಂದು ಸರ್ಕಾರಿ ನೌಕರಿಯ ಆಸೆಯನ್ನು ಕೈಬಿಟ್ಟು ಸ್ವಂತ ಉದ್ಯೋಗವನ್ನು ಪ್ರಾರಂಭಿಸುವ ಆಲೋಚನೆ ಮತ್ತು ಧೈರ್ಯವನ್ನೂ ಮಾಡುವುದಿಲ್ಲ.

ಈ ಬಗ್ಗೆ ಯುವಜನತೆ ಗಂಭೀರವಾದ ಚಿಂತನೆ ನಡೆಸಿ ಸ್ವ-ಉದ್ಯೋಗಕ್ಕೆ ಹೆಚ್ಚಿನ ಮಹತ್ವವನ್ನು ನೀಡುವುದರ ಮೂಲಕ ತಮ್ಮ ಹಾಗೂ ತಮ್ಮ ಕುಟುಂಬಗಳ ಮತ್ತು ರಾಷ್ಟ್ರದ ಏಳಿಗೆಗೆ ರೂವಾರಿಗಳಾಗಬೇಕಾದ ಪರ್ವಕಾಲ ಇದಾಗಿದೆ. ಈ ನಿಟ್ಟಿನಲ್ಲಿ ಈ ವಯಸ್ಸಿನಲ್ಲಿ ಏನೂ ಪ್ರಯತ್ನವನ್ನು ಮಾಡದೆ ಜಡತ್ವವನ್ನೇ ಮುಂದುವರಿಸಿಕೊಂಡು ಹೋಗುವುದಾದಲ್ಲಿ ತಾರುಣ್ಯ ಕಳೆದ ಮೇಲೆ ಸ್ವದುಡಿಮೆಯ ಧೈರ್ಯ, ಉತ್ಸಾಹ, ಶಕ್ತಿಗಳೆಲ್ಲಾ ಕುಂದುವುದರಿಂದ ಖಂಡಿತವಾಗಿಯೂ ಜೀವನ ದುರ್ಭರವೆನಿಸದಿರದು. ಆಗ ಪಶ್ಚಾತ್ತಾಪಪಟ್ಟರೆ ಪ್ರಯೋಜನವಾಗುವುದಿಲ್ಲ. ಯಾರು ಧೈರ್ಯದಿಂದ ಮುನ್ನುಗ್ಗುತ್ತಾರೋ ಅವರಿಗೆ ಜಯ ಮತ್ತು ಯಶಸ್ಸು ಖಂಡಿತವೆಂದು ಸ್ವಾಮಿ ವಿವೇಕಾನಂದರು ಭರವಸೆಯನ್ನು ನೀಡಿದ್ದಾರೆ.



*ಟಿ.ವಿ. ರಿಪೇರಿ ಕಲಿಕೆಯಲ್ಲಿ ತಲ್ಲೀನರಾಗಿರುವ ತರುಣರು*

ಸ್ವತಂತ್ರ ದುಡಿಮೆ, ಸ್ವತಂತ್ರ ಜೀವನ, ಶ್ರಮಕ್ಕೆ ತಕ್ಕ ಪ್ರತಿಫಲ ಹಾಗೂ ಜೀವನವಿಡೀ ಸಂತೃಪ್ತಿಯ ಬದುಕು, ಅದರ ಮೂಲಕ ದೇಶದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ನೆರವಾಗುವುದು ಸ್ವ-ಉದ್ಯೋಗದ ಧ್ಯೇಯೋದ್ದೇಶ. ಅಷ್ಟೇ ಅಲ್ಲ ವಿಶ್ವ ಸಂದೇಶ ಕೂಡ.

**ಸ್ವ-ಉದ್ಯೋಗದ ಲಾಭಗಳು**

ಸರ್ಕಾರಿ ನೌಕರಿಯಲ್ಲಿರುವವರಿಗೆ ಮೇಲಧಿಕಾರಿಗಳ ದಬಾವಣೆ, ಅಧಿಕಾರ ಚಲಾವಣೆ, ಕಿರುಕುಳ, ಮೂರು ವರ್ಷಕ್ಕೊಮ್ಮೆ ವರ್ಗಾವಣೆ ಮೊದಲಾದ ಬವಣೆಗಳಿರುತ್ತವೆ. ಸ್ವ-ಉದ್ಯೋಗಿಗಳಿಗೆ ಇವುಗಳಾವುವೂ ಇರುವುದಿಲ್ಲ. ಸರ್ಕಾರಿ ನೌಕರರು ಎಷ್ಟೇ ದುಡಿದರೂ ಸಂಬಳವೇನೂ ಹೆಚ್ಚಾಗುವುದಿಲ್ಲ. ಆದರೆ, ಸ್ವ-ಉದ್ಯೋಗಿ ಎಷ್ಟು ದುಡಿಯುತ್ತಾನೋ ಅಷ್ಟು ಗಳಿಸುತ್ತಾನೆ. ಅಲ್ಲದೆ ಪ್ರತಿದಿನವೂ ಸಂಪಾದನೆ ಇರುವುದರಿಂದ ಸರ್ಕಾರಿ ನೌಕರರಂತೆ ಸಂಬಳದ ದಿನಗಳನ್ನು ಎಣಿಸಬೇಕಾಗಿಲ್ಲ. ಸರ್ಕಾರಿ ನೌಕರರು ಏನು ಮಾಡಬೇಕಾದರೂ ಅಧಿಕಾರಿಗಳ ಆಜ್ಞೆಗೆ ಕಾಯಬೇಕು, ಅವರ ಮರ್ಜಿಯಂತೆ ನಡೆದುಕೊಳ್ಳಬೇಕು. ಆತ ಯಾವುದೇ ನಿರ್ಣಯಗಳನ್ನು ತಾನೇ ತೆಗೆದುಕೊಳ್ಳಲು ಅಶಕ್ತ. ಆದರೆ ಸ್ವ-ಉದ್ಯೋಗಿ ಯಾರ ಮರ್ಜಿಗೂ ಕಾಯದೆ, ಯಾರನ್ನೂ ಕೇಳದೆ ಸ್ವತಂತ್ರವಾಗಿ ನಿರ್ಣಯಗಳನ್ನು ಕೈಗೊಳ್ಳಬಹುದು. ಸರ್ಕಾರಿ ನೌಕರನಿಗೆ ಮತ್ತೊಬ್ಬರಿಗೆ ಉದ್ಯೋಗ ನೀಡುವ ಸಾಮರ್ಥ್ಯವಿರುವುದಿಲ್ಲ. ಆದರೆ, ಸ್ವ-ಉದ್ಯೋಗಿ



*"ನಮ್ಮಗಳ ಕುಟುಂಬ ನಿರ್ವಹಣೆಯಲ್ಲಿ ನಮ್ಮ ಪಾತ್ರವೂ ಇದೆ, ಹಾಗಾಗಿ ಈ ತರಬೇತಿ" ಎನ್ನುವರು ಈ ಮಹಿಳಾ ಶಿಬಿರಾರ್ಥಿಗಳು*

ಅನೇಕರಿಗೆ ಉದ್ಯೋಗ ನೀಡಿ ಅವರ ಕುಟುಂಬದ ಸ್ಥಿರತೆಗೆ ನೆರವಾಗಬಹುದಾಗಿದೆ. ಸರ್ಕಾರಿ ನೌಕರ ೫೮ ವರ್ಷಗಳಾಗುತ್ತಿದ್ದಂತೆ ಇಷ್ಟವಿರಲಿ ಇಲ್ಲದಿರಲಿ ನಿವೃತ್ತನಾಗಲೇಬೇಕು. ಆದರೆ ಸ್ವಉದ್ಯೋಗಿ ಶಕ್ತಿ ಸಾಮರ್ಥ್ಯವಿರುವವರೆಗೂ ದುಡಿಯಬಹುದು. ಸರ್ಕಾರಿ ನೌಕರ ಏನೇ ಸಾಧನೆ ಮಾಡಿದರೂ ಅದು ಅಧಿಕಾರಿಯ ಇಲ್ಲವೇ ಸರ್ಕಾರದ ಸಾಧನೆಯಾಗುತ್ತದೆಯೇ ಹೊರತು ಸ್ವ-ಉದ್ಯೋಗಿಯಂತೆ ಸ್ವಂತ ಸಾಧನೆ ಆಗಲಾರದು. ಹೀಗೆ ಸ್ವ-ಉದ್ಯೋಗಕ್ಕೆ ಹಾಗೂ ಸರ್ಕಾರಿ ನೌಕರಿಗೆ ಇರುವ ವ್ಯತ್ಯಾಸ ಮತ್ತು ಲಾಭನಷ್ಟಗಳನ್ನು ಪಟ್ಟಿಮಾಡುತ್ತಾ ಹೋಗಬಹುದು. ಒಟ್ಟು ಜನಸಂಖ್ಯೆಯ ಶೇ. ೫-೧೦ರಷ್ಟು ಜನ ಮಾತ್ರ ಸರ್ಕಾರಿ ಸೇವೆಯಲ್ಲಿದ್ದುಕೊಂಡು ಜೀವನ ಸಾಗಿಸುತ್ತಿದ್ದರೆ, ಉಳಿದವರು ಸ್ವಂತ ದುಡಿಮೆಯಿಂದ ಬದುಕುತ್ತಿದ್ದಾರೆ. ಇದರಿಂದ ಸ್ವಂತ ದುಡಿಮೆ ಮಾಡಲು ಯಾರೂ ಹಿಂಜರಿಯಬೇಕಾಗಿಲ್ಲವೆಂದು ವೇದ್ಯವಾಗುತ್ತದೆ.

ಹೌದು, ಸ್ವ-ಉದ್ಯೋಗದ ಹಾದಿ ಅಷ್ಟು ಸುಗಮವಾದುದಲ್ಲ. ಅದರಲ್ಲಿ ಬಹಳ ಕಷ್ಟಗಳಿವೆ ಹಾಗೂ ಕೆಲ ಸಂದರ್ಭಗಳಲ್ಲಿ ನಷ್ಟವನ್ನೂ ಅನುಭವಿಸಬೇಕಾಗುತ್ತದೆ. ಹೀಗೆಂದಾಕ್ಷಣ ಎಲ್ಲಾ ಕಾಲದಲ್ಲೂ ಕಷ್ಟನಷ್ಟವನ್ನು ಎದುರಿಸಬೇಕಾಗುತ್ತದೆಂಬುದಾಗಿ ಭಾವಿಸುವುದು ಸರ್ವಥಾ ಸರಿಯಲ್ಲ. ಪ್ರಾರಂಭದಲ್ಲಿ ಪ್ರತಿಯೊಬ್ಬರಿಗೂ (ಸರ್ಕಾರಿ ನೌಕರರಿಗೂ) ಕಷ್ಟವೆನ್ನಿಸದಿರದು. ಅದು ಸಹಜ. ಹಾಗೇ ಕೆಲವು ಸಂದರ್ಭಗಳಲ್ಲಿ ಪರಿಸ್ಥಿತಿಗೆ ಅನುಗುಣವಾಗಿ ಅಥವಾ ಕೆಲವು ತಪ್ಪುಗಳಿಂದಾಗಿ ನಷ್ಟ ಸಂಭವಿಸಬಹುದು. ಆಗ ಧೃತಿಗೆಡದೆ ಅದನ್ನು ಸರಿಪಡಿಸಿಕೊಳ್ಳಬಹುದು.

ಸ್ವ-ಉದ್ಯೋಗಿಯಾಗಬಯಸುವವರಿಗೆ ಇರಲೇಬೇಕಾದ ಮೂಲ ಅರ್ಹತೆಗಳೆಂದರೆ ಈ ಕೆಲಸ ನನ್ನಿಂದ ಸಾಧ್ಯ, ಇದರಲ್ಲಿ ನಾನು ಖಂಡಿತ ಯಶಸ್ವಿಯಾಗುತ್ತೇನೆಂಬ ಆತ್ಮವಿಶ್ವಾಸ, ಅದನ್ನು ಸಾಧಿಸಲು ಬೇಕಾದ ಛಲ, ಹಿಡಿದ ಕಾರ್ಯದಲ್ಲಿ ಮುನ್ನುಗ್ಗುವ ಪ್ರವೃತ್ತಿ, ಕಷ್ಟ ನಷ್ಟಗಳಿಗೆ ಎದೆಗುಂದದ ಧೈರ್ಯ, ಸಾರ್ವಜನಿಕ ಸಂಪರ್ಕ, ಗ್ರಾಹಕರುಗಳೊಡನೆ ಉತ್ತಮ ಬಾಂಧವ್ಯ, ವೃತ್ತಿಯಲ್ಲಿ ಶ್ರದ್ಧೆ ಮತ್ತು ಪ್ರಾಮಾಣಿಕತೆ. ಇವಿಷ್ಟಿದ್ದರೆ ಉಳಿದ ಅನುಭವ, ಬಂಡವಾಳಗಳೆಲ್ಲಾ ತಾವಾಗಿಯೇ ಲಭ್ಯವಾಗುತ್ತವೆ.

**ಸ್ವ-ಉದ್ಯೋಗಿಗಳಾಗಲಿಚ್ಛಿಸುವವರಿಗೆ ಕೆಲವು ಸಲಹೆ-ಸೂಚನೆಗಳು**

೧. ಸ್ವಂತ ಉದ್ಯೋಗ ಪ್ರಾರಂಭಿಸುವ ಹುಮ್ಮಸ್ಸಿನಲ್ಲಿ ಯಾವುದೇ ದುಡುಕಿನ ನಿರ್ಧಾರಗಳನ್ನು ಕೈಗೊಳ್ಳುವುದು ಜಾಣತನವೆನಿಸದು. ೨. ಪಾಲುಗಾರಿಕೆ ಉದ್ಯೋಗಕ್ಕೆ ಖಂಡಿತ ಕೈಹಚ್ಚಬೇಡಿ. ಪ್ರಾರಂಭದಲ್ಲಿ ಎಲ್ಲವೂ ಚೆನ್ನಾಗಿರುತ್ತದೆ. ಆದರೆ, ಲಾಭ ನಷ್ಟಗಳ ಸಂದರ್ಭದಲ್ಲಿ ಸಮಸ್ಯೆಗಳು ಉದ್ಭವಿಸಿ ವ್ಯಾಪಾರ ವಹಿವಾಟೇ ಅಲ್ಲದೆ, ಸ್ನೇಹ, ಸಂಬಂಧಗಳೂ ಹಾಳಾಗುತ್ತವೆ. ೩. ನೀವು ಪ್ರಾರಂಭಿಸಲಿರುವ ಉದ್ಯೋಗ ಆಧುನಿಕ ಜಗತ್ತಿನ ಜನರ ಬೇಡಿಕೆಗಳನ್ನು ಪೂರೈಸುವಂತಿರಲಿ ಹಾಗೂ ಇನ್ನೊಬ್ಬರನ್ನು ಅನುಕರಣೆ ಮಾಡಬೇಡಿ. ಜೊತೆಗೆ ನಿಮ್ಮ ಉದ್ಯಮ ಕೇಂದ್ರ ಬೇಡಿಕೆ ಇರುವೆಡೆ ಇರಲಿ ಹಾಗೂ ಅಂತಹದೇ ಉದ್ಯಮದಿಂದ ಕನಿಷ್ಠ ಒಂದು ಕಿ.ಮೀ. ದೂರದಲ್ಲಿರುವಂತೆ ನೋಡಿಕೊಳ್ಳಿ. ೪. ಉದ್ಯೋಗ ಪ್ರಾರಂಭಿಸಲು ಬ್ಯಾಂಕಿನಿಂದ ಸಾಲದ ಅಗತ್ಯವಿದ್ದರೆ ಮಧ್ಯವರ್ತಿಗಳನ್ನು ಆಶ್ರಯಿಸದೆ, ಅಗತ್ಯವಾಗಿರುವ ಉದ್ಯೋಗದ ಅಂದಾಜು ವೆಚ್ಚ, ಆದಾಯ, ಸಾರ್ವಜನಿಕವಾಗಿ ಅದಕ್ಕಿರುವ ಬೇಡಿಕೆ ಹಾಗೂ ಉದ್ಯೋಗ ಪ್ರಾರಂಭಿಸಲಿರುವ ಸ್ಥಳ ಮುಂತಾದ ಮಾಹಿತಿಗಳ ವರದಿ ಮತ್ತು ಪಟ್ಟಿಗಳೊಡನೆ ನೀವೇ ನೇರವಾಗಿ ಬ್ಯಾಂಕಿನ ಅಧಿಕಾರಿಗಳನ್ನು ಸಂಪರ್ಕಿಸಿ. ಅವರೊಡನೆ ಮಾತನಾಡುವಾಗ ಅಥವಾ ಅವರು ಕೇಳುವ ಪ್ರಶ್ನೆಗಳಿಗೆ ಉತ್ತರಿಸುವಾಗ ಗಡಬಡಿಸದೆ, ಪೆಚ್ಚಾಗದೆ, ಭಯಪಡದೆ, ಧೈರ್ಯ ಮತ್ತು ಆತ್ಮವಿಶ್ವಾಸಗಳಿಂದ ಸ್ಪಷ್ಟವಾಗಿ ಮಾತನಾಡಿ ಅವರಲ್ಲಿ ನಿಮ್ಮ ಬಗ್ಗೆ ಭರವಸೆ ಮೂಡಿಸಲು ಪ್ರಯತ್ನಿಸಿ. ೫. ಬ್ಯಾಂಕಿನಿಂದ ಪಡೆದ ಸಾಲವನ್ನು ಸಕಾಲದಲ್ಲಿ ಪ್ರಾಮಾಣಿಕವಾಗಿ ಮರುಪಾವತಿ ಮಾಡುವುದರಿಂದ ಉದ್ಯಮವನ್ನು ವಿಸ್ತರಿಸಲು ಅವರಿಂದ ಮತ್ತಷ್ಟು ಸಾಲದ ಅಗತ್ಯವಿದ್ದರೆ ಅದನ್ನು ಸುಲಭವಾಗಿ ಪಡೆಯಬಹುದು. ೬. ನೀವು ಬಿಕರಿ ಮಾಡುವ ವಸ್ತುಗಳ ಅಥವಾ ಕೆಲಸದ ಗುಣಮಟ್ಟವನ್ನು ಕಾದುಕೊಳ್ಳಿ. ಇದೇ ಯಶಸ್ಸಿನ ಗುಟ್ಟು. ಆಗ ನೀವು ಯಾವುದೇ ಕೊಂಪೆಯಲ್ಲಿದ್ದರೂ ಗ್ರಾಹಕರು ನಿಮ್ಮನ್ನು ಹುಡುಕಿಕೊಂಡು ಬರುತ್ತಾರೆ. ೭. ಪ್ರತಿಯೊಂದು ಕ್ಷೇತ್ರದಲ್ಲೂ ಸ್ಪರ್ಧೆಯಿರುವುದರಿಂದ ಅತೀ ಲಾಭದ ನಿರೀಕ್ಷೆಯಿಟ್ಟುಕೊಳ್ಳದೆ ಕಡಿಮೆ ಲಾಭಕ್ಕೆ ಉತ್ತಮ ಪದಾರ್ಥ ಅಥವಾ ಸೇವೆಯನ್ನು ನೀಡುವುದು ಅನಿವಾರ್ಯ. ೮. ಖರ್ಚು ವೆಚ್ಚ, ಲಾಭ ನಷ್ಟ, ಖರೀದಿ ಮತ್ತು ಮಾರಾಟ ಹಾಗೂ ಆದಾಯಕ್ಕೆ ಸಂಬಂಧಪಟ್ಟ ಲೆಕ್ಕಗಳನ್ನು ಆಯಾಯಾ ದಿನಗಳಂದೇ ಅಚ್ಚುಕಟ್ಟಾಗಿ ಬರೆದಿಡುವುದರಿಂದ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆಗಳಿಗೆ ಸಂಬಂಧಪಟ್ಟ ವ್ಯವಹಾರಗಳನ್ನು ಸಮರ್ಪಕವಾಗಿ ನಿರ್ವಹಿಸಬಹುದು. ಎಲ್ಲಾ ಇಲಾಖೆಗಳೊಡನೆ ನೀವೇ ನೇರವಾಗಿ ವ್ಯವಹರಿಸಿದರೆ, ಸಾಕಷ್ಟು ವಿಚಾರಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಮಧ್ಯವರ್ತಿಗಳ ಖರ್ಚನ್ನೂ ಉಳಿಸಬಹುದು.


**ಸ್ವಾಮಿ ರಾಮಕೃಷ್ಣಾರ್ಪಣಾನಂದ**
೩೩೦, ಶ್ರೀಕಂಠಮಂಟಪ ಬ್ಲಾಕ್, ನಂಜನಗೂಡು-೫೭೧ ೩೦೧


## ಸಾದರ ಸ್ವೀಕಾರ

**ಯಾಮಿನಿ**(ಕಾದಂಬರಿ) *ಸೋಸಲೆ ಗಂಗಾಧರ*
**ಪುಟ : ೧೩೬** **ಬೆಲೆ : ರೂ. ೧೦೦**
**ಅಭಿರುಚಿ ಪ್ರಕಾಶನ**, ನಂ. ೪, ೨ನೇ ಅಂತಸ್ತು
ನಗರ ಕ.ರಾ.ರ.ಸಾ.ಸಂ. ಕಟ್ಟಡ
ಕೆ. ಆರ್. ಸರ್ಕಲ್, ಮೈಸೂರು-೧

**ಹೊಡಿಬೇಡಿ ದಮ್ಮಯ್ಯ** *ಸತ್ಯವತಿ*
(ಹಾಸ್ಯಲೇಖನಗಳು)
**ಪುಟ : ೧೧೦** **ಬೆಲೆ : ರೂ. ೫೦**

**ತಾರೆಗಳ ಪಿಸುಮಾತು** *ವಾಸಂತಿ ಅಂಬಲಪಾಡಿ*
(ಕವನ ಸಂಕಲನ)
**ಪುಟ : ೪೬** **ಬೆಲೆ : ರೂ. ೨೫**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಸುಮಂತ ಪ್ರಕಾಶನ**, ಉಪ್ಪಿನ ಕೋಟೆ, ಬ್ರಹ್ಮಾವರ.

**ರೆಕ್ಕೆ-ಗೂಡು-ಆಕಾಶ** (ಕವನ ಸಂಕಲನ)
*ಸಿ. ವಿ. ಶೇಷಾದ್ರಿ ಹೊಳವನಹಳ್ಳಿ*
**ಪುಟ : ೧೫೭** **ಬೆಲೆ : ರೂ. ೪೦**
**ಕಮಲ ಪ್ರಕಾಶನ**, ರಾಮಮಂದಿರ
ಹೊಳವನಹಳ್ಳಿ-೫೭೨೧೨೧

**ಜಾಲಿಯ ಹೂವು** *ಪ್ರಕಾಶ್ ಗಂಗಲವಾಯಿಪಾಳ್ಯಂ*
(ಕವನಸಂಕಲನ)
**ಪುಟ : ೭೮** **ಬೆಲೆ : ರೂ. ೬೦**
**ಶ್ರಮಸಂಸ್ಕೃತಿ ಪ್ರಕಾಶನ**, ತುಮಕೂರು-೫೭೨೧೦೨

**ಬುದ್ಧನೆಡೆಗೆ**(ಲೇಖನಸಂಗ್ರಹ)
*ಡಾ॥ ಎಚ್. ಟಿ. ಪೋತೆ*
**ಪುಟ : ೯೦** **ಬೆಲೆ : ರೂ. ೧೦೦**

**ಶ್ರೀರಾಮಾಯಣ ಮಹಾನ್ವೇಷಣಂ-ದರ್ಶನ**
(ಲೇಖನ ಸಂಗ್ರಹ) *ಸಂ: ಡಾ॥ ಎಚ್. ಟಿ. ಪೋತೆ*
**ಪುಟ : ೧೦೬** **ಬೆಲೆ : ರೂ. ೮೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ತಿಪ್ಪಣಂಬು ಪ್ರಕಾಶನ**, ಹಂಜಗಿ, ತಾ. ಇಂಡಿ. ಜಿಲ್ಲಾ ಬಿಜಾಪುರ

**ಚಂಡಮಾರುತ** *ಎಂ. ವೆಂಕಟಸ್ವಾಮಿ*
(ವೈಜ್ಞಾನಿಕ ಲೇಖನಗಳು)
**ಪುಟ : ೬೮** **ಬೆಲೆ : ರೂ. ೪೦**
**ನಿಡಸಾಲೆ ಪ್ರಕಾಶನ**, ನಂ. ೧೩೪, ೮ನೇ ಕ್ರಾಸ್, ಗೋವಿಂದರಾಜನಗರ, ಬೆಂಗಳೂರು-೫೬೦೦೪೦

**ಮನೆಯಲ್ಲಿ ಬೆಳದಿಂಗಳು** (ಮಕ್ಕಳ ಸಚಿತ್ರ ಕವನ ಸಂಕಲನ) *ಜೆ. ಕಲೀಂಬಾಷ*
**ಪುಟ : ೪೮** **ಬೆಲೆ : ರೂ. ೩೦**
**ಸಮೀರ್ ಪ್ರಕಾಶನ**, ಸೋಫಿಯಾ ಸದನ
೩ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, 'ಬಿ' ಬ್ಲಾಕ್, ವಿದ್ಯಾನಗರ, ಹರಿಹರ-೫೭೭೬೦೧

**ನೈಜಸ್ವರಾಜ್ಯದ ರೂಪು ರೇಷೆ**
(ಲೇಖನಗಳು) *ಅನು : ದೇವಸೂರ ಗಿರೀಶ*
**ಪುಟ : ೬೦** **ಬೆಲೆ : ರೂ. ೧೫**
**ಆಜಾದಿ ಬಚಾವೋ ಆಂದೋಲನ (ಕನ್ನಡ ಭಾಷಾ)**
ನಂ ೧೬೬, ಅಕ್ಕಿಪೇಟೆ ಮುಖ್ಯರಸ್ತೆ, ಬೆಂಗಳೂರು-೫೩

**ತ್ರಿವೇಣಿಯವರ ಕಾದಂಬರಿಗಳ ಮರು ಓದು**
(ಅಧ್ಯಯನ) *ಡಾ॥ ಎಚ್. ಎಸ್. ಶ್ರೀಮತಿ*
**ಪುಟ : ೬೮** **ಬೆಲೆ : ರೂ. ೨೫**
**ತ್ರಿವೇಣಿ ಪಬ್ಲಿಕೇಷನ್ಸ್**,
ಚಾಮರಾಜಪುರಂ, ಮೈಸೂರು-೫೭೦ ೦೦೫

# ವನವನು ಮಾಡೋಣ

೧

ಬೇಸಿಗೆ ಬಂದಿತು
ರಜೆಯನು ತಂದಿತು
ಊರಿನ ಎಲ್ಲಾ ಮಕ್ಕಳಿಗೆ.
ವೇಳೆಯ ಕಳೆಯುವ
ಬಗೆ ಹೇಗೆನ್ನುವ
ಯೋಚನೆ ಮೂಡಿತು ಮನದೊಳಗೆ.



೨

ಸಿದ್ಧನು ಎದ್ದು
ನುಡಿದನು ಸಭೆಯಲಿ
''ಸೈಕಲ್ ಕಲಿಯುವ ನಾವೆಲ್ಲಾ!''
ಮಲ್ಲನು ಮೆಲ್ಲನೆ
ಕುಳಿತಿರುವಲ್ಲೇ
''ಈಜನು ಕಲಿಯುವ ಕೆರೆಯಲ್ಲಿ.''

೩

ಕೈಯೆತ್ತುತ್ತ ಸೂರ
ನಗುತಲಿ ನುಡಿದ
''ಸಾಕುವ ಜೇನನು ತೋಟದಲಿ.''
ಚಪ್ಪಾಳೆ ತಟ್ಟುತ
ಸೀನನು ಕೂಗಿದ
''ಬನ್ನಿ ಕ್ರಿಕೆಟನು ಆಡೋಣ !''

೪

ಚರ್ಚೆಯು ಬಿಸಿಯಲಿ
ನಡೆಯುತ ಸಾಗಿತು
ತಿಳಿಯದೆ ಮಾಡುವುದೇನೆಂದು.
ಕೂತು ಕೂತು
ಆಕಳಿಸಿದ ಸೀತೆ
ನೀಡಿದಳೊಂದು ಸಲಹೆಯನು.

೫

ಊರಿನ ಮುಂದಣ
ಬಯಲಿನಲೆಲ್ಲಾ
ಸಸಿಗಳ ನೆಟ್ಟು ಬೆಳೆಸೋಣ.
ಇಲಾಖೆಯ ಕಂಡು
ಗಿಡಗಳ ತಂದು
ಊರಿಗೆ ವನವನು ಮಾಡೋಣ.

೬

ಮರಗಳ ಬೆಳೆಸಿದ
ತಿಮ್ಮಕ್ಕನ ತೆರದಲಿ
ನಾವು ಪ್ರಶಸ್ತಿಯ ಪಡೆಯೋಣ.
ಒಳ್ಳೆಯ ಸಲಹೆ
''ಭೇಷ್ ಸರಿ'' ಎನ್ನುತ
ಸಭೆಯದು ಒಪ್ಪಿಗೆ ಸೂಚಿಸಿತು.

೭

ಹಾರೆ, ಪಿಕಾಸಿ,
ಗುದ್ದಲಿ, ಮಂಕರಿ,
ಟೇಪನು ತಂದರು ಮನೆಯಿಂದ.
ಅಳತೆಯ ಮಾಡಿ
ಗುಂಡಿಯ ತೋಡಿ
ತಂದರು ಬಗೆ ಬಗೆ ಸಸಿಗಳನು.

೮

ನೇರಳೆ, ನೆಲ್ಲಿ,
ತಂಗಡೆ, ಬೀಟೆ,
ಹುಣಸೆ, ಹೊನ್ನೆ, ಗೋಡಂಬಿ.
ಸಿಲ್ವರ್, ಸೀಬೆ,
ಹೊಂಗೆ, ಹಲಸು,
ಸಂಪಿಗೆ, ಬೇವು, ಸುಬಾಬುಲ್ಲು.

೯

ಮಕ್ಕಳು ಮಾಡುವ
ಕಾರ್ಯವ ನೋಡಿ
ಹಿರಿಯರು ಬಂದರು ಜೊತೆಗೂಡಿ.
ಪಾತಿಯ ಮಾಡಿ
ಗೊಬ್ಬರ ಸುರಿದು
ನೀರನು ಹಾಕುತ ಬೆಳೆಸಿದರು.

೧೦

ಕಳೆದವು ವರುಷ
ಬೆಳೆದವು ಮರಗಳು
ಹಸುರಿನ ಸಿರಿಯೇ ಬಯಲಿನಲಿ.
ಎಲ್ಲರ ಬಾಯಲಿ
ಮರಗಳ ವಿಷಯವೆ
ಹಬ್ಬಿತು ಕ್ಷಣದಲಿ ರಾಜ್ಯದಲಿ.

೧೧

ಜಿಲ್ಲೆಗೆ ಜಿಲ್ಲೆಯೆ
ನುಗ್ಗಿತು ಊರಿಗೆ
ಸುಂದರ ವನಸಿರಿಯನು ನೋಡೆ.
ಸಚಿವರು ಬಂದರು
ಹರುಷದಿ ನಿಂದರು
ಪ್ರಶಸ್ತಿ ಘೋಷಣೆ ಮಾಡಿದರು.

೧೨

ಊರವರೆಲ್ಲರು
ಸೀತೆಯ ಕರೆದರು
'ತಗೋ ಪ್ರಶಸ್ತಿ' ಎಂದಾಡಿದರು.
ಇದ್ದರೆ ಇಂತಹ
ಮಕ್ಕಳು ಇರಲಿ
ಎಂಬ ಪ್ರಶಂಸೆಯ ಮಾಡಿದರು.

೧೩

ನಾಡಿಗೆ ಮಾದರಿ
ಈ ಊರಾಗಲಿ ಎಂದು
ಹರಸುತ ಸಚಿವರು ಸಾಗಿದರು.
ನಿಂತರು ಕೂತರು
ಸೀತೆಯ ಮಾತೇ
ಪ್ರತಿಧ್ವನಿಸಿತು ಮನೆಗಳ ಜಗಲಿಯಲಿ.

೧೪

ಪರಿಸರ ರಕ್ಷಣೆ
ನಮ್ಮೆಲ್ಲರ ಹೊಣೆ
ಘೋಷಣೆ ಮೊಳಗಲಿ ಜಗದಲ್ಲಿ.
ಮರಗಳ ಬೆಳೆಸುವ
ಪರಿಸರ ಉಳಿಸುವ
ಪ್ರಜ್ಞೆ ಮೂಡಲಿ ನರನಾಡಿಯಲಿ.

ಬಿ. ಚನ್ನಬಸವಯ್ಯ
ದೊಡ್ಡಎಣ್ಣೇಗೆರೆ

# ಸೋಲು - ಗೆಲುವು ಏನೇ ಇರಲಿ,

ಕಳೆದ ತಿಂಗಳು ನಾವು ಕೆಲವು ಸ್ನೇಹಿತರು ಗಢವಾಲದ ಹಿಮಾಲಯದತ್ತ ಚಾರಣ ಹೊರಟಿದ್ದೆವು. ಹಿಮಾಲಯದ ತಪ್ಪಲಲ್ಲಿ ಸಂಚರಿಸುತ್ತಿದ್ದಾಗ ವೃತ್ತಪತ್ರಿಕೆ ಓದದೆ, ಟಿ.ವಿ. ನೋಡದೆ, ಇಡೀ ದೇಶದ ರಾಜಕಾರಣದ ಬಿಸಿ ತಟ್ಟಿಸಿಕೊಳ್ಳದೆ ತಂಪಾಗಿ ವಿಹರಿಸುತ್ತಿದ್ದೆವು. ಯಮುನೋತ್ರಿಯ ಕಡಿದಾದ ಬೆಟ್ಟವನ್ನು ಹತ್ತಿ ಇಳಿದು ಬರುತ್ತಿದ್ದಾಗ ಸೋತು ಸುಣ್ಣವಾಗಿದ್ದೆ. ಹಾದಿ ಬದಿಯ ದಾಬಾದಲ್ಲಿದ್ದ ಟಿ.ವಿ. ವೀಕ್ಷಿಸುತ್ತಿದ್ದ ಗೆಳೆಯ ಕೇಶವ ಮೂರ್ತಿಯವರು 'ಗಾಯತ್ರಿ, ಎಡಪಕ್ಷಗಳವರು ರಾಷ್ಟ್ರಪತಿ ಸ್ಥಾನಕ್ಕೆ ಅಭ್ಯರ್ಥಿಯನ್ನು ನಿಲ್ಲಿಸಿದ್ದಾರೆ. ಅಭ್ಯರ್ಥಿ ಯಾರೆಂದು ಹೇಳಿ, ನಿಮಗೆ ಮೂರು ಛಾನ್ಸ್ ಕೊಡುವೆ' ಎಂದರು. ಯಾರೋ ಮಹನೀಯರ ಹೆಸರು ಹೇಳಿದೆ. ತಕ್ಷಣ



ಕ್ಯಾಪ್ಟನ್ ಲಕ್ಷ್ಮೀ ಅವರೊಡನೆ ಸಂದರ್ಶಕರು

'ಸ್ಪರ್ಧಿಸಿರುವ ವ್ಯಕ್ತಿ ಪುರುಷರಲ್ಲ, ಮಹಿಳೆ' ಎಂದರು.. ತಕ್ಷಣವೇ ನನ್ನಿಂದ ಬಂದ ಉತ್ತರ, 'ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್ ಇರಬೇಕಲ್ಲವೇ ?' ಹೌದು, ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್‌ಗಿಂತ ಅರ್ಹ ಅಭ್ಯರ್ಥಿ ಇನ್ಯಾರು ಇರಲು ಸಾಧ್ಯ ? ಆ ಕ್ಷಣದಲ್ಲಿ ನನಗೆ ಉಂಟಾಗಿದ್ದ ದಣಿವು, ಆಯಾಸವನ್ನೆಲ್ಲ ಮರೆಸಬಲ್ಲಷ್ಟು ಚೇತೋಹಾರಿಯಾಗಿತ್ತು ಕ್ಯಾಪ್ಟನ್ ಲಕ್ಷ್ಮಿಯ ಹೆಸರು.

ಸ್ವಾತಂತ್ರ್ಯ ಸಂಗ್ರಾಮದ ಸವಿ ನೆನಪಿನ ಕೊಂಡಿಯಾಗಿ ನಮ್ಮ ನಡುವೆ ಕ್ರಿಯಾಶೀಲವಾಗಿ ಇನ್ನೂ ಉತ್ಸಾಹದ ಚಿಲುಮೆಯಾಗಿರುವ ಕ್ಯಾಪ್ಟನ್ ಲಕ್ಷ್ಮಿಯವರನ್ನು ನೆನಪಿಸಿಕೊಂಡಾಗ ನನ್ನ ಬದುಕಿನ ಅವಿಸ್ಮರಣೀಯ ಅನುಭವವೊಂದು ಮನಸ್ಸಿನಲ್ಲಿ ಸುಳಿಯುತ್ತದೆ. ಎರಡು ದಶಕಗಳ ಹಿಂದಿನ ಮಾತು. ೧೯೮೧ರಲ್ಲಿ ಮದ್ರಾಸಿನಲ್ಲಿ ನಡೆದ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಸ್ಥಾಪನಾ ಸಮಾವೇಶದ ಸಂದರ್ಭ. ಆ ಸಮಾವೇಶಕ್ಕೆ ಕರ್ನಾಟಕದ ಪ್ರತಿನಿಧಿಗಳಾಗಿ ನಾನು ಮತ್ತು ವಿಮಲಾ ಹೋಗಿದ್ದೆವು. ನಮ್ಮಿಬ್ಬರನ್ನು ಅತ್ಯಂತ ಪ್ರೀತಿಯಿಂದ ಆದರಿಸಿದ ಸಮ್ಮೇಳನದ ನಾಯಕಿಯರಲ್ಲೆಲ್ಲ ಕ್ಯಾಪ್ಟನ್ ಲಕ್ಷ್ಮಿಯವರೇ ಹೆಚ್ಚು ನೆನಪಿಗೆ ಬರುವರು. ಸಹಜವಾಗಿ ಇಂದಿಗಿಂತ ಅಂದು ಹೆಚ್ಚು ಚೈತನ್ಯದ ಚಿಲುಮೆಯಾಗಿದ್ದ ಕ್ಯಾಪ್ಟನ್ ಲಕ್ಷ್ಮಿಯವರು ಮೂರು ದಿನ ನಡೆದ ಸಮ್ಮೇಳನದ ಉಸಿರಾಗಿದ್ದರು. ಅವರ ವ್ಯಕ್ತಿತ್ವದ ಪ್ರಭಾವ ಸಭೆಯ ಎಲ್ಲ ನಡಾವಳಿಗಳ ಮೇಲೂ ಅಚ್ಚೊತ್ತಿತ್ತು. ಅಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಯುತ್ತಿದ್ದಾಗ, ಎಲ್ಲ ರಾಜ್ಯಗಳ ಭಾಷೆಗಳ ಗೀತೆಯನ್ನು ಹಾಡಲಾಗುತ್ತಿತ್ತು. ಕನ್ನಡದ ಹಾಡು ಇನ್ನೂ ಬಂದಿರಲಿಲ್ಲ. ಪೆಚ್ಚಾಗಿ ಸುಮ್ಮನೆ ಕುಳಿತಿದ್ದ ನಮ್ಮ ಬಳಿ ಬಂದು, 'ನಿಮ್ಮ ಕನ್ನಡ ಹಾಡು ಬಂದಿಲ್ಲವೆಂದು ಬೇಸರವೇ ? ಹಾಡಿಸುವೆ' ಎಂದು ನಮಗೆ ಹೇಳಿ ಅಲ್ಲಿಗೆ ಹೋಗಿ ಕನ್ನಡ ಹಾಡು ಹಾಡಲು ಹೇಳಿದರು. ಆ ಆತ್ಮೀಯತೆಯ ನೆನಪು ಚಿರಕಾಲ ನನ್ನಲ್ಲಿ ಉಳಿಯುತ್ತದೆ.

೧೯೯೬ರಲ್ಲಿ ಬೆಂಗಳೂರಿನಲ್ಲಿ ನಡೆದ ವಿಶ್ವ ಸುಂದರಿ ಸ್ಪರ್ಧೆಯನ್ನು ಪ್ರತಿಭಟಿಸಿ ನಗರದ ಮಹಿಳಾ ಸಮುದಾಯ ಬೃಹತ್ ಮೆರವಣಿಗೆಯನ್ನು ನಡೆಸಿದಾಗ [illegible] ಕಾರ್ಯಕ್ರಮವನ್ನು ಉದ್ಘಾಟಿಸಿ ಮೆರವಣಿಗೆಯ ನೇತೃತ್ವ ವಹಿಸಲು ಕ್ಯಾಪ್ಟನ್ ಲಕ್ಷ್ಮೀ ಬೆಂಗಳೂರಿಗೆ

ಜುಲೈ ೧೮ರಂದು ಭಾರತ ಸರ್ಕಾರದ ಅತ್ಯುನ್ನತ ಪದವಿಗಾಗಿ ಚುನಾವಣೆ ನಡೆಯಿತು. ಭಾರತಕ್ಕೆ ಸ್ವಾತಂತ್ರ್ಯ ಬಂದ ಐವತ್ತೈದು ವರ್ಷಗಳ ನಂತರ ಮೊದಲ ಬಾರಿಗೆ ರಾಷ್ಟ್ರಪತಿ ಸ್ಥಾನಕ್ಕೆ ಮಹಿಳೆಯೊಬ್ಬರು ಅಭ್ಯರ್ಥಿಯಾಗಿದ್ದರು. ಆ ಅದೃಷ್ಟದ ಗೌರವ ಪಡೆದವರು ಡಾ॥ ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್. ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಪ್ರಖ್ಯಾತ ವಕೀಲರಾಗಿದ್ದ [illegible] ಸ್ವಾಮಿನಾಥನ್ ಮತ್ತು ಸಮಾಜ ಸೇವಕಿ, ಸ್ವಾತಂತ್ರ್ಯ ಹೋರಾಟಗಾರ್ತಿ ಮತ್ತು ಅಪ್ರತಿಮ ಮಹಿಳಾ ನಾಯಕಿಯಾಗಿದ್ದ ಅಮ್ಮು ಕುಟ್ಟಿಯವರ ಅಕ್ಕರೆಯ ಮಗಳಾಗಿ ಜನಿಸಿದ ಲಕ್ಷ್ಮಿಗೆ ಬದುಕಿನ ದಾರಿ ತಾವು ಬಯಸಿದ್ದನ್ನು ಸಾಧಿಸಲು ಅನುವು ಮಾಡಿಕೊಟ್ಟಿತ್ತು. ಪುಟ್ಟ ಬಾಲಕಿ ಲಕ್ಷ್ಮೀ ತಾಯಿಯೊಂದಿಗೆ ಸಭೆ, ಸಮಾರಂಭಗಳಲ್ಲಿ ಭಾಗವಹಿಸುತ್ತಾ ಚಳುವಳಿಯ ಪಾಠಗಳನ್ನು ಚಿಕ್ಕಂದಿನಲ್ಲೇ ಕಲಿತವರು. ಅಮ್ಮನ ಜೊತೆಗೂಡಿ ವಿದೇಶಿ ವಸ್ತುಗಳನ್ನು ಸುಡುವ ಕಾಯಕದಲ್ಲಿ ತನ್ನ ಬಟ್ಟೆಗಳೊಂದಿಗೆ ಆಟಿಕೆಗಳನ್ನೂ ಸುಟ್ಟಿದ್ದರು. ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ಮಾಡುತ್ತಾ ದೇಶದ ಸ್ವಾತಂತ್ರ್ಯದ ಕನಸು ಕಂಡವರು. ಓದಿನಲ್ಲಿ ಮುಂದಿದ್ದ ಚುರುಕು ಬುದ್ಧಿಯ ಲಕ್ಷ್ಮೀ ವೈದ್ಯೆಯಾಗಿ ಬಡಜನರ ಸೇವೆ ಮಾಡಬಯಸಿದರು. ವೈದ್ಯಕೀಯ ಪದವಿ ಪಡೆದ ನಂತರ ಸಿಂಗಪುರದಲ್ಲಿ ವೈದ್ಯೆಯಾಗಿ ನೆಲೆಸಿ ಬಡ ರೋಗಿಗಳ ಶುಶ್ರೂಷೆಯಲ್ಲಿ ತೊಡಗಿದರು. ಜೊತೆಗೆ, ಇಂಡಿಯನ್ ಇಂಡಿಪೆಂಡೆನ್ಸ್ ಲೀಗ್‌ನ ಮೂಲಕ ಸ್ವಾತಂತ್ರ್ಯ ಹೋರಾಟದ ಸಾಗರದಲ್ಲಿ ತಮ್ಮ ಹೆಜ್ಜೆಯೂರಿದರು.

ಇಂಡಿಯನ್ ನ್ಯಾಷನಲ್ ಆರ್ಮಿಯನ್ನು ಸ್ಥಾಪಿಸಿದ ನೇತಾಜಿ ಸುಭಾಷ್ ಚಂದ್ರರ ಕರೆಗೆ ಓಗೊಟ್ಟು ಐ.ಎನ್.ಎ.ಯ ಮಹಿಳಾ ವಿಭಾಗದ ರಾಣಿ ಝಾನ್ಸಿ ರಿಜಿಮೆಂಟ್‌ನ ನೇತೃತ್ವ ವಹಿಸಿ ನೂರಾರು ವೀರ ಮಹಿಳೆಯರನ್ನು ತಯಾರುಮಾಡಿದರು. ಬ್ರಿಟಿಷರ ವಿರುದ್ಧ ದಿಟ್ಟ ಹೋರಾಟ ನಡೆಸಿದ ಐ.ಎನ್.ಎ.ಯ ಭಾಗವಾದ ಡಾ॥ ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್ ಸ್ವತಂತ್ರ ಭಾರತದಲ್ಲಿ ವೀರ ಸೇನಾನಿ ಕರ್ನಲ್ ಸೆಹಗಲ್‌ರವರನ್ನು ಮದುವೆಯಾಗಿ ಕಾನ್ಪುರದಲ್ಲಿ ನೆಲೆಸಿದ ನಂತರ ಸಂಪೂರ್ಣವಾಗಿ ಮಾರ್ಕ್ಸ್‌ವಾದಿ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ರಾಷ್ಟ್ರೀಯ ಮಹಿಳಾ ಸಂಘಟನೆಯಾದ ಜನವಾದಿ ಮಹಿಳಾ ಸಂಘಟನೆಯ ಉಪಾಧ್ಯಕ್ಷೆಯೂ ಆಗಿರುವ ಕ್ಯಾಪ್ಟನ್ ಲಕ್ಷ್ಮೀ ಭಾರತ ಸರ್ಕಾರದಿಂದ ೧೯೯೮ರಲ್ಲಿ 'ಪದ್ಮವಿಭೂಷಣ' ಪ್ರಶಸ್ತಿಯಿಂದ ಸನ್ಮಾನಿತರಾದವರು.

# ಇದೊಂದು ಸೈದ್ಧಾಂತಿಕ ಹೋರಾಟ

*- ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್*

ಆಗಮಿಸಿದ್ದರು. ರೈಲ್ವೇ ನಿಲ್ದಾಣದ ಮುಂದೆ ಯಾವುದೇ ವೇದಿಕೆಯಿಲ್ಲದಂತಹ ಸ್ಥಿತಿ. ಆಗ ಅಲ್ಲಿಯೇ ಇದ್ದ ಒಂದು ಅಂಬಾಸಿಡರ್ ಕಾರಿನ ಮೇಲೆ ಪುಟ್ಟ ಹುಡುಗಿಯಂತೆ ಹತ್ತಿ ನಿಂತು ನೆರೆದಿದ್ದ ಜನಸ್ತೋಮವನ್ನು ಕುರಿತು ಭಾಷಣ ಮಾಡಿದ್ದನ್ನು ಅಲ್ಲಿ ನೆರೆದಿದ್ದ ಸಾವಿರಾರು ಜನರು ಮರೆಯುವುದು ಹೇಗೆ ಸಾಧ್ಯ ?

ರಾಷ್ಟ್ರಪತಿ ಚುನಾವಣೆಯ ಅಭ್ಯರ್ಥಿಯಾಗಿ ಚುನಾವಣಾ ಪ್ರಚಾರಕ್ಕೆಂದು ಜುಲೈ ೭ರಂದು ಬೆಂಗಳೂರಿಗೆ ಆಗಮಿಸಿದ ಡಾಕ್ಟರ್ ಕ್ಯಾಪ್ಟನ್ ಲಕ್ಷ್ಮೀ ಸೆಹಗಲ್‌ರವರಿಗೆ ಬೆಂಗಳೂರಿನ ನಾಗರಿಕರು ನೀಡಿದ ಅದ್ದೂರಿಯ, ಆತ್ಮೀಯ ಸ್ವಾಗತ ಅವರ ವ್ಯಕ್ತಿತ್ವದ ಜನಪ್ರಿಯತೆಗೂ ಸಾಕ್ಷಿಯಾಗಿತ್ತು. ನಾಗರಿಕರಿಗೆ ಹೇಗೋ ಹಾಗೆ ಕ್ಯಾಪ್ಟನ್ ಲಕ್ಷ್ಮಿಯವರಿಗೂ ಇದು ಮೈನವಿರೇಳಿಸುವ ಸಂದರ್ಭವೇ. ಬೆಂಗಳೂರಿನಲ್ಲಿದ್ದಷ್ಟು ಹೊತ್ತು ಬಿಡುವಿಲ್ಲದ ಚಟುವಟಿಕೆಗಳಲ್ಲಿ ತೊಡಗಿದ್ದ ಕ್ಯಾಪ್ಟನ್ ಲಕ್ಷ್ಮಿಯವರು ಈ ಊರನ್ನು ಬಿಡುವುದಕ್ಕೆ ಮುಂಚೆ ನಗರದ ವಿವಿಧ ಮಹಿಳಾ ಸಂಘಟನೆಗಳ ಸದಸ್ಯರನ್ನು ಭೇಟಿಯಾದರು. ಈ ಸಂದರ್ಭದಲ್ಲಿ 'ಹೊಸತು' ಪತ್ರಿಕೆಗೆಂದೇ ಮಾಡಿಕೊಂಡ ಒಂದು ಚಿಕ್ಕ ಸಂದರ್ಶನವಿದು.

**ಹೊಸತು :** ಎಡಪಕ್ಷಗಳ ಆಯ್ಕೆಯ ಅಭ್ಯರ್ಥಿಯಾಗಿರುವ ನೀವು ರಾಷ್ಟ್ರಪತಿ ಸ್ಥಾನಕ್ಕೆ ಸ್ಪರ್ಧಿಸಿರುವ ಮೊದಲ ಮಹಿಳಾ ಅಭ್ಯರ್ಥಿಯೂ ಹೌದು. ಈ ಸಂದರ್ಭದಲ್ಲಿ ಮಹಿಳಾ ಮೀಸಲಾತಿಯನ್ನು ಕುರಿತು ಒಂದು ಪ್ರಶ್ನೆ: ಮೀಸಲಾತಿ ಕೊಡುವುದನ್ನು ವಿರೋಧಿಸುತ್ತಿರುವ ಬಹುಪಾಲು ರಾಜಕೀಯ ಪಕ್ಷಗಳು ಸಂವಿಧಾನಕ ಮೀಸಲಾತಿ ಏಕೆ ಕೊಡಬೇಕು, ಜನತಾ ಪ್ರಾತಿನಿಧ್ಯದ ಆ್ಯಕ್ಟನ್ನು ಬಳಸಿಕೊಂಡು ಸ್ಪರ್ಧೆಗೆ ಅವಕಾಶ ಮಾಡಿಕೊಡಲಿ ಎನ್ನುತ್ತವೆಯಲ್ಲ, ಅದಕ್ಕೆ ನಿಮ್ಮ ಅಭಿಪ್ರಾಯವೇನು ?

**ಲಕ್ಷ್ಮೀ :** ನನ್ನನ್ನು ಎಡ ಪಕ್ಷಗಳು ಮತ್ತು ಅವರ ಮೈತ್ರಿಕೂಟವು ಆಯ್ಕೆ ಮಾಡಿರುವುದು ನಾನು ಮಹಿಳೆ, ನನಗೆ ಅವಕಾಶ ಮಾಡಿಕೊಡಲು ಎಂದು ನಾನು ಭಾವಿಸಿಲ್ಲ. ಸೋಲು-ಗೆಲುವು ಏನೇ ಇರಲಿ, ಇದು ಒಂದು ಸೈದ್ಧಾಂತಿಕ ಹೋರಾಟವೆಂದೇ ಭಾವಿಸಿ ನನ್ನ ಸೈದ್ಧಾಂತಿಕ ಬದ್ಧತೆಯನ್ನು ಗೌರವಿಸಿ ಆಯ್ಕೆ ಮಾಡಿದ್ದಾರೆ.

ಆದರೆ, ಮಹಿಳಾ ಮೀಸಲಾತಿಯನ್ನು ವಿರೋಧಿಸಿ ಜನತಾ ಪ್ರಾತಿನಿಧ್ಯದ ಆ್ಯಕ್ಟನ್ನು ಬಳಸಿಕೊಳ್ಳಿ ಎನ್ನುವುದು ಒಂದು ಬೋಗಸ್ ಪರಿಹಾರವಷ್ಟೇ ! ರಾಜಕೀಯ ಪಕ್ಷಗಳಿಗೆ ತಮ್ಮ ಪಕ್ಷಗಳೊಳಗೆ ಮೀಸಲಾತಿ ಕೊಡುವ ಇಚ್ಛೆ ಇದ್ದರೆ ಯಾವುದೇ ಕಾನೂನಿನ ಒತ್ತಡವಿಲ್ಲದೆ ಖುಷಿಯಾಗಿ ಕೊಡಲಿ ಬಿಡಿ. ಅವರನ್ನು ತಡೆಯುವವರು ಯಾರು ? ಆದರೆ, ಸಂವಿಧಾನಾತ್ಮಕವಾಗಿ ಮಹಿಳಾ ಮೀಸಲಾತಿ ಬೇಕು ಎಂಬ ಹೋರಾಟಕ್ಕೆ ಇದು ಪರ್ಯಾಯವೂ ಅಲ್ಲ; ಪರಿಹಾರವೂ ಅಲ್ಲ.

**ಹೊ :** ಮಹಿಳೆಯರು ಹೆಚ್ಚು ರಾಜಕೀಯ ಪ್ರವೇಶಿಸಿದರೆ ರಾಜಕೀಯ ವಾತಾವರಣ ಬದಲಾಗಿ ಆರೋಗ್ಯಕರ ಸ್ಥಿತಿ ಮೂಡಬಹುದೆಂಬುದು ಒಂದು ನಂಬಿಕೆ. ಆದರೆ ಇಂದು ಅಧಿಕಾರದಲ್ಲಿರುವ ಮಹಿಳಾ ರಾಜಕಾರಣಿಗಳು ಪುರುಷರಷ್ಟೇ ಭ್ರಷ್ಟರು, ಜಾತಿವಾದಿಗಳು ಮತ್ತು ಅವಕಾಶವಾದಿಗಳು ಆಗುತ್ತಾರಲ್ಲ, ಏಕೆ ?

**ಲಕ್ಷ್ಮೀ :** ಭ್ರಷ್ಟತೆ, ಅವಕಾಶವಾದ, ಜಾತಿವಾದ - ಇವೆಲ್ಲ ಲಿಂಗಾತೀತವಾದದ್ದೇ. ಅಧಿಕಾರದ ಆಸೆಯೊಂದೇ ಇಟ್ಟು ರಾಜಕೀಯಕ್ಕೆ ಬರುವ ಸ್ತ್ರೀ ಪುರುಷರಿಬ್ಬರೂ ಕೆಟ್ಟ ರಾಜಕಾರಣಿಗಳಾಗುವ ಸಾಧ್ಯತೆ ಇದೆ. ಆದ್ದರಿಂದಲೇ ಜನಸಮೂಹದ ನಡುವೆ ಕಾರ್ಯಶೀಲರಾಗಿರುವವರು, ಇಡೀ ಸಮಾಜದ ಹಿತಕ್ಕಾಗಿ ಚಳುವಳಿಗಳಲ್ಲಿ ತೊಡಗಿರುವವರು ರಾಜಕೀಯದ ಅಧಿಕಾರದ ಗದ್ದುಗೆಗೇರಿದಾಗ ಸಾಮೂಹಿಕ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಆಡಳಿತ ಮಾಡುವುದು ಸಾಧ್ಯವಾಗುತ್ತದೆ. ಅವರೇ ನಿಜವಾದ ಅರ್ಥದಲ್ಲಿ ಜನಪ್ರತಿನಿಧಿಗಳಾಗಲು ಅರ್ಹರಾಗುತ್ತಾರೆ.

**ಹೊ :** ತತ್‌ಕ್ಷಣದಲ್ಲಿ ಮಹಿಳಾ ಚಳುವಳಿಯ ಮುಖ್ಯ ಅಜೆಂಡಾ ಏನಾಗಿರಬೇಕು ?

**ಲಕ್ಷ್ಮೀ :** ಇಂದು ಮಹಿಳೆಯರಿಗೆ ಹಲವಾರು ಸಮಸ್ಯೆಗಳಿವೆ. ಅವರ ಮುಂದೆ ಹಲವಾರು ಸವಾಲುಗಳೂ ಇವೆ. ಆದರೆ ತತ್‌ಕ್ಷಣದ ಅಜೆಂಡಾ ಎಂದರೆ ನನ್ನ ಮನಸ್ಸಿಗೆ ಬರುವುದು ಕೋಮುವಾದಿ ಶಕ್ತಿಗಳ ವಿರುದ್ಧದ ಹೋರಾಟ. ಇದು ಮಹಿಳೆಯರದು ಮಾತ್ರವಲ್ಲ, ಇಡೀ ದೇಶದ ಮುಂದಿರುವ ಸವಾಲು



*ನೇತಾಜಿ ಜೊತೆ ಝಾನ್ಸಿ ರೆಜಿಮೆಂಟಿನ ಕ್ಯಾಪ್ಟನ್ ಲಕ್ಷ್ಮೀ*

ಆಗಿದೆ. ಮೂಲ ಭೂತವಾದಿ ಶಕ್ತಿಗಳು ಪ್ರಚೋದಿಸಿ, ಸಂಘಟಿಸುತ್ತಿರುವ ಕೋಮು ಹಿಂಸೆಗೆ ಇಂದು ಆಡಳಿತ ಯಂತ್ರ ಬೆಂಬಲ ಕೊಡುತ್ತಿರುವುದು ಅತ್ಯಂತ ಆತಂಕದ ವಿಷಯವಾಗಿದೆ. ಹಿಂದೆ ದೇಶ ವಿಭಜನೆಯ ಸಂದರ್ಭದಲ್ಲಿ ವ್ಯಾಪಕವಾದ ಹಿಂಸೆ, ಕೋಮುಗಲಭೆಗಳನ್ನು, ಜನರ ಪ್ರಾಣ, ಮಾನಹಾನಿಯನ್ನು ಕಂಡಿದ್ದೇನೆ. ಆದರೆ ಇತ್ತೀಚೆಗೆ ಗುಜರಾತಿನಲ್ಲಿ ನಡೆದ ಅಮಾನುಷ ಕ್ರಿಯೆ ಅತ್ಯಂತ ಖಂಡನೀಯ. ಪ್ರಜಾಪ್ರಭುತ್ವದ ಸರ್ಕಾರದಲ್ಲಿ ಆಳುವವರೇ ಕೋಮುಗಲಭೆಗೆ ಬೆಂಬಲವಾಗಿ ನಿಲ್ಲುವುದೆಂದರೆ ರಕ್ಷಣೆಯ ಜವಾಬ್ದಾರಿ ಯಾರು ವಹಿಸಬೇಕು ? ಈ ಸಂದರ್ಭದಲ್ಲಿ ವಿಶೇಷ

**ಡಾ|| ಎನ್. ಗಾಯತ್ರಿ**

ವಾಗಿ ಮಹಿಳೆಯರನ್ನು ಮತ್ತು ಮಕ್ಕಳನ್ನು ಹಿಂಸೆಗೆ ಗುರಿಯಾಗಿಸಿರುವ ರೀತಿ ಎಲ್ಲರೂ ತಲೆ ತಗ್ಗಿಸುವಂತ ಹುದು. ಇಂತಹ ಸಂದರ್ಭದಲ್ಲಿ ಮಹಿಳಾ ಚಳುವಳಿಯ ಜವಾಬ್ದಾರಿ ಹೆಚ್ಚಿದೆ. ಪರಿಹಾರ ಕಾರ್ಯದ ಜೊತೆಗೆ ವಸ್ತುಸ್ಥಿತಿಯನ್ನು ಇಡೀ ಸಮಾಜಕ್ಕೆ ಮತ್ತು ದೇಶಕ್ಕೆ ಅರ್ಥಮಾಡಿಸಿ ಕೋಮುವಾದಿ ಶಕ್ತಿಗಳ ವಿರುದ್ಧ ಜನಾಭಿಪ್ರಾಯವನ್ನು ಮೂಡಿಸುವ ಕೆಲಸ ಮಾಡಬೇಕು.

ಭಾರತ ಬಡತನ, ಅನಾರೋಗ್ಯ, ಅಜ್ಞಾನದ ವಿಷಯದಲ್ಲಿ ಸಮೃದ್ಧವಾಗಿದೆ. ಬೆರಳೆಣಿಕೆಯ ಶ್ರೀಮಂತರು ಮಾತ್ರ ದೇಶದ ಸಂಪತ್ತನ್ನು ಅನುಭವಿಸುತ್ತಿದ್ದಾರೆ ಮತ್ತು ರಾಷ್ಟ್ರದ ನೀತಿ, ನಿಯಮಾವಳಿಗಳನ್ನು ರೂಪಿಸುತ್ತಿದ್ದಾರೆ. ಬಡತನ, ನಿರುದ್ಯೋಗ, ಅನಾರೋಗ್ಯ, ಅನಕ್ಷರತೆಯಿಂದ ತುಂಬಿ ತುಳುಕುತ್ತಿರುವ ಭಾರತದ ಬಡಜನತೆಗೆ ಇಂದು ಯುದ್ಧವೂ ಬೇಕಿಲ್ಲ; ಅಣುಬಾಂಬೂ ಬೇಕಿಲ್ಲ. ನಾವು ಅಣುಬಾಂಬು ತಯಾರಿಸಿಟ್ಟುಕೊಂಡು ದೇಶದ ಸಾರ್ವಭೌಮತ್ವವನ್ನು ಕಾಯ್ದುಕೊಳ್ಳುವುದಕ್ಕಾಗುವುದಿಲ್ಲ. ಆರ್ಥಿಕವಾಗಿ ಸಂಪೂರ್ಣವಾಗಿ ಪರರಿಗೆ ದಾಸರಾಗಿ ಅಣುಬಾಂಬಿನಿಂದ ದೇಶ ರಕ್ಷಿಸಿಕೊಳ್ಳುತ್ತೇವೆಂದುಕೊಳ್ಳುವುದು ಅಪಹಾಸ್ಯವೇ ಸರಿ. ಇಂತಹ ವಿಷಯಗಳನ್ನು ಜನಸಾಮಾನ್ಯರತ್ತ ಕೊಂಡೊಯ್ದು ಬಲಿಷ್ಠ ಭಾರತವನ್ನು ಕಟ್ಟುವ ಕೆಲಸವನ್ನು ಎಲ್ಲ ಪ್ರಜ್ಞಾವಂತರು ಮಾಡಬೇಕಾಗಿದೆ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ



ಕಲೆ, ಸಂಗೀತ, ನೃತ್ಯ... ಇಷ್ಟೆಲ್ಲಾ ವಿಧದ ಹವ್ಯಾಸಗಳಿವೆ ನಿಮಗೆ !...ಆದರೆ ನೀವು ಹೊಟ್ಟೆಗೆ ಏನು ಮಾಡುತ್ತಿದ್ದೀರಿ ಸಾರ್..?

## ಪುಟ್ಟ ಜಾನಿಯ ತಪ್ಪೊಪ್ಪಿಗೆ



**ಇಂದು ಬೆಳಗಿನಲಿ**

ಯುದ್ಧ ನಂತರದಲ್ಲಿ ಅಪ್ಪ ಹುದುಗಿಸಿದ್ದ  
ಬಂದೂಕು ಕೊಂಡು, ಮೂರ್ಖನಾಗಿದ್ದ  
ಎಳೆಯ ನಾನು, ಮನೆ ಬಿಟ್ಟು ಹೊರಟೆ.  
ಪುಟ್ಟ ಶತ್ರುಗಳೇನಕರು ಇಲ್ಲವಾಗಿಸಿದೆ.  
ಆಗಿನಿಂದ ಮನೆಗೆ ಹಿಂತಿರುಗಿಲ್ಲ.

**ಇಂದು ಬೆಳಗಿನಲಿ**

ಪೊಲೀಸರ ಹಿಂಡು, ನಾಯಿಗಳೊಡನೆ  
ನಗರದಲ್ಲೆಲ್ಲಾ ಚದುರಿ ಸುತ್ತುತ್ತಿತ್ತು.  
ಕೇಳುತ್ತಿದ್ದವರೆಲ್ಲನು, ಅವರ ಮನದೊಳಗೆ  
ನನ್ನ ಮುಖಚಿತ್ರ ಅಚ್ಚೊತ್ತಿತ್ತು.  
'ನೀವೇನಾದರೂ, ಇವನನು ಬಲ್ಲಿರಾ ?'  
ಇವನಿಗಿನ್ನೂ ಎಳರ ಹರೆಯ,  
ಮಕ್ಕಳ ಕಥೆಗಳು, ಮಿಕ್ಕಿ ಮೌಸ್,  
ಬೊಂಬೆಯಾಟಿಕೆಗಳು ಇವನಿಗಿಷ್ಟ,  
''ನೀವೇನಾದರೂ, ಎಲ್ಲಾದರೂ, ಇವನನು ಕಂಡಿರಾ ?''

**ಇಂದು ಬೆಳಗಿನಲಿ**

ದೂರದಲ್ಲೆಲ್ಲೋ ಒಂದು ಮೈದಾನದಲಿ,  
ಒಬ್ಬಂಟಿಯಾಗಿ ಕುಳಿತು, ನನ್ನೊಳಗೆ ನಾನೇ  
ಹೇಳಿಕೊಳ್ಳುತ್ತಿದ್ದೆ: 'ನೀನು ತಪ್ಪು ಮಾಡಿದೆ,'  
'ನೀನು ತಪ್ಪು ಮಾಡಿದೆ', ಹೇಳಿಕೊಂಡೆ ಮತ್ತೆ ಮತ್ತೆ.  
ಮುಂದಿನ ನಡೆ ಯೋಜಿಸುತ್ತಿದ್ದೆ,  
ಆದರೆ ನಡೆಯಲಾರದೇ ಹೋದೆ.  
ಪೊಲೀಸರ ನಾಯಿಗಳು ವಾಸನೆ ಹಿಡಿದು ಬಿಡುತ್ತವೆ,  
ಏಕೆಂದರೆ ಅವುಗಳಲ್ಲುಂಟು, ನನ್ನ ಚಾಕಲೇಟು.

ಮೂಲ : ಬ್ರಿಯಾನ್ ಪ್ಯಾಟೆನ್  
ಅನುವಾದ : ಎಸ್. ಎನ್. ಸ್ವಾಮಿ

ತಮ್ಮ ಪುರುಷರೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಹೋರಾಡಿದ ಮಹಿಳೆಯರು ಇಂದು ನಮಗೆ ಮಾದರಿಯಾಗಬೇಕು. ಈ ದಿಕ್ಕಿನಲ್ಲಿ ಮಹಿಳೆಯರು ಸಂಘಟಿತರಾಗಿ ಹೋರಾಟ ನಡೆಸಬೇಕು.

**ಹೊ :** ಚುನಾವಣಾ ಪ್ರಚಾರಕ್ಕೆಂದು ದೇಶದುದ್ದಗಲಕ್ಕೂ ಸಂಚಾರ ಮಾಡಿರುವ ಸಂದರ್ಭದಲ್ಲಿ ಜನರ ಪ್ರತಿಕ್ರಿಯೆ ಹೇಗಿದೆ ? ನಿಮ್ಮ ವಿಶೇಷ ಅನುಭವವೇನು ?

**ಲಕ್ಷ್ಮಿ:** ಚುನಾವಣಾ ಪ್ರಚಾರಕ್ಕೆಂದು ನಾನು ಹಲವಾರು ರಾಜ್ಯಗಳಿಗೆ ಭೇಟಿ ಮಾಡಿದಾಗ ಜನರ ಉತ್ಸಾಹ, ಸಂಭ್ರಮ ಕಂಡು ಪುಳಕಿತಳಾಗಿದ್ದೇನೆ. ಬೆಂಗಳೂರಿನಲ್ಲಿ ನನಗೆ ದೊರೆತ ಸ್ವಾಗತ ಅಪೂರ್ವವಾದದ್ದು ಮತ್ತು ಅದಕ್ಕಾಗಿ ನಾನು ಇಲ್ಲಿನ ಜನತೆಗೆ ಕೃತಜ್ಞಳು. ಈ ಬಾರಿಯ ಸಂಚಾರದಲ್ಲಿ ನಾನು ಗಮನಿಸಿದ ಬಹು ಮುಖ್ಯ ಸಂಗತಿಯೆಂದರೆ, ಎಲ್ಲೆಲ್ಲೂ ಯುವಜನತೆಯ ಸಂಖ್ಯೆ ಅಗಾಧವಾಗಿ ಹೆಚ್ಚಿದೆ. ಕಳೆದ ವರ್ಷಗಳಲ್ಲಿ ಇಂತಹ ಜನಸಮೂಹ ಹೆಚ್ಚು ಕಾಣಲು ಸಿಗುತ್ತಿರಲಿಲ್ಲ. ನಮ್ಮ ಯುವಜನತೆ ಹೆಚ್ಚು ಸಿನಿಕರಾಗಿ, ನಿರುತ್ಸಾಹದಿಂದಿದ್ದದ್ದು ಕಂಡಿದ್ದೆ. ಆದರೆ ಇತ್ತೀಚೆಗೆ ಈ ಪರಿಸ್ಥಿತಿ ಬದಲಾಗಿದೆ. ಯುವಕ, ಯುವತಿಯರು ಒಟ್ಟಾರೆಯಾಗಿ ಹೆಚ್ಚು ಸಂಖ್ಯೆಯಲ್ಲಿ ಸಾರ್ವಜನಿಕ ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ; ಸಮೂಹ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿದ್ದಾರೆ. ಇಂದಿನ ದೇಶದ ಪರಿಸ್ಥಿತಿಯೇ ಇದಕ್ಕೆ ಕಾರಣವಿರಬಹುದು. ಬಡತನ, ನಿರುದ್ಯೋಗ, ಕೋಮು ಸಂಘರ್ಷಗಳು ಯುವಜನತೆಗೆ ಅರ್ಥವಾಗುತ್ತಿದೆ. ಮಾಧ್ಯಮಗಳು ವಸ್ತುಸ್ಥಿತಿಯ ಬಗ್ಗೆ ಅರಿವು ಮೂಡಿಸುತ್ತಿವೆ. ಹಾಗಾಗಿ ಇಂದಿನ ಯುವಜನರೇ ಎಲ್ಲ ಹೋರಾಟದ ನೇತೃತ್ವವನ್ನು ವಹಿಸಬಲ್ಲ ವಾಹಕಗಳಾಗಿ ಸಿದ್ಧರಾಗುತ್ತಿದ್ದಾರೆ.

ಎನ್. ಗಾಯತ್ರಿ  
ನಂ. ೧೦೮, 'ಸ್ಕೈಲೈನ್ ಸುರಭಿ', ವಿದ್ಯಾಪೀಠ ರಸ್ತೆ  
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫.



# ಗಾಯಕ – ಚಾಲಕ ಪಂಡಿತ್ ಭೀಮಸೇನ ಜೋಶಿ

**ಎಂ. ಕೆ. ರಾಜಗೋಪಾಲ್**

''ಮಿಲೇ ಸುರ್ ಮೇರಾ ತುಮ್ಹಾರಾ ತೋ ಸುರ್ ಬನೇ ಹಮಾರಾ'' – ಹಲವು ವರ್ಷಗಳ ಹಿಂದೆ ಪ್ರತಿದಿನವೂ ದೂರದರ್ಶನ ಮತ್ತು ರೇಡಿಯೋದಲ್ಲಿ ಪ್ರಸಾರವಾಗುತ್ತಿದ್ದ ಈ ಜನಪ್ರಿಯ ಗೀತೆಯನ್ನು ಕೇಳಿ ಆನಂದಿಸದವರಿಲ್ಲ. ಮತ್ತೆ ಮತ್ತೆ ಕೇಳಬೇಕೆನಿಸುವಂತಹ ಗೀತೆ. ಅನೇಕತೆಯಲ್ಲಿ ಏಕತೆ ಸಾರುವ ಭೈರವಿ ರಾಗದ ಈ ಸಮೂಹಗಾನದ ಪ್ರಧಾನ ಗಾಯಕ ಪಂಡಿತ್ ಭೀಮಸೇನ್ ಜೋಶಿ.

ಹಿಂದೂಸ್ತಾನಿ ಸಂಗೀತದ ಉತ್ತುಂಗದಲ್ಲಿರುವ ಕಿರಾನಿ ಘರಾನ ಚಕ್ರವರ್ತಿ ಭೀಮಸೇನ್ ಜೋಶಿ ಭಾರತೀಯ ಸಂಗೀತಕ್ಕೆ, ವಿಶೇಷವಾಗಿ ಹಿಂದೂಸ್ತಾನಿ ಸಂಗೀತಕ್ಕೆ, ಕರ್ನಾಟಕದ ಹೆಮ್ಮೆಯ ಅಮೂಲ್ಯ ಕೊಡುಗೆ. ಎಂಬತ್ತೊಂದರ ಹರೆಯದ ಅವರ ಕಂಠಶಕ್ತಿಯಾಗಲಿ, ಉತ್ಸಾಹವಾಗಲಿ ಕುಗ್ಗಿಲ್ಲ.

ಸಂಗೀತವಲ್ಲದೆ ಅವರಿಗೆ ಪ್ರಿಯವಾದದ್ದು ಇಂಗ್ಲಿಷ್ ಸಿನೆಮಾ. ಜೇಮ್ಸ್ ಬಾಂಡ್ ಮಾದರಿಯ ರೋಮಾಂಚಕಾರಿ ಚಿತ್ರಗಳು ಅವರಿಗೆ ಅಚ್ಚುಮೆಚ್ಚು. ಅವರ ಬಳಿ ಅಂತಹ ಚಿತ್ರಗಳ ಕ್ಯಾಸೆಟ್ ಸಂಗ್ರಹವೇ ಇದೆ. ಬೇಸರವಿಲ್ಲದೆ ನೋಡಿದ ಚಿತ್ರವನ್ನೇ ಮತ್ತೆ ಮತ್ತೆ ನೋಡುತ್ತಾರೆ.

ಚಿತ್ರಗಳಿಗಿಂತ ಅವರ ಗೀಳು ವಾಹನ ಚಾಲನೆ. ಅವರ ಮಾತಿನಲ್ಲೇ ಹೇಳುವುದಾದರೆ ''ಮೋಟಾರ್ ಸೈಕಲ್ ಓಡಿಸುತ್ತಿದ್ದೆ. ನಂತರ ಕಾರ್ ಚಾಲನೆ ಕಲಿತೆ. ಹೇಗೆ ಕಲಿತೆನೋ ನೆನಪಿಲ್ಲ. ಆದರೆ ಆ ಕಾಲದಲ್ಲಿ ಡ್ರೈವಿಂಗ್ ಸ್ಕೂಲುಗಳಿರಲಿಲ್ಲ.''

ಮೋಟಾರ್ ಸೈಕಲ್‌ನಿಂದ ಕಾರಿಗೆ ಬಡ್ತಿ ಹೊಂದಿದ ಮೇಲೆ ಅವರು ಮೊದಲು ನಡೆಸಿದ್ದು ಅಂಬ್ಯಾಸಿಡರ್ ಕಾರ್. ಅದಲ್ಲದೆ ಶೆವರ್ಲೆ, ಪಿಕಾರ್ಡ್, ಡೆಸೋಟ, ಕ್ರೈಸ್ಲರ್, ಬ್ಯೂಕ್ ಹೀಗೆ ಅನೇಕ ವಿದೇಶಿ ಕಾರ್‌ಗಳನ್ನು ಓಡಿಸಿದ್ದಾರೆ. ಪ್ರಸ್ತುತ ಅವರ ಬಳಿ ಇರುವುದು ಅವರ ಅಚ್ಚುಮೆಚ್ಚಿನ ಬಿಳಿ ಮರ್ಸಿಡೆಸ್ ಬೆಂಜ್. ಪುಣೆಯಲ್ಲಿ ನೆಲಸಿರುವ ಅವರು ಮಾಸದಲ್ಲಿ ೨೦-೨೫ ದಿನಗಳು ಪ್ರವಾಸದಲ್ಲಿರುತ್ತಾರೆ. ಬಹಳ ದೂರದ ಊರುಗಳು ಬಿಟ್ಟರೆ ಉಳಿದಂತೆ ಕಾರಿನಲ್ಲೇ ಪ್ರಯಾಣ.

ಬಹಳ ವರ್ಷಗಳವರೆಗೆ ಜೋಶಿ ತಮ್ಮ ಕಾರನ್ನು ತಾವೇ ತೊಳೆದು ಒರೆಸುತ್ತಿದ್ದರು. ಅದು ಕಾರ್ ಮೇಲಿನ ಅವರ ಅಪಾರ ಪ್ರೇಮ. ಒಮ್ಮೆ ಅವರು ಕೊಲ್ಲಾಪುರದಿಂದ ಪುಣೆಗೆ ಮರಳುವಾಗ ಡ್ರೈವರ್ ನಡೆಸುತ್ತಿದ್ದ ಅವರ ಕಾರ್ ತಲೆಕೆಳಗಾಯಿತು. ಅಂದಿನಿಂದ ಜೋಶಿ ತಾವೇ ಕಾರ್ ನಡೆಸುತ್ತಿದ್ದಾರೆ. ''ಬೇರೆಯವರು ನಮ್ಮನ್ನು ಕೊಲ್ಲುವುದಕ್ಕಿಂತ ನಮ್ಮ ಕೈಲೇ ನಾವು ಸಾಯುವುದು ಲೇಸು'' ಎನ್ನುತ್ತಾರೆ ಜೋಶಿ.

ಜೋಶಿಯವರಿಗೆ ಸಂಗೀತದಲ್ಲಿ ಎಷ್ಟು ಪರಿಶ್ರಮ, ಆತ್ಮವಿಶ್ವಾಸವಿದೆಯೋ ಅಷ್ಟೇ ಪರಿಶ್ರಮ, ಆತ್ಮವಿಶ್ವಾಸ ಕಾರ್ ಚಾಲನದಲ್ಲೂ ಇದೆ. ನೂರು ಕಿಲೋಮೀಟರ್ ವೇಗದಲ್ಲಿ ಓಡಿಸುತ್ತಾರೆ. ಭೀಮಸೇನ ಅವರಿಗೆ ಅನ್ವರ್ಥನಾಮ. ಅವರ ದೇಹ ದಾರ್ಢ್ಯ ಮತ್ತು ಬಲ ಕಿರಿಯರನ್ನು ನಾಚಿಸುವಂತಹದ್ದು. ಅವರ ಅರ್ಥ ಕೋಶದಲ್ಲಿ ಆಯಾಸ ಎಂಬ ಪದವೇ ಇಲ್ಲ.

ಅವರ ೭೫ನೇ ಹುಟ್ಟುಹಬ್ಬದ ಮುನ್ನ ಜೋಶಿ ದೀಘ ಎಂಬಲ್ಲಿ ಸಂಜೆ ೭.೩೦ರಿಂದ ರಾತ್ರಿ ೧೦.೩೦ರವರೆವಿಗೆ ಹಾಡಿ ನಂತರ ಮರಾಠಿ ಸಾಹಿತ್ಯ ಸಮ್ಮೇಳನ ನಡೆಯುತ್ತಿದ್ದ ಆಲಂದಿ ಎಂಬ ಜಾಗಕ್ಕೆ ಗಾಡಿ ಓಡಿಸಿ ಅಲ್ಲಿ ರಾತ್ರಿ ೧೧ರಿಂದ ಮೂರು ಗಂಟೆಗಳ ಕಾಲ ಕಚೇರಿ ಮಾಡಿದರು. ಒಮ್ಮೆ ಮನೆಯವರೊಂದಿಗೆ ಕಾಶ್ಮೀರದಿಂದ ಕನ್ಯಾಕುಮಾರಿವರೆಗೆ ಕಾರಿನಲ್ಲಿ ಪ್ರವಾಸ. ಪ್ರವಾಸದ ಪೂರಾ ಅವರೇ ವಾಹನ ನಡೆಸಿದರು.

೧೯೯೬ರಲ್ಲಿ ಆಪ್ತಮಿತ್ರ ಮತ್ತು ಖ್ಯಾತ ನಿರೂಪಕ ಸುಧೀರ್ ಗಾಡ್ಗಿಲ್ ಅವರೊಂದಿಗೆ ಪುಣೆಯಿಂದ ಅಹಮದ್‌ನಗರ್‌ಗೆ ಪ್ರಯಾಣ. ಮಾರ್ಗ ಮಧ್ಯದಲ್ಲಿ ''ಗಾಡಿ ನಿಲ್ಲಿಸಲೇ ? ನೀರು ಅಥವಾ ಟೀ ಕುಡಿಯುತ್ತೀರಾ ?'' ಎಂದು ಕೇಳಿದರು. ಗಾಡ್ಗಿಲ್ ಬೇಡವೆಂದಾಗ ಪ್ರಯಾಣ ಮುಂದುವರಿಸಿ ನೇರ ಕಚೇರಿ ನಡೆಯಬೇಕಾಗಿದ್ದ ಸ್ಥಳಕ್ಕೆ ಹೋಗಿ ವೇದಿಕೆ ಏರಿದರು.

ಜೋಶಿಯವರ ಸಂತವಾಣಿ ಕಾರ್ಯಕ್ರಮಕ್ಕೆ ಅವರ ಸಂಗಡ ಸುಧೀರ್ ಗಾಡ್ಗಿಲ್ ಹೋಗುವುದು ವಾಡಿಕೆ. ೧೯೯೫ರಲ್ಲಿ ಅಂತಹ ಕಾರ್ಯಕ್ರಮವೊಂದಕ್ಕೆ ಅಹಮದ್‌ನಗರ್‌ಗೆ ಹೋಗುತ್ತಿದ್ದಾಗ ಎದುರುಗಡೆಯಿಂದ ಬರುತ್ತಿದ್ದ ಎರಡು ಟ್ರಕ್‌ಗಳ ನಡುವೆ ಕಾರನ್ನು ವೇಗವಾಗಿ ತೆಗೆದುಕೊಂಡು ಹೋದರಂತೆ. ಗಾಡ್ಗಿಲ್ ಗಲಿಬಿಲಿಗೊಂಡಾಗ ಜೋಶಿ, ''ಚಿಂತಿಸಬೇಡಿ, ಈ ಕ್ಷೇತ್ರದಲ್ಲೂ (ವಾಹನ ಚಾಲನೆ) ನನ್ನ ರಿಯಾಜ್ ಪರಿಪೂರ್ಣವಾದದ್ದು. ಅಕಸ್ಮಾತ್ ಏನಾದರೂ ಸಂಭವಿಸಿದರೆ ಅದು ಬಟ್ಟೆಯನ್ನು ಮುಟ್ಟಬಹುದೇ ಹೊರತು ತೊಡೆಯನ್ನಲ್ಲ'' ಎಂದರಂತೆ ! ಅದು ಅವರ ಆತ್ಮವಿಶ್ವಾಸ.

ಸುಮಾರು ೧೬ ವರ್ಷಗಳ ಹಿಂದೆ ನಡೆದ ಒಂದು ಘಟನೆ. ಜೋಶಿ ಹಾಗೂ ಅವರ ಆಪ್ತ ಶಿಷ್ಯ ಉಪೇಂದ್ರ ಭಟ್ ಕಚೇರಿಯೊಂದಕ್ಕೆ ನಾಶಿಕ್‌ಗೆ ಕಾರಿನಲ್ಲಿ ಹೋಗುತ್ತಿದ್ದರು. ನಾಶಿಕ್ ಸಮೀಪ ರಸ್ತೆ ಬದಿಯಲ್ಲಿ ಇಬ್ಬರು ಮಹಿಳೆಯರು (ಅವರ ಪೈಕಿ ಒಬ್ಬರು ವಿದೇಶಿ), ಎರಡು ಮಕ್ಕಳು ಮತ್ತು ಡ್ರೈವರ್ ನಿಂತಿದ್ದರು. ಅವರ ಕಾರ್ ಕೆಟ್ಟು ಹೋಗಿದ್ದು ನಾಶಿಕ್‌ಗೆ ಹೋಗುತ್ತಿದ್ದ ಕಾರ್‌ಗಳಿಗೆಲ್ಲಾ ಕೈ ತೋರಿಸಿ ಸಹಾಯ ಕೋರುತ್ತಿದ್ದರು. ಯಾರೂ ಕಾರ್ ನಿಲ್ಲಿಸಲಿಲ್ಲ. ಅವರ ಬವಣೆ ನೋಡಿದ ಜೋಶಿ ಕಾರ್ ನಿಲ್ಲಿಸಿದರು. ವಿದೇಶೀ ಮಹಿಳೆ ಅವರನ್ನು ಗುರುತಿಸಿ ''ನೀವು ಭೀಮಸೇನ್ ಜೋಶಿಯವರಲ್ಲವೇ ? ನಾವು ನಿಮ್ಮ ಕಾರ್ಯಕ್ರಮಕ್ಕೆ ಹೋಗುತ್ತಿದ್ದೇವೆ'' ಎಂದು ಉದ್ಗರಿಸಿ ಸಹಾಯ ಕೋರಿದರು. ಜೋಶಿ ಹಿಂದು ಮುಂದು ನೋಡದೆ ತಮ್ಮ ಕಾರನ್ನು ಅವರಿಗೆ ಕೊಟ್ಟು ಡ್ರೈವರ್‌ಗೆ ಅವರು ಎಲ್ಲಿಗೆ ಹೋಗಬೇಕೋ ಅಲ್ಲಿ ಇಳಿಸಿ ಕಾರನ್ನು ತಾವು ಇಳಿದುಕೊಳ್ಳಬೇಕಾಗಿದ್ದ ಹೋಟೆಲ್‌ನಲ್ಲಿ ಬಿಡುವಂತೆ ಸೂಚನೆ ಕೊಟ್ಟರು. ■ ಅಪರಿಚಿತ ವ್ಯಕ್ತಿಗಳು ಪ್ರತಿಕ್ರಿಯಿಸಲಾರದಷ್ಟು ದಿಗ್ಭ್ರಮೆ

ಗೊಂಡರು. ಅಷ್ಟೇ ಅಲ್ಲ ಮತ್ತೊಂದು ಆಶ್ಚರ್ಯ ಕಾದಿತ್ತು. ಜೋಶಿ ಕೆಟ್ಟುಹೋಗಿದ್ದ ಕಾರ್‌ನ ಡ್ರೈವರ್ ಸ್ಥಾನದಲ್ಲಿ ಕುಳಿತು ಸಂಗಡವಿದ್ದ ಉಪೇಂದ್ರ ಭಟ್‌ಗೆ ಕಾರ್ ತಳ್ಳುವುದಕ್ಕೆ ಹೇಳಿ ಕಾರ್ ಚಾಲನೆ ಮಾಡಿದರು. ಗಾಡಿ ಅಲ್ಲಲ್ಲೇ ನಿಲ್ಲುವುದು, ಭಟ್ ಕೆಳಗಿಳಿದು ಕಾರ್ ತಳ್ಳುವುದು. ಪ್ರಯಾಣ ಹಾಗೆಯೇ ಮುಂದುವರಿದು ಕಡೆಗೂ ಅವರು ನಾಶಿಕ್ ತಲುಪಿದರು. ನಾಶಿಕ್ ತಲುಪಿದೊಡನೆ ಗಾಡಿಯನ್ನು ನೇರ ಮೆಕ್ಯಾನಿಕ್ ಬಳಿ ತೆಗೆದುಕೊಂಡು ಹೋಗಿ ಕಾರನ್ನು ರಿಪೇರಿ ಮಾಡಿ ಅದರ ಮಾಲಿಕರಿಗೆ ಅವರು ಕೊಟ್ಟಿದ್ದ ವಿಳಾಸದಲ್ಲಿ ತಲುಪಿಸುವಂತೆ ಆದೇಶ ನೀಡಿದರು.

ಗಾಯಕರಿದ್ದಾರೆ. ಚಾಲಕರಿದ್ದಾರೆ. ಕಾರುಳ್ಳವರೂ ಇದ್ದಾರೆ. ಆದರೆ ಕಾರಿನ ಯಾಂತ್ರಿಕ ಆಯಾಮಗಳ ಬಗ್ಗೆ ಜೋಶಿಯವರಿಗಿರುವಷ್ಟು ಅಪಾರ ಜ್ಞಾನ, ಅನುಭವ ಉಳ್ಳವರು ವಿರಳ. ೧೯೮೮ರಲ್ಲಿ ಮುಂಬೈಗೆ ಹೋಗುತ್ತಿದ್ದಾಗ ಪನ್ವೇಲ್ ಬಳಿ ಕಾರಿನ ಫ್ಯಾನ್ ಬೆಲ್ಟ್ ಕಿತ್ತುಹೋಯಿತು. ಜೋಶಿಯವರು ಕೆಳಗಿಳಿದು ಪರೀಕ್ಷಿಸಿ ಸಂಗಡವಿದ್ದ ಭಟ್‌ಗೆ ಕಾರಿನ ಕೆಳಗೆ ತೂರಿ ಸಹಾಯ ಮಾಡಲು ಹೇಳಿದರು. ತಾವು ಹೊಸ ಫ್ಯಾನ್ ಬೆಲ್ಟ್ ಅಳವಡಿಸಿದರು. ಅದು ಸರಿಯಾಗಿದೆಯೇ ಎಂದು ಖಚಿತಪಡಿಸಿಕೊಳ್ಳಲು ಸಮೀಪದ ವರ್ಕ್‌ಶಾಪಿಗೆ ತೆಗೆದುಕೊಂಡು ಹೋದರು. ಫ್ಯಾನ್ ಬೆಲ್ಟ್ ಹಾಕಿರುವುದು ಸಮರ್ಪಕವಾಗಿದ್ದುದನ್ನು ಗಮನಿಸಿದ ಮೆಕ್ಯಾನಿಕ್ ಅದನ್ನು ಹಾಕಿದವರಾರೆಂದು ಕೇಳಿದ. ಜೋಶಿಯವರೇ ಅದನ್ನು ಹಾಕಿದ್ದು ಎಂದು ತಿಳಿದಾಗ ಅವನು ಅವಾಕ್ಕಾದ. ಅದು ಅಷ್ಟು ಪರಿಪೂರ್ಣವಾಗಿತ್ತು. ಅವನ ಅಭಿಪ್ರಾಯದಲ್ಲಿ ಬೆಂಜ್ ಕಾರಿಗೆ ಫ್ಯಾನ್ ಬೆಲ್ಟ್ ಹಾಕುವುದು ಅನುಭವೀ ಮೆಕ್ಯಾನಿಕ್‌ಗೆ ಕೂಡ ಕಷ್ಟದ ಕೆಲಸ. ತೃಪ್ತಿಯಿಂದ ಜೋಶಿ ಅಲ್ಲಿಂದ ಹೊರಟಾಗ ಕಾರ್ ಕಣ್ಮರೆಯಾಗುವವರೆಗೂ ಮೆಕ್ಯಾನಿಕ್ ನೆಟ್ಟ ನೋಟದಿಂದ ಅದನ್ನೇ ನೋಡುತ್ತಿದ್ದ.

ಕಾರ್‌ನ ಎಂಜಿನ್‌ದಾಗಲೀ ಹಾರ್ನ್‌ದಾಗಲೀ ಶಬ್ದ ತಂಬೂರಿಯ ಶ್ರುತಿಯಂತಿರಬೇಕು. ಶ್ರುತಿ ಬದ್ಧವಾಗಿದೆಯೇ ಎಂದು ಆಲಿಸಿ ಕೇಳುತ್ತಾರೆ. ಎಂಜಿನ್ ಶಬ್ದದಿಂದ ಅದರ ಸ್ಥಿತಿ ಹೇಳಬಲ್ಲರು. ಕಾರ್ ರಿಪೇರಿಯಾಗುವಾಗ ಕೆಲಸ ಸರಿಯಾಗಿದೆ ಎಂದು ತೃಪ್ತಿಯಾಗುವವರೆಗೂ ಗಂಟೆಗಟ್ಟಲೆ ವರ್ಕ್‌ಶಾಪಿನಲ್ಲಿ ಎದುರಿಗೇ ಕುಳಿತಿರುತ್ತಾರೆ. ಅವರೊಡನೆ ವ್ಯವಹರಿಸುವಾಗ ಎಂತಹ ಅನುಭವೀ ಮೆಕ್ಯಾನಿಕ್ ಕೂಡ ಎಚ್ಚರಿಕೆಯಿಂದಿರಬೇಕು. ಪುಣೆಯ ನಾರಾಯಣ್ ಪೇಟೆಯಲ್ಲಿರುವ ದೀಕ್ಷಿತ್ ಗ್ಯಾರೇಜ್ ಒಂದು ಹೆಸರಾಂತ ವರ್ಕ್‌ಶಾಪ್. ಅದರ ಖ್ಯಾತಿಗೆ ಭೀಮಸೇನ್ ಜೋಶಿಯವರೂ ಕಾರಣ. ಜೋಶಿಯವರು ತಮ್ಮ ಕಾರನ್ನು ಅಲ್ಲಿ ರಿಪೇರಿ ಮಾಡಿಸುವುದೇ ಆ ವರ್ಕ್‌ಶಾಪಿನ ದಕ್ಷತೆ, ಪ್ರಾಮಾಣಿಕತೆಗೆ ಸರ್ಟಿಫಿಕೇಟ್. *(ಸಾಭಾರ)*

ಎಂ. ಕೆ. ರಾಜಗೋಪಾಲ್
[illegible]. 'ದ್ವಿಜಾವಂತಿ', ೪ನೇ ಮುಖ್ಯರಸ್ತೆ, ಪದ್ಮನಾಭನಗರ,
ಬೆಂಗಳೂರು - ೭೦

# ಏಮಾರಿದ ಹಡಗಿನ ಅಧಿಕಾರಿ



**'ಫರ್ತ್ ಆಫ್ ಕ್ಲೈಡ್'** ಎಂಬಲ್ಲಿದ್ದ ತನ್ನ ತಂಗಿಯನ್ನು ನೋಡಿಕೊಂಡು ಬರಲು ತನ್ನ ಚಿಕ್ಕ ವಯಸ್ಸಿನ ಮಗಳನ್ನು 'ಗ್ಲ್ಯಾಸ್ಗೋ'ದ ತಾಯಿಯೊಬ್ಬಳು ಉಗಿ ಹಡಗೊಂದರಲ್ಲಿ (ಸ್ಟೀಮರ್) ಕೂಡಿಸಿ, ಮೊತ್ತಮೊದಲ ಬಾರಿಗೆ ಆಕೆಯನ್ನು ಕಳುಹಿಸುತ್ತಿದ್ದಳು.

ತಾಯಿ ಹೇಳಿಕೊಟ್ಟಿದ್ದುದರ ಮೇರೆಗೆ ಆ ಹುಡುಗಿ ತಕ್ಷಣವೇ ಹಡಗಿನ ಅಧಿಕಾರಿಯನ್ನು ('ಪರ್ಸರ್') ಕಂಡು, 'ಡನ್‌ನೂನ್ ಬಂದ ತಕ್ಷಣ ದಯವಿಟ್ಟು ನನಗೆ ಹೇಳಿ' ಎಂದಾತನನ್ನು ಕೇಳಿಕೊಂಡಳು. ಆ ಉಗಿ ಹಡಗು ಪ್ರಯಾಣ ಮಧ್ಯದ ಊರುಗಳ ದಡಗಳಲ್ಲಿ ನಿಂತಾಗಲೆಲ್ಲಾ ಆ ಬಾಲಕಿ 'ಡನ್‌ನೂನ್ ಬಂತೆ ?' 'ಡನ್‌ನೂನ್ ಬಂತೆ ?' ಎಂದು ಆತನನ್ನು ಪದೇಪದೇ ಕೇಳುತ್ತಿದ್ದಳು. ಅವಳ ಈ ಪ್ರಶ್ನೆಯಿಂದ ತಲೆ ಚಿಟ್ಟುಹಿಡಿದ ಆ ಹಡಗಿನ ಅಧಿಕಾರಿ ''ನನ್ನನ್ನು ಪದೇ ಪದೇ ಕೇಳಿ ಕೇಳಿ ನನಗೆ ತೊಂದರೆ ಕೊಡುತ್ತಿರಬೇಡ. 'ಡನ್‌ನೂನ್ ಬಂದ ತಕ್ಷಣ ನಿನ್ನ ಬಳಿಗೆ ನಾನೇ ಬಂದು 'ಡನ್‌ನೂನ್' ಬಂತು ಅಂತ ಹೇಳ್ತೀನಿ. ಅಲ್ಲಿಯವರೆಗೆ ನನ್ನ ಹತ್ತಿರ ಬರಲೇಬೇಡ, ನಿನ್ನ ಸೀಟಿನಲ್ಲಿ ತೆಪ್ಪಗೆ ಕುಳಿತಿರು'' ಎಂದು ಆಕೆಗೆ ತಾಕೀತು ಮಾಡಿದ.

ಈ ಆಶ್ವಾಸನೆಯನ್ನು ಆ ಹಡಗಿನ ಅಧಿಕಾರಿ ಆ ಬಾಲಕಿಗೆ ನೀಡಿದ್ದರೂ ಕೂಡ, ಹಾಲಿಡೇ ರಷ್‌ನಿಂದಾಗಿ, ಈ ವಿಚಾರವನ್ನು ಸಂಪೂರ್ಣವಾಗಿ ಮರೆತೇಬಿಟ್ಟ! ಹಾಗಾಗಿ 'ಡನ್‌ನೂನ್' ಪಟ್ಟಣ ಹಿಂದಕ್ಕೆಯೇ ಸರಿದುಹೋಯಿತು ! ಪ್ರಶ್ನಾರ್ಥಕ ಕಣ್ಣುಗಳಿಂದ ಆ ಬಾಲಕಿ ಆತನನ್ನೇ ನೋಡುತ್ತಿದ್ದಳು ! ಆದರೆ ಆತನನ್ನು 'ಡನ್‌ನೂನ್ ಬಂತಾ ?' ಎಂದು ಕೇಳುವ ಧೈರ್ಯ ಆಕೆಗೆ ಬರಲೇ ಇಲ್ಲ. ಆಗ ಆತ ಆ ಉಗಿ ಹಡಗಿನ ಪ್ರಯಾಣಿಕರು ಇಳಿಯಲು ಅನುಕೂಲ ಕಲ್ಪಿಸಿರುವ ಸೇತುವೆ ಪ್ರದೇಶಕ್ಕೆ ದೌಡಾಯಿಸಿ, ನಡೆದ ಸಮಾಚಾರವನ್ನು ಆ ಹಡಗಿನ ಕ್ಯಾಪ್ಟನ್‌ಗೆ ತಿಳಿಸಿದ. ತಾವು ಇನ್ನೂ ತಲುಪಬೇಕಾದ ಊರುಗಳ ವೇಳಾಪಟ್ಟಿ ಬದಲಾದುದಕ್ಕೆ, ಪ್ರಯಾಣ ವ್ಯತ್ಯಯವಾದುದಕ್ಕೆ ಕೋಪೋದ್ರಿಕ್ತನಾಗಿ ಉರಿದೆದ್ದ ಆ ಕ್ಯಾಪ್ಟನ್, ಚುಕ್ಕಾಣಿಗನಿಗೆ (ಹೆಲ್ಮ್‌ಮನ್) ಉಗಿ ಹಡಗನ್ನು ವಾಪಸ್ಸು ಡನ್‌ನೂನ್‌ಗೆ ಹಿಂದಿರುಗಿಸಿ ತೆಗೆದುಕೊಂಡು ಹೋಗಲು ಆದೇಶಿಸಿದ. ಮತ್ತೆ ಉಗಿ ಹಡಗು ಡನ್‌ನೂನ್‌ನಲ್ಲಿ ಲಂಗರು ಹಾಕಿತು. ಹಾದಿಹಲಗೆಗಳನ್ನು ದಡದ ಮೇಲಕ್ಕೆ ಇಳಿಸಲಾಯಿತು. ಹಡಗಿನ ಅಧಿಕಾರಿ, ಆ ಬಾಲಕಿಯ ಬಳಿ ಹೋಗಿ, 'ಡನ್‌ನೂನ್ ಬಂತು ಇನ್ನು ನೀನು ಇಳಕೋ' ಎಂದಾಕೆಗೆ ಹೇಳಿದ.

''ಥ್ಯಾಂಕ್ಯೂ !'' ಎಂದು ಹೇಳಿದ ಆ ಬಾಲಕಿ, ತಾನು ಈ ಮೊದಲು ಕುಳಿತಂತೆಯೇ ತನ್ನ ಸೀಟಿನಲ್ಲಿಯೇ ಭದ್ರವಾಗಿ ಕುಳಿತುಕೊಂಡು ಕಂದುಬಣ್ಣದ ಪ್ಯಾಕೆಟ್ ಒಂದನ್ನು ಬಿಚ್ಚಿ ''ಈ ಡನ್‌ನೂನ್ ಬರುವವರೆಗೆ ಈ ಪೊಟ್ಟಣದಲ್ಲಿರೋ ಸ್ಯಾಂಡವಿಚ್‌ಗಳನ್ನು ತಿನ್ನಬೇಡಾ ಅಂತ ಅಮ್ಮ ಹೇಳಿದ್ದಳು. ನಾನು ಹೋಗಬೇಕಾಗಿರೋದು ಫರ್ತ್ ಆಫ್ ಕ್ಲೈಡ್'' ಎಂದು ಹೇಳಿ, ಆ ಸ್ಯಾಂಡ್‌ವಿಚ್‌ಗಳನ್ನು ತಿನ್ನಲಾರಂಭಿಸಿದಳು !

ಎಸ್. ವಿಶ್ವನಾಥ
ಕೆ. ೨೪೬, ಬಸ್‌ಸ್ಟಾಪ್ ಎದುರು, ಕಲ್ಲಹಳ್ಳಿ, ಮಂಡ್ಯ - ೫೭೧೪೦೧

# ಧಾರ್ಮಿಕ ಬೆಳವಣಿಗೆಗಳ ಹಿಂದಿನ ರಾಜಕೀಯ

ರಾಜಕೀಯ ಎಂದೊಡನೆ ಅಧಿಕಾರ ಗ್ರಹಣ ಮತ್ತು ಅದರಿಂದ ದೊರೆಯುವ ಭ್ರಷ್ಟಲಾಭಗಳು ಎನ್ನುವ ಭಾವನೆ ಈಗ ಸಾರ್ವತ್ರಿಕವಾಗಿ ತೋರುತ್ತಿದೆ. ಇದೊಂದು ಅಪಾಯಕಾರಿ ಬೆಳವಣಿಗೆ. ಇದರಿಂದಾಗಿ ಸಾಮಾನ್ಯ ಜನ, ಮಧ್ಯಮ ವರ್ಗೀಯರು, ಬುದ್ಧಿಜೀವಿಗಳು ರಾಜಕೀಯ-ಸಾಮಾಜಿಕ ಕ್ಷೇತ್ರದಿಂದ ವಿಮುಖರಾಗುತ್ತ ತಮ್ಮ ಸುತ್ತಮುತ್ತಲಿನ ರಾಜಕೀಯ ಆಗುಹೋಗುಗಳಿಗೆ ನಿರಾಸಕ್ತಿ ತೋರುತ್ತಾರೆ. ಇಂಥ ಸದವಕಾಶಕ್ಕಾಗಿ ಹದ್ದಿನಂತೆ ಕಾಯುತ್ತ ಕುಳಿತಿರುವ ಮೂಲಭೂತವಾದಿ ಫ್ಯಾಸಿಸ್ಟ್ ಶಕ್ತಿಗಳು ತಮ್ಮ ವಿಕೃತ ಕಾರ್ಯಕ್ರಮವನ್ನ ಜನರ ಮೇಲೆ ಹೇರಲು ಯತ್ನಿಸುತ್ತಾರೆ.

ಹಿಂದಿನ ದಿನಗಳಲ್ಲಿ ಜಾತಿಪದಗಳನ್ನು ಬಳಸಿ ಮಾತನಾಡುವುದು, ಧಾರ್ಮಿಕ ಆಚರಣೆಗಳನ್ನು ಧರ್ಮದ ಹೆಸರಿನಲ್ಲಿ ಲೇವಡಿ ಮಾಡುವುದು, ನಿಂದಿಸುವುದು ಇವು ನಾಗರಿಕ ಸಮಾಜಕ್ಕೆ ಹೊರತಾದ, ಶಿಷ್ಟಾಚಾರಕ್ಕೆ ವ್ಯತಿರಿಕ್ತವಾದ ನಡವಳಿಕೆಗಳೆಂದು ಜನ ಇಂಥ ಪ್ರವೃತ್ತಿಗಳನ್ನು ತಿರಸ್ಕಾರದಿಂದ ಕಾಣುತ್ತಿದ್ದರು. ಈಗ ಸಾಮಾಜಿಕ ಬದುಕಿನಲ್ಲಿ ಎಲ್ಲವೂ ತಿರುವುಮುರುವು ಆದಂತೆ ತೋರುತ್ತಿದೆ. ಮುಸ್ಲಿಂ ಮೂಲಭೂತವಾದವನ್ನು ಹೀಯಾಳಿಸುತ್ತ ಹಿಂದೂ ಮೂಲಭೂತವಾದಿಗಳು ಇಡೀ ಮುಸ್ಲಿಂ ಸಮುದಾಯವನ್ನು ಅವಹೇಳನ ಮಾಡುವ ರೀತಿಯಲ್ಲಿ ಮಾತನಾಡುವುದನ್ನು ಭಜರಂಗಿಗಳ ಪಡೆಯಲ್ಲಿ ಕಾಣುತ್ತೇವೆ.

ಹಿಂದೂ ಮತಾಂಧರ ಕುಹಕತನವನ್ನು ಎದುರಿಸಲು ಅಲ್ಪಸಂಖ್ಯಾತ ಮುಸ್ಲಿಂ ಸಮುದಾಯದ ಕೆಲವರು ತಮ್ಮ ಅಸ್ತಿತ್ವವನ್ನು ತೋರಲು ಮುಸ್ಲಿಂ ಮೂಲಭೂತವಾದಿಗಳಿಗೆ ಶರಣಾಗುತ್ತಾರೆ. ಪ್ರಜಾಪ್ರಭುತ್ವ ರೀತಿಯಲ್ಲಿ ತಮ್ಮ ಹಕ್ಕುಗಳಿಗಾಗಿ ಸಂಘಟಿತ ರಾಜಕೀಯ, ಸಾಮಾಜಿಕ ಯತ್ನ ನಡೆಸಬೇಕಾದ ಈ ಸಮುದಾಯದ ಜನ ಅಂಥ ಸಂಘಟಿತ ಯತ್ನಗಳ ಅಭಾವದಿಂದಾಗಿ ತಮ್ಮ ಧರ್ಮದಲ್ಲಿಯ ಮೂಲಭೂತವಾದಿ ಶಕ್ತಿಗಳೇ ತಮ್ಮ ಹಿತವನ್ನು ರಕ್ಷಿಸಬಲ್ಲವೆಂಬ ನಂಬಿಕೆಗೆ ಒಳಗಾಗುತ್ತಾರೆ. ತನ್ಮೂಲಕ ಮುಸ್ಲಿಂ ಮೂಲಭೂತವಾದಿಗಳು ಉಪದೇಶಿಸುವ ಆಚರಣೆಗಳೇ ಸರ್ವಮಾನ್ಯವೆಂದು ಬಗೆಯುತ್ತಾರೆ. ಸೌದಿ ಅರೇಬಿಯಾದ ವಹಾಬಿ ಜನ ತೊಡುವ ಉಡುಗೆ ತೊಡುಗೆಗಳು, ಆಚರಣೆಗಳು ವಿಶ್ವಮಾನ್ಯ ಮುಸ್ಲಿಂ ಸಮುದಾಯದವರ ಉಡುಗೆ ತೊಡುಗೆಗಳೆಂಬ ಭ್ರಮೆಯನ್ನು ಕಲ್ಪಿಸಲಾಗುತ್ತಿದೆ. ದೇಶ, ನೆಲ, ಪರಿಸರ, ಹವಾಮಾನಗಳ ವಿಭಿನ್ನತೆಯಿಂದಾಗಿ ಆಹಾರ, ಉಡುಗೆ ತೊಡುಗೆ, ಆಚಾರಗಳಲ್ಲಿ ವ್ಯತ್ಯಾಸವಿರುವುದನ್ನು ಲೆಕ್ಕಿಸದೆ ವಹಾಬಿ ಜನರ ಆಚರಣೆಯೇ ಸರ್ವಸ್ವೀಕೃತ ಎಂಬ ಕಲ್ಪನೆಯನ್ನು ನಿರ್ಮಿಸಲಾಗುತ್ತಿದೆ. ಈ ವಹಾಬಿ ಜನ ಸೌದಿ ಅರೇಬಿಯಾದಲ್ಲಿರುವುದು ಕೆಲವು ಲಕ್ಷಗಳಲ್ಲಿ ಮಾತ್ರ. ಅಲ್ಲಿನ ಪರಿಸರಕ್ಕೆ ಹೊಂದಿಕೊಂಡು ಬೆಳೆದ ಜೀವನ ಪದ್ಧತಿ ಬೇರೆ ಪರಿಸರದ ಪ್ರದೇಶದ ಜನರಿಗೆ ಸೂಕ್ತವೇ ಹೇಗೆ ಎಂಬ ಆಲೋಚನೆಗೂ ಅಲ್ಲಿನ ಮೂಲಭೂತವಾದಿಗಳು ಅವಕಾಶ ನೀಡುವುದಿಲ್ಲ.

ಮುಸ್ಲಿಂ ಮೂಲಭೂತವಾದಿಗಳು ಉಪದೇಶಿಸುವ ವೈವಿಧ್ಯರಹಿತ ಜೀವನ ಪದ್ಧತಿಗೆ ಹಾಗೂ ಏಕತಾನದ ಉಪದೇಶಗಳಿಗೆ ಎದುರಾಗಿ ಇಂಥ ಧಾಟಿಯಲ್ಲೇ ಹಿಂದೂ ಧರ್ಮವನ್ನು ಪ್ರದರ್ಶಿಸಲು ಹಿಂದೂ ಮೂಲಭೂತವಾದಿಗಳು, ರಾಮನನ್ನು ಸರ್ವಶಕ್ತನಾಗಿ ತೋರುತ್ತ, ಆತನ ಮುಖಾಂತರ ಏಕದೇವೋಪಾಸನೆಗೆ ಹಿಂದುಗಳನ್ನು ಪ್ರೇರೇಪಿಸುವ ನಿಟ್ಟಿನಲ್ಲಿ ಹೊರಟಿದ್ದಾರೆ. ಹಿಂದೂ ಧರ್ಮ ಯಾವನೇ ಒಬ್ಬ ಪ್ರವಾದಿಯಿಂದ, ಧರ್ಮಸ್ಥಾಪಕನಿಂದ ಸ್ಥಾಪಿತವಾದ ಧರ್ಮವಲ್ಲ. ಅದು ಸಾವಿರಾರು ವರ್ಷಗಳಿಂದ ಈ ಉಪಖಂಡದಲ್ಲಿ ಜನರಿಂದ ಬೆಳೆದು ಬಂದ ವೈವಿಧ್ಯಮಯ, ಬಹುಮುಖೀ ಸಂಸ್ಕೃತಿಯ ಜೀವನ ಪದ್ಧತಿಯಾಗಿದೆ ಮತ್ತು ನಂಬುಗೆಯಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ತೀರ ಇತ್ತೀಚೆಗೆ ಧರ್ಮ ಸಂಸ್ಥಾಪಕರುಗಳಿಂದ ಸ್ಥಾಪನೆಗೊಂಡ ಧರ್ಮಗಳ ಏಕದೇವೋಪಾಸನೆ, ವಿಶಿಷ್ಟ ಕಟ್ಟಳೆಗಳ ಹಿನ್ನೆಲೆಯಲ್ಲಿ ಕೆಲವು ಹಿಂದುಗಳು ಕೀಳರಿಮೆಯನ್ನು ಬೆಳೆಸಿಕೊಂಡು ಹಿಂದೂ ಧರ್ಮೀಯರನ್ನು ಸಹ ಏಕದೇವೋಪಾಸನೆ, ವೈವಿಧ್ಯರಹಿತ ಪದ್ಧತಿಗೆ ನೂಕಲು ಯತ್ನಿಸುತ್ತಿರುವುದು ಭಾರತೀಯ ಸಮಾಜಕ್ಕೆ ಕಂಟಕಪ್ರಾಯವಾಗಿ ಪರಿಣಮಿಸುತ್ತಿದೆ.

ಪಶ್ಚಿಮ ಏಶಿಯಾದಲ್ಲಿ ಎರಡು ಪ್ರಮುಖರಿಂದ ಸ್ಥಾಪನೆಗೊಂಡ ವಿಶ್ವದ ಎರಡು ಪ್ರಮುಖ ಧರ್ಮಗಳು ಜನಿಸಿರುವ ಕಾಲಘಟ್ಟ ಇನ್ನೂ ನಾಗರಿಕ ಸಮಾಜದ ಹಂತವನ್ನು ತಲುಪಿರದ ಕಾಲಘಟ್ಟವಾಗಿತ್ತು. ವಿವಿಧ ಬುಡಕಟ್ಟುಗಳ ಮಧ್ಯೆ ಹರಿದು ಹಂಚಿಹೋಗಿದ್ದ ಅಲ್ಲಿನ ಜನರನ್ನು ಒಂದುಗೂಡಿಸಿ ಅವರನ್ನೆಲ್ಲ ಒಂದು ಶಿಸ್ತಿಗೆ ಒಳಪಡಿಸುವ ಅಗತ್ಯತೆ ಅಂದಿನದಾಗಿತ್ತು. ಅಂಥ ಕಾಲಘಟ್ಟದಲ್ಲಿ ಉದಯಿಸಿದ ಧರ್ಮಗಳು, ಪ್ರಕಟಗೊಂಡ ಧಾರ್ಮಿಕ ಗ್ರಂಥಗಳು ಸ್ಪಷ್ಟವಾಗಿ ಆ ಕಾಲಘಟ್ಟದ ಜನರನ್ನು ಒಂದು ನಾಗರಿಕ ಚೌಕಟ್ಟಿನಲ್ಲಿ ತರುವ ಅಗತ್ಯತೆಯನ್ನು ಒತ್ತಿ ಹೇಳುತ್ತವೆ ಎಂಬುದು ಅವುಗಳ ವ್ಯಾಖ್ಯಾನಗಳಿಂದ ಸ್ಪಷ್ಟವಾಗಿ ತೋರುತ್ತದೆ. ಮಾನವ ಸಮಾಜ ಮನ್ನಿಸಬೇಕಾದ ಸಾರ್ವಕಾಲಿಕ ಸತ್ಯಗಳನ್ನು ಹೇಳುತ್ತಲೇ ಈ ಧರ್ಮಗ್ರಂಥಗಳು ಬದಲಾವಣೆಯ ಹೊಣೆಗಾರಿಕೆಯನ್ನು ಮಾನವ ಸಮಾಜದ ಮೇಲೆ ಬಿಟ್ಟುಕೊಟ್ಟಿರುವ ವಿಷಯವನ್ನು ಅಷ್ಟಾಗಿ ಬೆಳಕಿಗೆ ತರುವುದಿಲ್ಲ.

ಉದಾಹರಣೆಗೆ, ಖುರಾನದ ಎರಡನೇ ಅಧ್ಯಾಯದಲ್ಲಿನ ಎರಡು ವಾಕ್ಯಗಳು ಹೀಗಿವೆ:

''ಈ ಧರ್ಮಗ್ರಂಥವು (ಕೆಟ್ಟದ್ದನ್ನು) ಅಳಿಸಿಹಾಕುವವರಿಗೆ ಒಂದು ಮಾರ್ಗದರ್ಶನವಾಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ.''

*- ಖುರ್ ಆನ್ ವಾಕ್ಯ ೨, ಅಧ್ಯಾಯ ೨*

''ನಿನಗೆ ಅವತೀರ್ಣಿಸಲ್ಪಟ್ಟ ಮತ್ತು ನಿನಗಿಂತ ಪೂರ್ವದಲ್ಲಿ ಅವತೀರ್ಣಿಸಲ್ಪಟ್ಟ ಮತ್ತು ತದನಂತರದಲ್ಲಿ ಯಾರು ನಂಬುಗೆ ಇಡುತ್ತಾರೋ'' (ವಾಕ್ಯ ೪, ಅಧ್ಯಾಯ ೨) ಎಂದು ಹೇಳಲಾಗಿದೆ.

ಧರ್ಮಗ್ರಂಥಗಳ ಕೇಂದ್ರಬಿಂದು ಮನುಷ್ಯನಾಗಿದ್ದಾನೆ. ಆತನಲ್ಲಿಯ ನಿರ್ಮಾಣದ ಶಕ್ತಿ, ಬದಲಾವಣೆಯ ಗುಣವನ್ನು ನೆಚ್ಚಿಕೊಂಡಿರುವ ಧರ್ಮಗ್ರಂಥಗಳ ಸೂಕ್ಷ್ಮತೆಯನ್ನು ಪ್ರಚಾರಪಡಿಸುವಲ್ಲಿ ಬದಲಾವಣೆಯ ಆರಾಧಕರಾಗಿರುವ ಪ್ರಗತಿಪರ ಚಿಂತಕರು ಹಿಂದೆ ಬಿದ್ದಿರುತ್ತಾರೆ. ಇಂದಿಗೂ ಮನುಷ್ಯ ಜೀವನದ, ಬದುಕಿನ ಬಹುಭಾಗವನ್ನು ಬಲವಾಗಿ ಆಕ್ರಮಿಸಿಕೊಂಡಿರುವ ಧಾರ್ಮಿಕ ನಂಬುಗೆ, ಉಪದೇಶಗಳನ್ನು ಬದಲಾವಣೆಯ ನಿಟ್ಟಿನಲ್ಲಿ ಅರ್ಥ ಮಾಡಿಕೊಂಡು ಎಲ್ಲಕ್ಕಿಂತ ಮಿಗಿಲಾದ ಉಪದೇಶ ಬದಲಾವಣೆಯ ಸಂದೇಶವಾಗಿದೆ ಎಂಬುದನ್ನು ಸಾರಬೇಕಾಗಿದೆ.

''ಧರ್ಮವು ರಾಜಕೀಯ ಅಂಶವಾದಾಗ, ರಾಜಕಾರಣದ ವಸ್ತುವಾದಾಗ ವೃತ್ತಪತ್ರಿಕೆಗಳು ಇಂಥ ರಾಜಕೀಯ ಪ್ರಶ್ನೆಗಳನ್ನು ಚರ್ಚಿಸಬೇಕು.....

... ತತ್ವಜ್ಞಾನವು, ಜಗತ್ತಿನ ವಿವೇಕಜ್ಞಾನವು, ಪರಲೋಕದ ವಿವೇಕಜ್ಞಾನಕ್ಕಿಂತ (ಅಂದರೆ) ಧರ್ಮಕ್ಕಿಂತ ಈ ಜಗತ್ತಿನ ವಿಷಯಗಳ ಬಗೆಗೆ, ರಾಜ್ಯದ ಬಗೆಗೆ, ವಿವೇಚಿಸಲು ಹೆಚ್ಚಿನ ಹಕ್ಕನ್ನು ಹೊಂದಿರುತ್ತದೆ...'' ಎಂದು ಕಾರ್ಲ್ ಮಾರ್ಕ್ಸ್ ಹೇಳುತ್ತಾರೆ.

ಒಂದು ಮೂಲಭೂತವಾದ ಮತ್ತೊಂದು ಮೂಲಭೂತವಾದ ಒದಗಿಸುವ ಆಹಾರದ ಮೇಲೆ ಬೆಳೆಯುತ್ತದೆ. ಮುಸ್ಲಿಂ ಮೂಲಭೂತವಾದದ ಅಪಾಯ ಹೇಳುತ್ತ ಹಿಂದೂ ಮೂಲಭೂತವಾದಿಗಳು ಫ್ಯಾಸಿಸ್ಟರಾಗುತ್ತ ಸಾಗಿದ್ದಾರೆ. ಫ್ಯಾಸಿಸಂ ಅಪಾಯದ ವಿರುದ್ಧ ಧರ್ಮಭೇದಭಾವ ಮರೆತು ಪ್ರಜಾಪ್ರಭುತ್ವ ರೀತಿಯಲ್ಲಿ ಬೆಳೆದು ಬರುವ ಚಳುವಳಿಗಳಲ್ಲಿ ಹಿಂದೂಗಳಷ್ಟೇ ಮುಸ್ಲಿಂರು, ಮುಸ್ಲಿಂರಷ್ಟೇ ಹಿಂದೂಗಳು ಭಾಗಿಯಾಗುವ ಸಂದರ್ಭ ಇಂದು ನಿರ್ಮಾಣಗೊಂಡಿದೆ. ಈ ಸೌಹಾರ್ದ ಕ್ರಿಯೆಯಲ್ಲಿ ಎರಡೂ ಜನಸಮುದಾಯದ ಬಹುಸಂಖ್ಯ ನಿರಾಸಕ್ತ ಜನರನ್ನು ತೊಡಗಿಸುವ ನಿಟ್ಟಿನಲ್ಲಿ ಧರ್ಮಗ್ರಂಥಗಳು ಬೋಧಿಸಿದ ವಿಶಾಲತೆ, ಚಲನಶೀಲತೆಯ ತಿರುಳನ್ನು ಎತ್ತಿತೋರಿಸುವ ಕೆಲಸ ಇಂದು ಎಲ್ಲ ಧರ್ಮೀಯರಿಂದಲೂ ನಡೆಯಬೇಕಿದೆ. ಕರ್ನಾಟಕದಲ್ಲಿ ಕೆಲವು ವೀರಶೈವ ಮಠಾಧೀಶರು ಈ ನಿಟ್ಟಿನಲ್ಲಿ ಮಾತನಾಡುತ್ತಿರುವುದು, ಚಿಂತಿತರಾಗಿರುವುದು ಒಂದು ಸ್ವಾಗತಾರ್ಹ ಬೆಳವಣಿಗೆ. ಇದು ಬೇರೆ ಧರ್ಮೀಯರಲ್ಲಿ, ಸಮುದಾಯದವರಲ್ಲಿ ಪ್ರಕಟಗೊಂಡು ಎಲ್ಲ ಧರ್ಮೀಯರು ಪರಸ್ಪರ ಕೊಡು – ತೆಗೆದುಕೊಳ್ಳುವ ಧಾಟಿಯಲ್ಲಿ ಸಮನ್ವಯದತ್ತ ಸಂವಾದಕ್ಕಾಗಿ ಇಳಿಯಬೇಕಾದ ಅಗತ್ಯತೆ ಹಿಂದೆಂದಿಗಿಂತಲೂ ಇಂದು ಹೆಚ್ಚಿಗೆ ಇದೆ. ಧಾರ್ಮಿಕ ಬೆಳವಣಿಗೆಗಳ ಹಿಂದಿರುವ ರಾಜಕೀಯ ಅರ್ಥಶಾಸ್ತ್ರದ ನೆಲೆಗಟ್ಟನ್ನು ಅರ್ಥ ಮಾಡಿಕೊಂಡು ಹೊಸ ಪರ್ಯಾಯಕ್ಕಾಗಿ ಹೋರಾಡುವುದು ಪ್ರಗತಿಪರ ಚಿಂತಕರ, ರಾಜಕೀಯ ವ್ಯಕ್ತಿಗಳ ಕರ್ತವ್ಯವಾಗಿದೆ.

ರವೀಂದ್ರ ಹಳಿಂಗಳಿ
ವಕೀಲರು, ಜಮಖಂಡಿ - ೫೮೭೩೦೧

# ಭಾಷೆ ಮತ್ತು ಸಂಸ್ಕೃತಿ

'**ಆಚರಣೆ**' ಎಂದರೇನು ? ಬದಲಾವಣೆ ಇಲ್ಲದೆ ಸಂಪ್ರದಾಯ ರೀತ್ಯಾ ನಡೆಸುವ ಸಾಮಾಜಿಕ, ಧಾರ್ಮಿಕ ವಿಧಿ ಎಂದು ಅನುಭವದಿಂದ ಹೇಳಬಹುದು. ಸ್ವಾತಂತ್ರ್ಯ ದಿನಾಚರಣೆ, ಪ್ರಜಾಪ್ರಭುತ್ವ ದಿನಾಚರಣೆಗಳಲ್ಲಿ ಸಂಪ್ರದಾಯಕ್ಕೆ ಮೊದಲ ಮಣೆ. ಬದಲಾವಣೆಗೆ ಅವಕಾಶ ಕಡಿಮೆ.

ಭಾಷೆಯ ದೃಷ್ಟಿಯಿಂದ 'ಆಚರಿಸು' ಎಂಬ ಪದಕ್ಕೆ ಚಲನಶೀಲವಾದ ಅರ್ಥವಿದೆ. 'ಸಂಚರಿಸು' ಪದ ಚಲನೆಯನ್ನು ಸೂಚಿಸುತ್ತದೆ. ಅದಕ್ಕೆ ವಿವರಣೆಯೇ ಬೇಕಾಗಿಲ್ಲ. 'ಸಂಚರಿಸು', 'ಆಚರಿಸು' ಇವೆರಡೂ ಒಂದೇ ಮೂಲದಿಂದ ಬಂದ ಪದಗಳು ಎಂದಾಗ ಹುಬ್ಬು ಮೇಲೇರುತ್ತದೆ. ಹಾಗೇನೇ ಆಚಾರ, ವಿಚಾರ, ಪ್ರಚಾರಗಳೆಲ್ಲ ಒಂದೇ ಮೂಲದಿಂದ ಬಂದವು ಎನ್ನುವ ಮಾತು ಹಾಸ್ಯಾಸ್ಪದ ಎನಿಸುತ್ತದೆ. ಆದರೆ ಅದು ನಿಜ. ಸಂಸ್ಕೃತಿಯು ಭಾಷೆಯ ಮೂಲಕ ಉಸಿರಾಡುತ್ತದೆ ಎನ್ನಲು ನಿದರ್ಶನ.

**ನದಿ ಮತ್ತು ದಡ**

ಭಾಷೆ ಮತ್ತು ಸಂಸ್ಕೃತಿಗಳ ಸಂಬಂಧ ಈ ಬಗೆಯದು. ನದಿ ಮತ್ತು ದಡದ ಹಾಗೆ. ನದಿ ತನ್ನ ಹರಿವಿನ ದಾರಿಯನ್ನು ಬದಲಾಯಿಸಬಹುದು. ನದಿಯೊಂದು ಇಲ್ಲಿ ಹರಿಯುತ್ತಿತ್ತು ಎಂಬ ಗುರುತನ್ನು ಬಿಟ್ಟುಕೊಡದೆ ಒಣಗಿಹೋಗಬಹುದು. ಆದರೂ ಆ ದಾರಿಯ ಕುರುಹನ್ನು ಗುರುತಿಸುವುದು ಸಾಧ್ಯ. ಹರಿವಿನ ಉದ್ದಕ್ಕೆ ನದಿಯು ಉಂಟುಮಾಡಿದ ಕೊರಕಲುಗಳು-ಸವಕಲುಗಳು, ನದಿಯನ್ನು ಅವಲಂಬಿಸಿ ಬೆಳೆದ ಗದ್ದೆ ತೋಟಗಳು, ಹಳ್ಳಿ ಪಟ್ಟಣಗಳು ಮೂಲ ಕುರುಹನ್ನು ಉಸಿರಾಡುತ್ತವೆ.

ಸಂಸ್ಕೃತಿಯ ನೆರಳು ಭಾಷೆಯ ಮೇಲೆ ಹರಡಿರುವುದೂ ಈ ರೀತಿಯಲ್ಲಿಯೇ. ಕಾಲ ಕ್ರಮೇಣ ಪದಗಳು ತಮ್ಮ ಹರಿವಿನ ದಾರಿಯನ್ನು ಬದಲಿಸಬಹುದು. ಆದರೆ ಅವುಗಳ ಅರಿವಿನ ದಾರಿ ಬದಲಾಯಿಸುವುದಿಲ್ಲ. ಅದು ತನ್ನ ಮೂಲ ಆಶಯಕ್ಕೆ ಅಂಟಿಕೊಂಡೇ ಇರುತ್ತದೆ.

ಸಂಸ್ಕೃತದ 'ನಾವೆ'ಗೂ ಗ್ರೀಕ್‌ನ 'ನವುಸ್'ಗೂ ಇಂಗ್ಲಿಷಿನ 'ನೇವಿ'ಗೂ ಎತ್ತಣಿಂದೆತ್ತಣ ಸಂಬಂಧ ? ಸಂಸ್ಕೃತ ಭಾಷೆ ಬೆಳೆದ ಭಾರತಕ್ಕೂ, ಗ್ರೀಸಿಗೂ, ಇಂಗ್ಲೆಂಡಿಗೂ ಇರುವ ಭೌಗೋಳಿಕ ದೂರವನ್ನು ಗಮನಿಸಿದರೆ, ಈ ಪದಗಳ ನಡುವೆ ಸಂಬಂಧ ಇರಬಹುದೆಂದು ಕಲ್ಪಿಸುವುದೂ ಕಷ್ಟ. ಆದರೆ ಇವು ಜ್ಞಾತಿ ಪದಗಳು ! 'ಮಾನವ ಜಾತಿ ತಾನೊಂದೆ' ಎನ್ನುವುದನ್ನು ನಿಸ್ಸಂದಿಗ್ಧವಾಗಿ ಸಾರುವ ದೀಪಸ್ತಂಭಗಳು !

ಭಾಷೆಯ ಮೂಲಕ ಸಂಸ್ಕೃತಿಯ ಬೇರುಗಳನ್ನು ಹುಡುಕುವುದು ಸಾಧ್ಯ ಎನ್ನುವುದನ್ನು ಬಹಳ ಮಂದಿ ವಿದ್ವಾಂಸರು ಇಂದಿಗೂ ಒಪ್ಪುವುದಿಲ್ಲ. ಈ ಕ್ಷೇತ್ರದಲ್ಲಿ ಮುನ್ನುಗ್ಗಿ ಕೆಲಸ ಮಾಡುವವರು ತೀರ ವಿರಳ. ಉತ್ತರ ಭಾರತದಲ್ಲಿ ಡಾ|| ರಾಮವಿಲಾಸ ಶರ್ಮ, ಡಾ|| ಸುನೀತಿ ಕುಮಾರ ಚಟರ್ಜಿಯವರಂತಹ ಒಬ್ಬಿಬ್ಬರು ಮಾತ್ರ ಈ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಕರ್ನಾಟಕದಲ್ಲಿ ಈ ರೀತಿಯ ಸಂಶೋಧನೆಗೆ ಮಾದರಿ ನಿರ್ಮಾಣ ಮಾಡಿದ ವಿದ್ವಾಂಸರೆಂದರೆ – ಡಾ|| ಶಂಕರ ಬಾಳದೀಕ್ಷಿತ ಜೋಶಿ (ಶಂ.ಬಾ. ಜೋಶಿ)ಯವರು. (೧೮೯೬-೧೯೯೧)

ಭಾಷೆಯ ಮೂಲಕ ಸಂಸ್ಕೃತಿಯ ಬೇರುಗಳನ್ನಷ್ಟೇ ಅಲ್ಲ, ಇತಿಹಾಸದ ಬೇರುಗಳನ್ನೂ ಬೆದಕಲು ಸಾಧ್ಯ ಎಂದು ತೋರಿಸಿಕೊಟ್ಟವರು ಅವರು. ಸುಮಾರು ೬೦ ವರ್ಷಗಳ ಕಾಲ ಸಂಶೋಧನೆ ಕೈಗೊಂಡು ಈ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಾರವರು.

**ಭಾಷೆ ಮತ್ತು ಅನುಭವ**

ನಮ್ಮ ಸಂಸ್ಕೃತಿಯ ಬೇರುಗಳನ್ನು ಬೆದಕಲು ಭಾಷೆಗಿಂತ ಉತ್ತಮವಾದ ಆಕರ ಇನ್ನೊಂದಿಲ್ಲ ಎಂಬುದು ಶಂಬಾ ನಂಬಿಕೆ. ಮಾನವನ ಸಂಘಜೀವನದ ಮೊಟ್ಟ ಮೊದಲ ಲಕ್ಷಣವೇ ಭಾಷೆ. ಒಬ್ಬಂಟಿಯಾಗಿರುವವನು ತನ್ನ ಅನುಭವಗಳನ್ನು ಯಾರ ಮುಂದೆ ಹಂಚಿಕೊಳ್ಳುತ್ತಾನೆ ? ಯಾರ ಅನುಭವಗಳನ್ನು ಪಡೆದುಕೊಳ್ಳುತ್ತಾನೆ ?

ಅನುಭವಗಳ ವಿನಿಮಯಕ್ಕೆ ಮಾನವ ಬಳಸುವ ಸಂಕೇತಗಳೇ ಭಾಷೆ. ಅನುಭವ ಮೈದೋರಿದ ಸಾಮಾಜಿಕ ಸನ್ನಿವೇಶಗಳ ಕುರುಹು ಭಾಷೆಯಲ್ಲಿ ಒಡಮೂಡಿರುತ್ತದೆ. ಸಂಸ್ಕೃತದಲ್ಲಿ ಕವಿ ಮತ್ತು ಋಷಿ ಎರಡೂ ಹತ್ತಿರ ಹತ್ತಿರ ಒಂದೇ ಅರ್ಥವನ್ನು ಕೊಡುವ ಪದಗಳಾಗಿದ್ದವು. ಋಷಿಯಲ್ಲದವನು ಕವಿಯಲ್ಲ ಎಂಬ ಮಾತುಂಟು. ಕಾವ್ಯ ರಚನೆಯ ಉದ್ದೇಶವೂ ತಪಸ್ಸಿನ ಉದ್ದೇಶವೂ ಏಕೀಭವಿಸಿದ್ದ ಕಾಲದ ಮಾತು ಇದು. ಸುಮಾರಾಗಿ ವೇದಗಳ ಕಾಲದ ಮಾತು. ಆದರೆ ಇಂದು ಆ ಏಕೋಭಾವ ನಷ್ಟವಾಗಿದೆ. ಋಷಿ ಮತ್ತು ಕವಿ ಬೇರೆ ಬೇರೆ ಅರ್ಥಗಳನ್ನು ಸೂಚಿಸುತ್ತವೆ. ಋಷಿ ಪಾರಲೌಕಿಕ ಆಶಯದ ಪದವಾಗಿದೆ; ಆದರೆ ಕವಿ ಲೌಕಿಕ ಆಶಯವನ್ನು ವ್ಯಕ್ತಪಡಿಸುವ ಪದವಾಗಿದೆ.

ಸಮುದ್ರದಲ್ಲಿ ಚಲಿಸುವ ವಾಹನಗಳನ್ನು ಸೂಚಿಸುವ ಹತ್ತಾರು ಪದಗಳು ಇಂಗ್ಲಿಷ್‌ನಲ್ಲಿವೆ. ಅಷ್ಟು ಪದಗಳು ಯಾವ ಭಾರತೀಯ ಭಾಷೆಯಲ್ಲೂ ಇಲ್ಲ. ಇಂಗ್ಲೆಂಡ್ 'ಕಡಲ ರಾಣಿ' ಎಂದು ಕರೆಸಿಕೊಂಡಿತ್ತು. ಅತ್ಯಂತ ಪ್ರಬಲವಾದ ನೌಕಾ ಸೈನ್ಯ ಇಂಗ್ಲೆಂಡಿನಲ್ಲಿತ್ತು. ಈ ಸನ್ನಿವೇಶದ ಛಾಪು ಆ ಭಾಷೆಯ ಪದಗಳಲ್ಲಿದೆ.

ಅಧ್ಯಾತ್ಮ ಸಾಧಕರನ್ನು ವರ್ಗೀಕರಿಸುವ ಹತ್ತಾರು ಪದಗಳು ಸಂಸ್ಕೃತ ಭಾಷೆಯಲ್ಲಿವೆ. ಅಷ್ಟು ಪದಗಳು ಪ್ರಪಂಚದ ಇನ್ಯಾವ ಭಾಷೆಯಲ್ಲೂ ಇರಲಿಕ್ಕಿಲ್ಲ. ಅಧ್ಯಾತ್ಮ ಸಾಧನೆಯಲ್ಲಿ ವಿವಿಧ ಸಂಶೋಧನೆಗಳನ್ನು ಇಲ್ಲಿನ ಜನ ಕೈಗೊಂಡಿದ್ದರು. ಈ ಸನ್ನಿವೇಶದ ಛಾಪು ಆ ಭಾಷೆಯ ಪದಗಳಲ್ಲಿದೆ.

ಯಾವ ಪದವು ಯಾವ ಸನ್ನಿವೇಶದಲ್ಲಿ ಭಾಷೆಯನ್ನು ಸೇರಿತು ಎಂಬ ಅಧ್ಯಯನವೇ ಕುತೂಹಲಕಾರಿ.

**ಬದಲಾವಣೆಯ ಕುರುಹು**

ಸಾಮಾಜಿಕ, ರಾಜಕೀಯ ಸನ್ನಿವೇಶಗಳು ಬದಲಾದಾಗ ಭಾಷೆಯ ಸ್ವರೂಪವೂ ತದನುಸಾರವಾಗಿ ಬದಲಾಯಿಸುತ್ತದೆ. ಋಗ್ವೇದದ ಕಾಲದಲ್ಲಿ ಬ್ರಹ್ಮರ್ಷಿ ದೇಶವೆಂದು ಇಂದಿನ ಪಂಜಾಬ ಪ್ರಾಂತವನ್ನು ಕರೆಯಲಾಗುತ್ತಿತ್ತು. ಕ್ರಮೇಣ ಅದರ ಗಡಿಗಳು ಪೂರ್ವದ ಕಡೆಗೂ ದಕ್ಷಿಣದ ಕಡೆಗೂ ವಿಸ್ತರಿಸಿ, ಗಂಗಾ ನದಿ ಬಯಲಿನ ಕಡೆಗೂ ವಿಂಧ್ಯ ಪರ್ವತದವರೆಗೂ ಹಬ್ಬಿತ್ತು. ಕ್ರಿ.ಶ. ೧೨-೧೩ನೇ ಶತಮಾನದ ಕಾಲಕ್ಕೆ ಆರ್ಯಾವರ್ತದ ಗಡಿಯು ಶರಾವತಿ-ವರದಾ ನದಿಯವರೆಗೂ ಹರಡಿತು. ಆಯಾ ಪ್ರಾಂತಗಳ ಪದಗಳು ಸಂಸ್ಕೃತದ ಶಬ್ದ ಭಂಡಾರವನ್ನು ಸೇರಿದವು.

ಇತ್ತ, ಕ್ರಿ.ಶ. ೯-೧೦ನೇ ಶತಮಾನದಲ್ಲಿ ರಚನೆಯಾದ ಕವಿರಾಜಮಾರ್ಗದಲ್ಲಿ ಕನ್ನಡದ ನಾಡು ಉತ್ತರದಲ್ಲಿ ಗೋದಾವರಿ ನದಿಯವರೆಗೂ ಹಬ್ಬಿತ್ತೆಂಬ ಉಲ್ಲೇಖವಿದೆ. ಇದಕ್ಕೆ ಪೂರಕವಾದ ನಿದರ್ಶನಗಳು ಸ್ಥಳನಾಮಗಳಲ್ಲಿ ಕಾಣಸುತ್ತವೆ.

ಗೋದಾವರಿ ನದಿಯ ಉತ್ತರಕ್ಕೆ ನರ್ಮದಾ ತೀರದವರೆಗೂ ಕನ್ನಡದ ಸ್ಥಳನಾಮಗಳಾದ 'ಹಟ್ಟಿ', 'ಪಾಡಿ'ಗಳು ಕಂಡುಬರುತ್ತವೆ. ಔರಂಗಾಬಾದ್ ಜಿಲ್ಲೆಯಲ್ಲಿ 'ಕನ್ನಡ' ಎಂಬ ಹೆಸರಿನ ಊರೇ ಇದೆ. ಇನ್ನೂ ಉತ್ತರಕ್ಕೆ ಹೋದರೆ ಇತಿಹಾಸ ಪ್ರಸಿದ್ಧವಾಗಿದ್ದ 'ಇಂದೂರು' ಸಾಮ್ರಾಜ್ಯ.

ಇವತ್ತು ಹಿಂದಿ ಭಾಷೆಯ ಪ್ರಾಂತಗಳಾಗಿರುವ ಪ್ರದೇಶಗಳಲ್ಲಿ ಕನ್ನಡ ಪದಗಳು ಹೇಗೆ ಬಂದವು ? ಆರ್ಯಾವರ್ತದ ಜನರು ನಿರಂತರ ನಡೆಸಿದ ದಾಳಿಗಳಿಂದ ಕನ್ನಡದ ಜನ ಹಿಮ್ಮೆಟ್ಟುತ್ತ ಹಿಮ್ಮೆಟ್ಟುತ್ತ ಅವರ ನಾಡಿನ ವ್ಯಾಪ್ತಿ ಸಂಕುಚಿತವಾಯ್ತು. ಈ ಸಾಮಾಜಿಕ ರಾಜಕೀಯ ಬದಲಾವಣೆಗಳಿಂದ ಭೌಗೋಳಿಕ ಸ್ವರೂಪದಲ್ಲಿ ಬದಲಾವಣೆಗಳೇನೋ ಆದವು. ಆದರೆ ಭಾಷೆಯು ಅಷ್ಟು ಸುಲಭವಾಗಿ ಬದಲಾಯಿಸಲಿಲ್ಲ. ತನ್ನ ಮೂಲ ವ್ಯಾಪ್ತಿಯನ್ನು ಪ್ರಕಟಿಸುತ್ತ ಉಳಿದುಬಿಟ್ಟಿತು !

ಇಂದಿನ ಗುಜರಾತ್-ಮಾಳವಗಳಲ್ಲಿ ಕಂಡುಬರುವ ಕಾಲ್ಹ-ಕಾಲ-ಕಾಲೇಶ್ವರ ದೇವರ ಬಣ್ಣದ ಬಗ್ಗೆ ಇರುವ ಗೊಂದಲವೂ ಈ ಸಾಮಾಜಿಕ-ರಾಜಕೀಯ ಬದಲಾವಣೆಯ ಸೂಚಕ. 'ಕಾಲ'ನ ಬಣ್ಣ ಕಪ್ಪೇ ? ಬಿಳುಪೇ ? ಯಾವುದೇ ಸಾಂಪ್ರದಾಯಿಕ ಆಕರಗಳಿಂದ ಈ ಗೊಂದಲಕ್ಕೆ ಪರಿಹಾರ ಕಾಣಸುವುದಿಲ್ಲ. ಪರಿಹಾರ ಬೇಕಾಗಿದ್ದರೆ ಭಾಷೆಯನ್ನೇ ಆಶ್ರಯಿಸಬೇಕಾಗುತ್ತದೆ.

ಮೂಲದಲ್ಲಿ ಆರ್ಯೇತರರ ದೇವರಾಗಿದ್ದ ಕಲ್ಲೇಶ್ವರನನ್ನು ಆರ್ಯರು ತಮ್ಮದಾಗಿಸಿಕೊಂಡರು. ದೇವರು ಪರಾಧೀನನಾದ; ಆದರೆ ಆ ಸಂಕೇತ ಆಗಲಿಲ್ಲ. ಕಲ್ಲೇಶ್ವರದ ಮೂಲ ಯಾವುದು ಎಂದು ವಿವರಿಸುವುದು ಅವನಿಂದ ಆಗಲಿಲ್ಲ. ಗೊಂದಲ ಉಳಿದುಬಿಟ್ಟಿತ್ತು !

ಹೀಗೆ ನೂರಾರು ಪದಗಳ, ನೂರಾರು ಸಂಕೇತಗಳ ಆಧಾರದಿಂದ ನಮ್ಮ ಸಂಸ್ಕೃತಿಯ ಬೇರುಗಳನ್ನು ಬೆದಕುವ ಕೆಲಸ ಇನ್ನೂ ಆಗಬೇಕಾಗಿದೆ. ಇತಿಹಾಸದ ಆಕರಗಳಿಗೂ ನಿಲುಕದ ಅನೇಕ ತಥ್ಯಗಳು ಭಾಷೆಯಲ್ಲಿ ಅಡಕವಾಗಿ ಕುಳಿತಿವೆ. ಆ ಭಂಡಾರದ ಮುದ್ರೆಯನ್ನೊಡೆಯುವ ಧೀರರಿಗಾಗಿ ಕಾಲ ಕಾಯುತ್ತಿದೆ.

ಶಂಬಾರವರು ನೂರಾರು ಸಂಕೇತಗಳನ್ನು ಒಡೆದು ಇತಿಹಾಸಕ್ಕೆ ಹೊಸ ದೃಷ್ಟಿಯನ್ನು ನೀಡಿದರು. ಅವರ ಅರ್ಧಕ್ಕೆ ಬಿಟ್ಟ ಕೆಲಸವನ್ನು ಮುಂದುವರಿಸುವವರು ಬೇಕಾಗಿದ್ದಾರೆ.

**ಎಂ. ಎ. ಚಕ್ರಪಾಣಿ**

ನಂ.೧/೧೬೦, ಕುರುದಗಡ್ಡಿ, ಹೌಸಿಂಗ್ ಬೋರ್ಡ್ ಕಾಲನಿ, ಹಗರಿಬೊಮ್ಮನಹಳ್ಳಿ-೫೮೩ ೨೧೨, ಬಳ್ಳಾರಿ ಜಿಲ್ಲೆ

# ಭೂತ ಚೇಷ್ಟೆ

**ದೇ**ವಕಿ ಮೂವತ್ತೆರಡು ವಯಸ್ಸಿನ ವಿವಾಹಿತ ಮಹಿಳೆ. ಈಕೆ ಮಹಮ್ಮದ್ ಘಸ್ನಿಯ ವಂಶಸ್ಥೆ. ಎಸ್.ಎಸ್.ಎಲ್.ಸಿ. ಯಲ್ಲಿ ಆರು ಸಾರಿ ಫೇಲಾಗಿ ಸರಸ್ವತಿ ಈಕೆಗೆ ಒಲಿಯದೆ, ಮದುವೆಯಾಗಿ ಎರಡು ಮಕ್ಕಳ ತಾಯಿಯಾದಳು. ಈಕೆಯ ಪತಿರಾಯ ಚಿಕ್ಕ ಹೋಟೆಲು ಮಾಲೀಕ. ಐಶ್ವರ್ಯವಂತರಲ್ಲದಿದ್ದರೂ ಜೀವನ ಸಾಗಿಸಲು ಕಷ್ಟಪಡಬೇಕಿಲ್ಲ. ಮನೆಯಲ್ಲಿ ಪತಿ-ಪತ್ನಿ, ಮಕ್ಕಳಲ್ಲದೆ ಅತ್ತೆ ಮಾವ ಸಹ ಇದ್ದಾರೆ. ಸಂಸಾರದ ವಾತಾವರಣ ಎಲ್ಲರೂ ಒಪ್ಪುವಂತಿತ್ತು. ಈಕೆಯ ಅತ್ತೆ ಎಲ್ಲರ ಅತ್ತೆಯಂತಲ್ಲ. ಸ್ವಂತ ಮಗಳ ರೀತಿ ನೋಡಿಕೊಳ್ಳುತ್ತಿದ್ದಳು. ಮಕ್ಕಳೂ ಶಾಲೆಯಲ್ಲಿ ಚೆನ್ನಾಗಿ ಅಭ್ಯಾಸ ಮಾಡಿಕೊಳ್ಳುತ್ತಿದ್ದರು. ಯಾರಿಗೂ ಯಾವುದಕ್ಕೂ ತೊಂದರೆ ಇರಲಿಲ್ಲ.

ಹೀಗಿರುವಾಗ ಇವರ ಸಂಸಾರದಲ್ಲಿ ಒಂದು ದಿನ ವಿಘ್ನ ಕಂಡುಬಂತು. ಮದುವೆಯಾಗಿ ಇಷ್ಟು ವರ್ಷವಾದರೂ ಒಮ್ಮೆಯೂ ದೇವಕಿ ಪತಿಯ ಹೋಟೆಲ್‌ಗೆ ಹೋಗದವಳು ಆ ದಿನ ಮಟಮಟ ಮಧ್ಯಾನ್ಹ ಸೀದಾ ಹೋಟೆಲ್ಲಿನ ಅಡುಗೆ ಮನೆಗೆ ಹೋದಳು. ಗಂಡ ಹನುಮಂತರಾಯಪ್ಪ ಇವಳನ್ನು ಗಮನಿಸಲಿಲ್ಲ. ಅಡುಗೆ ಮಾಡುವವರು ಇವಳನ್ನು ಗುರುತಿಸಿ ಇವಳಿಗೆ ನಮಸ್ಕರಿಸಿದರು. ಇವಳು ಅದನ್ನು ಅಲಕ್ಷಿಸಿ, ಪ್ರತಿಯಾಗಿ ನಮಸ್ಕರಿಸಿದೆ ಇಡ್ಲಿ ಹಿಟ್ಟಿನಲ್ಲಿ ಉಗಿದಳು. ಕಾಫಿ ಇರುವ ಪಾತ್ರೆಗೆ ಮುಸುರೆ ನೀರು ಸೇರಿಸಿದಳು. ನೌಕರರು ''ಅಮ್ಮ ನೀವೇನು ಮಾಡುತ್ತಿದ್ದೀರಿ'' ಎಂದು ಕೇಳಿದರು. ದೇವಕಿ ಉತ್ತರಿಸದೆ ಗಾಜಿನ ಗೂಡಿನಲ್ಲಿ ಇಟ್ಟಿದ್ದ ಜಾಮೂನು, ಜಿಲೇಬಿ, ಬಾಯಿಗೆ ಸೇರಿಸಿದಳು. ಕೆಲಸದವರು ಮೂಕಪ್ರೇಕ್ಷಕರಾದರು. ಕೆಲವು ಕ್ಷಣದಲ್ಲಿ ಅಲ್ಲಿದ್ದ ಪಾತ್ರೆ, ಸೌಟು ಇನ್ನಿತರೆ ವಸ್ತುಗಳನ್ನು ಚೆಲ್ಲಾಪಿಲ್ಲಿ ಮಾಡಿ ಮೂಲೆಮೂಲೆಗೆ ಬಿಸಾಡಿದಳು. ಅಡುಗೆ ಮನೆಯಲ್ಲಾದ ಶಬ್ದ ಹನುಮಂತರಾಯಪ್ಪನನ್ನು ಎಚ್ಚರಿಸಿತು. ಗಲ್ಲಾಪೆಟ್ಟಿಗೆ ಬಿಟ್ಟು ಒಳಬಂದು ನೋಡಿ ದಂಗಾದ. ''ದೇವಕಿ, ದೇವಕಿ, ನೀನೇನು ಮಾಡುತ್ತಿದ್ದೀಯ? ಇಲ್ಲಿಗೇಕೆ ಬಂದೆ ? ಮನೆಗೆ ಹೋಗು'' ಎಂದು ಗದರಿದ.

ಆದರೆ ದೇವಕಿ ಇವನ ಗದರಿಕೆಯನ್ನು ಲಕ್ಷಿಸದೆ ತನ್ನ ಕೆಲಸ ಮುಂದುವರಿಸಿದಳು. ಅವಳನ್ನು ಕೆಲಸಗಾರರ ಸಹಾಯದಿಂದ ಹನುಮಂತರಾಯಪ್ಪ ಆಟೋದಲ್ಲಿ ಮನೆಗೆ ಕರೆದೊಯ್ದ. ದೇವಕಿ ಮನೆ ಸೇರಿದ ತಕ್ಷಣ ಹಾಸಿಗೆಯಲ್ಲಿ ಉರುಳಿ ನಿದ್ರಿಸಿದಳು. ಗಂಡನು ಹೆಂಡತಿ ಮಾಡಿದುದನ್ನು ಅಪ್ಪ ಅಮ್ಮಂದಿರಲ್ಲಿ ವಿವರಿಸಿದ. ಸಂಜೆ ದೇವಕಿ ನಿದ್ದೆಯಿಂದೆದ್ದಾಗ ಆರು ಗಂಟೆ. ಅತ್ತೆ ಮಾವ ಅವಳಲ್ಲಿ ಆದ ವಿಷಯವನ್ನು ಪ್ರಸ್ತಾಪಿಸದೆ ಸುಮ್ಮನಿದ್ದರು. ದೇವಕಿ ಮಾಮೂಲಿನಂತೆ ಮಕ್ಕಳಿಂದ ಹೋಂವರ್ಕ್ ಮಾಡಿಸಿದಳು. ಹಿರಿಯರಿಗೆ ಚಹ ಮಾಡಿ ಕೊಟ್ಟಳು. ಅಡುಗೆ ಮಾಡಿ ಮಕ್ಕಳಿಗೆ ಊಟ ಬಡಿಸಿ ಅವರನ್ನು ಮಲಗಿಸಿದಳು. ಪತಿ ಮಾಮೂಲಿನಂತೆ ರಾತ್ರಿ ಹತ್ತಕ್ಕೆ ಮನೆಗೆ ಬಂದಾಗ ವಾತಾವರಣ ಪ್ರತಿ ದಿನದಂತಿತ್ತು. ಹೋಟೆಲಿನಲ್ಲಿ ನಡೆದ ಘಟನೆ ಬಗ್ಗೆ ಅಪ್ಪ ಅಮ್ಮಂದಿರ ಮುಂದೆ ಪತ್ನಿಯನ್ನು ಪ್ರಶ್ನಿಸಿದ. ದೇವಕಿ ತಾನು ಮನೆ ಬಿಟ್ಟು ಎಲ್ಲಿಗೂ ಹೋಗಿಲ್ಲ. ತನಗೆ ಹೋಟೆಲಿನಲ್ಲಿ ಏನು ಕೆಲಸವಿದೆ ? ಯಾವತ್ತೂ ಬರದವಳು ಆ ದಿನ ತಾನೇಕೆ ಹೋಟೆಲ್ಲಿಗೆ ಬರಬೇಕಿತ್ತು? ಎಂದು ಮರುಪ್ರಶ್ನಿಸಿದಳು. ಮೂವರೂ ಹೇಳಿದರೂ ತಾನು ಅಲ್ಲಿಗೆ ಹೋಗಲೇ ಇಲ್ಲವೆಂದು ವಾದಿಸಿದಳು. ಪತಿಗೆ ಸಿಟ್ಟು ಬಂದು ಅವಳ ಕೆನ್ನೆಗೆ ಹೊಡೆದ. ಅವಳು ಅಳುತ್ತಾ ಮಲಗಿದಳು.

ಮಾರನೇ ದಿನದಿಂದ ಯಥಾಪ್ರಕಾರ ಕೆಲಸ ಕಾರ್ಯಗಳು ಮುಂದುವರೆದವು. ಆ ವಿಷಯವನ್ನು ಎಲ್ಲರೂ ಮರೆತರು. ಆದರೆ ಇದಾದ ಒಂದು ವಾರದ ನಂತರ ದೇವಕಿ ಮತ್ತೊಮ್ಮೆ ಕೆಟ್ಟದಾಗಿ ವರ್ತಿಸಿದಳು. ಮನೆಯಿಂದ ಸ್ವಲ್ಪ ದೂರದಲ್ಲಿ ಇರುವ ಬಸ್ ನಿಲ್ದಾಣದಲ್ಲಿ ನಿಂತು ಉಟ್ಟಬಟ್ಟೆಯನ್ನು ಹರಿದುಕೊಂಡು ಅರೆನಗ್ನಳಾಗಿ ನಿಂತಿದ್ದಳು. ಇದನ್ನು ಕಂಡ ಅವಳ ಪಕ್ಕದ ಮನೆಯವರು ಅವಳ ಗಂಡನಿಗೆ ವಿಷಯ ತಿಳಿಸಿದರು. ಗಂಡ ಬಂದು ನೋಡಿ ದಂಗಾದ. ದೇವಕಿಯ ಸೀರೆ ಅಲ್ಲಲ್ಲಿ ಹರಿದಿದೆ. ಜಾಕೀಟು ಹರಿದು ಭುಜಗಳು ಹೊರಗೆ ಕಾಣುತ್ತಿವೆ. ಸೀರೆ ಮೊಣಕಾಲ ಮೇಲೆ ಸರಿದಿದೆ. ತನ್ನ ತುಟಿಗಳನ್ನು ಹಲ್ಲಿನಿಂದ ಅಗಿಯುತ್ತಿದ್ದಾಳೆ. ತಕ್ಷಣ ಅವಳನ್ನು ಮನೆಗೆ ಎಳೆದುಕೊಂಡು ಬಂದ ಹನುಮಂತರಾಯಪ್ಪ ಅವಳನ್ನು ಕೈ ನೋಯುವಷ್ಟು ಥಳಿಸಿದ. ಅತ್ತೆ ಬಲಾತ್ಕಾರದಿಂದ ಬೇರೆ ಸೀರೆ ಉಡಿಸಿದಳು. ದೇವಕಿಯನ್ನು ರೂಮಿನಲ್ಲಿ ಕೂಡಿ ಹಾಕಿದರು. ಕೆಲವು ನಿಮಿಷಗಳ ನಂತರ ಅವಳನ್ನು ಪ್ರಶ್ನಿಸಿದಾಗ ತನಗೇನೂ ತಿಳಿಯದೆಂದಳು. ಅಕ್ಕಪಕ್ಕದವರಿಗೆ ಈ ವಿಷಯ ತಿಳಿಯಲು ಸಮಯ ಬೇಕಾಗಲಿಲ್ಲ. ಇಂತಹ ವಿಷಯಗಳು ಕಾಡ್ಗಿಚ್ಚಿನಂತೆ ಜನರಿಂದ ಜನರಿಗೆ ತಲುಪುತ್ತವೆ. ಹಿತಚಿಂತಕರ ಸಲಹೆ ಮೇರೆಗೆ ದೇವಕಿಯಲ್ಲಿ ಆಗುತ್ತಿರುವುದು ಭೂತ ಚೇಷ್ಟೆ ಎಂದು ಮನೆಯವರು ತೀರ್ಮಾನಿಸಿ, ಅವರಿವರು ಹೇಳಿದಂತೆ ದೆವ್ವ ಬಿಡಿಸುವವನಲ್ಲಿಗೆ ಕರೆದೊಯ್ದರು. ಕರ್ಪೂರ, ಊದುಬತ್ತಿ, ಬೇವಿನಸೊಪ್ಪು ಎಲ್ಲಾ ನೆಲದ ಮೇಲೆ ಹರಡಿ ಉರಿಯುವ ಬೆಂಕಿ ಮುಂದೆ ಮಾಂತ್ರಿಕ ಕುಳಿತಿದ್ದ. ಅವನ ಕಣ್ಣು ಕೆಂಪಗಿದ್ದವು. ಅವನ ಬಾಯಿಂದ ಸೆರೆವಾಸನೆ ಯಥೇಚ್ಛವಾಗಿ ಬರುತ್ತಿತ್ತು.

''ಹೇಳು ನೀನು ಯಾರು ?'' ಮಾಂತ್ರಿಕ ಕೇಳಿದ.

''ನಾನು ದೇವಕಿ'' ಉತ್ತರಿಸಿದಳು.

''ನೀನು ದೇವಕಿಯಲ್ಲ.''

''ನಾನು ದೇವಕಿ.''

''ಸುಳ್ಳು ಹೇಳಿದರೆ ಚರ್ಮ ಸುಲಿದು ಬಿಡುತ್ತೇನೆ'' ಗರ್ಜಿಸಿದ.

''ನಾನು ಸುಳ್ಳು ಹೇಳುವುದಿಲ್ಲ. ನಿಜವನ್ನೇ ಹೇಳುತ್ತಿದ್ದೇನೆ.''

''ಹಾಗಾದರೆ ಈಗ ಹೇಳು, ನೀನು ಯಾರು ?''

''ನಾನು ದೇವಕಿ.''

''ಇರು ನಿನಗೆ ಮಾಡುತ್ತೇನೆ'' ಎಂದ ಮಾಂತ್ರಿಕ ಕರ್ಪೂರ ಹಚ್ಚಿ ಬೇವಿನ ಸೊಪ್ಪು ಮತ್ತು ಪೊರಕೆಯಿಂದ ದೇವಕಿಯನ್ನು ಥಳಿಸಿದ. ದೇವಕಿ ಆರ್ತನಾದ ಮಾಡಿದಳು. ಏನೂ ಪ್ರಯೋಜನವಾಗಲಿಲ್ಲ.



ಡಾ|| ಜಿ. ಎಸ್. [illegible]

[illegible]ನೇ ಪುಟಕ್ಕೆ

# ಉಲ್ಕೆಗಳ ವೈಭವದ ಮಾದರಿ



ಡಾ|| ಬಿ. ಎಸ್. ಶೈಲಜಾ

ಆಗಸ್ಟ್ ಎಂದ ಕೂಡಲೆ ಹವ್ಯಾಸಿ ವೀಕ್ಷಕರು ಚುರುಕಾಗುತ್ತಾರೆ. ಜಗತ್ತಿನಾದ್ಯಂತ ಎಲ್ಲೆಲ್ಲೂ ಅಷ್ಟೇ. ಇದಕ್ಕೆ ಕಾರಣ ಪರ್ಸಿಯೈಡ್ ಉಲ್ಕಾವೃಷ್ಟಿ. ಇದರ ನಿಯತಕಾಲಿಕ ಪ್ರದರ್ಶನ ಸಾವಿರಾರು ವರ್ಷಗಳಿಂದ ಅವ್ಯಾಹತವಾಗಿ ನಡೆದುಬಂದಿದೆ. ಕ್ರಿ.ಪೂ. ೩೬ರಲ್ಲಿ ಚೀನೀಯರು ಈ ಉಲ್ಕಾವೃಷ್ಟಿಯನ್ನು ಕಂಡು ಆನಂದಿಸಿದ್ದರು. ಪ್ರತಿವರ್ಷ ಆಗಸ್ಟ್ ೧೨ರಂದು ಈ ಉಲ್ಕಾವೃಷ್ಟಿಯದು ಗರಿಷ್ಠ ಚಟುವಟಿಕೆ. ಗಂಟೆಗೆ ೬೦ರಿಂದ ೧೦೦ ಉಲ್ಕೆಗಳು ಬೀಳುವುವು.

ಈ ಉಲ್ಕಾವೃಷ್ಟಿ ಎಲ್ಲಿಂದ ಬರುತ್ತಿದೆ ಎಂಬುದನ್ನು ಕಂಡುಹಿಡಿಯಲು ಹೊಂಚುಹಾಕಿದ ವಿಜ್ಞಾನಿ ಇಟಲಿಯ ಜಿಯಾವೆನಿ ಷಿಯಾಪರೇಲಿ. ನೂರೈವತ್ತು ವರ್ಷಗಳ ಹಿಂದೆ ಆತ ಪ್ರತಿ ಆಗಸ್ಟ್ ೧೨ರ ರಾತ್ರಿ ಇಡೀ ಉಲ್ಕೆಗಳನ್ನು ಗಮನಿಸಿ, ಅವುಗಳ ಚಲನೆಯ ನಕ್ಷೆ ತಯಾರಿಸಿದ. ಈ ಗೆರೆಗಳನ್ನು ಹಿಂದುವರಿಸಿದಾಗ (ಅಂದರೆ ಹಿಂದಕ್ಕೆ ಬೆಳೆಸಿದಾಗ) ಅವೆಲ್ಲವೂ ಆಕಾಶದಲ್ಲಿ ಬಿಂದುವೊಂದರಿಂದ ಹೊರಟಂತೆ ಕಾಣುತ್ತಿತ್ತು. ಈ ಬಿಂದುವಿಗೆ ರೇಡಿಯಂಟ್ ಎಂಬ ಹೆಸರಿದೆ. ಇದು ಪರ್ಸಿಯಸ್ (ಅರ್ಜುನ) ನಕ್ಷತ್ರಪುಂಜದಲ್ಲಿರುವುದರಿಂದ ಈ ಉಲ್ಕಾವೃಷ್ಟಿಗೆ ಪರ್ಸಿಯೈಡ್ಸ್ ಎಂಬ ಹೆಸರಿದೆ. ಆದರೆ ಈ ಬಿಂದುವಿನ ವೈಶಿಷ್ಟ್ಯ ಏನು ಎಂಬುದನ್ನು ಪತ್ತೆ ಮಾಡಿದವ ಷಿಯಾಪರೇಲಿ. ದಿನದಿನಕ್ಕೆ ಈ ಬಿಂದುವಿನ ಸ್ಥಾನ ಸ್ವಲ್ಪ ಸ್ವಲ್ಪವಾಗಿ ವ್ಯತ್ಯಾಸವಾಗುತ್ತಿದ್ದುದನ್ನು ಆತ ಗಮನಿಸಿದ. ಅಂದರೆ ಉಲ್ಕೆಗಳನ್ನು ಸೃಷ್ಟಿಸುತ್ತಿರುವ ಉಗ್ರಾಣ ನಕ್ಷತ್ರಗಳಷ್ಟು ದೂರದಲ್ಲಿಲ್ಲ, ಚಂದ್ರ ಮತ್ತು ಗ್ರಹಗಳಷ್ಟು ಸಮೀಪವಾಗಿರಬೇಕು ಎಂದು ಆತ ತರ್ಕಿಸಿದ.

ಈ ಮಧ್ಯೆ ಸ್ವಿಫ್ಟ್ ಮತ್ತು ಟಟಲ್ ಎಂಬ ಇಬ್ಬರು ವೀಕ್ಷಕರು ಧೂಮಕೇತುವೊಂದನ್ನು ಗುರುತಿಸಿದರು. (ಈಗ ಅದಕ್ಕೆ ೧೮೬೨ III ಎಂಬ ಸಂಖ್ಯೆಯನ್ನು ಕೊಡಲಾಗಿದೆ.) ಅದರ ಕಕ್ಷೆಯನ್ನು ಲೆಕ್ಕಹಾಕಿದಾಗ ಷಿಯಾಪರೇಲಿಗೆ ರಹಸ್ಯವೊಂದು ತಿಳಿಯಿತು. ಭೂಮಿಯ ಕಕ್ಷೆಯ ತಲವನ್ನು ಅದು ದಾಟುವ ಬಿಂದುವೇ ರೇಡಿಯಂಟ್ ಆಗಿತ್ತು. ಅಂದರೆ ಉಲ್ಕಾವೃಷ್ಟಿಗೂ ಧೂಮಕೇತುವಿಗೂ ಸಂಬಂಧವಿದೆ ಎಂದಾಯಿತು. ಸೂರ್ಯನನ್ನು ಧೂಮಕೇತು ಸಮೀಪಿಸುವಾಗ ಅದರ ಮೇಲ್ಮೈಯಲ್ಲಿರುವ ಅನಿಲ ಮತ್ತು ಅಣುಗಳು, ದೂಳು - ಇವೆಲ್ಲವೂ ಆವಿಯಾಗಿ ಬಾಲದಂತೆ ಹರಡಿಕೊಳ್ಳುತ್ತವೆಯಷ್ಟೇ. ಧೂಮಕೇತು ಹಿಂದಿರುಗಿಹೋದಮೇಲೂ ಅದರ ಕಕ್ಷೆಯುದ್ದಕ್ಕೂ ಆ ದೂಳು ಮತ್ತು ಕಣಗಳು ಉಳಿದುಕೊಳ್ಳುತ್ತವೆ. ಭೂಮಿ ವರ್ಷಕ್ಕೊಮ್ಮೆ ಕಕ್ಷೆಯನ್ನು ಸಮೀಪಿಸಿದಾಗ ಇವು ಭೂಮಿಯತ್ತ ಧಾವಿಸುತ್ತವೆ. ವಾತಾವರಣ ದೊಡನೆ ಘರ್ಷಣೆ ನಡೆಸಿ ಬಿಸಿಯಾಗುತ್ತವೆ. ನೆಲದತ್ತ ಸಾಗಿದಂತೆ ಅವುಗಳಿಗೆ ಆಮ್ಲಜನಕ ದೊರಕುತ್ತದೆ. ತತ್‌ಕ್ಷಣವೇ ಉರಿದು ಬೂದಿಯಾಗುತ್ತವೆ. ಹೀಗೆ ಇವು ಪಟಾಕಿಗಳಂತೆ ನಮ್ಮ ಆಕಾಶವನ್ನು ಬೆಳಗುತ್ತವೆ.




ಈ ನಕ್ಷೆ ಆಗಸ್ಟ್ ೧೫ಕ್ಕೆ ಅನ್ವಯವಾಗುವುದಾದರೂ (ಬುಧ, ಶುಕ್ರಗಳ ಸ್ಥಾನವನ್ನು ಹೊರತುಪಡಿಸಿ) ತಿಂಗಳುದ್ದಕ್ಕೂ ಬಳಸಬಹುದು



ಇದೇ ಅಂಶವನ್ನು ಉಳಿದ ಉಲ್ಕಾವೃಷ್ಟಿಗಳಿಂದಲೂ ಖಚಿತಪಡಿಸಿ ಕೊಳ್ಳಲಾಗಿದೆ. ನಿಯತಕಾಲಿಕವಾಗಿ ಬರುವ ಧೂಮಕೇತುಗಳು ಪ್ರತಿಯೊಂದು ಪ್ರದಕ್ಷಿಣೆಯಲ್ಲೂ ಉಗ್ರಾಣಕ್ಕೆ ಸರಕನ್ನು ತುಂಬಿಹೋಗುವುದರಿಂದ ವೃಷ್ಟಿಯಲ್ಲಿ ಹೆಚ್ಚಿನ ಉಲ್ಕೆಗಳು ಬೀಳುವುದನ್ನೂ ಗಮನಿಸಲಾಗಿದೆ.

ಸ್ವಿಫ್ಟ್-ಟಟಲ್ ಧೂಮಕೇತುವಿನ ಪ್ರದಕ್ಷಿಣಾವಧಿ ಸುಮಾರು ೧೨೦ ವರ್ಷಗಳು ಎಂದು ಲೆಕ್ಕಹಾಕಲಾಗಿತ್ತು. ಅದರ ಪ್ರಕಾರ ೧೯೮೨ರಲ್ಲಿ ಬರಬೇಕಾಗಿದ್ದ ಅದು ಹತ್ತು ವರ್ಷ ತಡವಾಗಿ ೧೯೯೨ರಲ್ಲಿ ಬಂದು ಹೋಯಿತು. ಆದ್ದರಿಂದ ಕಳೆದ ಹತ್ತು ವರ್ಷಗಳಿಂದ ಪರ್ಸಿಯೈಡ್ ಉಲ್ಕಾವೃಷ್ಟಿಯಲ್ಲಿ ಹೆಚ್ಚಳ ಕಂಡುಬಂದಿದೆ.

ಧೂಮಕೇತುವಿನ ಕಣಗಳು ವಿರಳವಾಗಿ ಹರಡಿಕೊಂಡಿರುವುದರಿಂದ ಉಲ್ಕಾವೃಷ್ಟಿ ಸುಮಾರು ಒಂದು ತಿಂಗಳು ನಡೆಯುತ್ತದೆ. ಜುಲೈ ೧೭ರಿಂದ ಗಂಟೆಗೆ ೪-೫ರಂತೆ ಆರಂಭವಾಗುವ ವೃಷ್ಟಿ ಕ್ರಮೇಣ ಆಗಸ್ಟ್ ೧೨ರ ಹೊತ್ತಿಗೆ ಗಂಟೆಗೆ ೬೦ರಿಂದ ೧೦೦ ಸಂಖ್ಯೆ ಮುಟ್ಟುತ್ತದೆ. ಕ್ರಮೇಣ ಕಡಿಮೆಯಾಗಿ ಆಗಸ್ಟ್ ೨೪ರವರೆಗೂ ನಡೆಯುತ್ತದೆ. ಕಣಗಳ ಗುಂಪನ್ನು ನಾವು ಕಾಣಲಾರೆವು. ಆದರೆ ವೃಷ್ಟಿಯಿಂದ ಅವುಗಳ ಹಂಚಿಕೆಯನ್ನು ಪರೋಕ್ಷವಾಗಿ ತಿಳಿಯಬಲ್ಲೆವು.

ಈ ವರ್ಷ ಉಲ್ಕಾವೃಷ್ಟಿಗೆ ಎಂದಿನಂತೆ ಮಳೆ ಮೋಡಗಳು ಸಾಕಷ್ಟು ಅಡ್ಡಿ ಒದಗಿಸಬಹುದು. ಹಾಗೇನಾದರೂ ಅವು ಬಿಡುವುಕೊಟ್ಟಲ್ಲಿ ಒಳ್ಳೆಯ ಅವಕಾಶವಿದೆ. ಅಮಾವಾಸ್ಯೆ (೯ನೇ ತಾರೀಖು)ಯ ನಂತರ ದಿನೇ ದಿನೇ ತಡವಾಗಿ ಕಂತುವ ಚಂದ್ರ ೧೨ರಂದು ವೃಷ್ಟಿಯ ವೀಕ್ಷಣೆಗೆ ಅಡ್ಡಿಪಡಿಸುವುದಿಲ್ಲ. ರಾತ್ರಿ ಹತ್ತು ಗಂಟೆಯ ಸುಮಾರಿಗೆ ಪರ್ಸಿಯಸ್ ಈಶಾನ್ಯ ದಿಕ್ಕಿನಲ್ಲಿ ಉದಯಿಸುತ್ತದೆ. ಬೆಳಗಿನ ಜಾವದವರೆಗೂ ಉಲ್ಕೆಗಳನ್ನು ನೋಡಬಹುದು. ಆಗಸ್ಟ್ ಮೊದಲೆರಡು ದಿನಗಳಲ್ಲಿ ಆಗೊಮ್ಮೆ ಈಗೊಮ್ಮೆ ಆಕಾಶದತ್ತ ಕಣ್ಣು ಹಾಯಿಸಿದರೆ ಸಾಕು. ೯ರಿಂದ ಮುಂದಕ್ಕೆ ಬೆಳಗಿನ ಝಾವ ಅರ್ಧ-ಮುಕ್ಕಾಲು ಗಂಟೆ ಗಮನಿಸಿದರೆ ವೃಷ್ಟಿಯ ಚಟುವಟಿಕೆ ಗೋಚರವಾಗುವುದು.

ನಕ್ಷೆಯ ಸಹಾಯದಿಂದ ಪರ್ಸಿಯುಸ್ ಪುಂಜವನ್ನು ಗುರುತಿಸಲು ಪ್ರಯತ್ನಿಸಿ. ಪ್ರಕಾಶಮಾನವಾಗಿ




***ಪರ್ಸಿಯಸ್ (ಅರ್ಜುನ) ನಕ್ಷತ್ರ ಪುಂಜವನ್ನು ಪೂರ್ವದಿಕ್ಕಿನಲ್ಲಿ ಬೆಳಗಿನ ಝಾವ ಹುಡುಕಲು ಸಹಾಯವಾಗುವ ನಕ್ಷೆ***

ಕಾಣುವ ಶನಿಗ್ರಹವನ್ನು ಆಧಾರವಾಗಿ ಇಟ್ಟುಕೊಳ್ಳಬಹುದು. ಇದು ವೃಷಭ ಮತ್ತು ಮಿಥುನ ರಾಶಿಗಳ ನಡುವೆ ಇದೆ.

ಈ ತಿಂಗಳ ಇತರ ವಿಶೇಷಗಳನ್ನು ಖಗೋಳ ದಿನಚರಿಯಲ್ಲಿ ಪಟ್ಟಿ ಮಾಡಿದೆ. ಸಂಜೆಯಲ್ಲಿ ಪ್ರಕಾಶಮಾನವಾಗಿ ಬೆಳಗುವ ಶುಕ್ರನನ್ನು ಕಾಣಲು ಒಳ್ಳೆಯ ಅವಕಾಶವಿದೆ. ಆಗಸ್ಟ್ ೨೨ರಂದು ಗರಿಷ್ಠ ಎತ್ತರದಲ್ಲಿ ಇದು ಕಾಣುತ್ತದೆ. ತಿಂಗಳ ಕೊನೆಯ ದಿನಕ್ಕೆ ಕನ್ಯಾರಾಶಿಯ ಚಿತ್ತಾ ನಕ್ಷತ್ರದ ಸಮೀಪ ಕಾಣುತ್ತದೆ. ಸೂರ್ಯಾಸ್ತದ ನಂತರ ಮೂರು ಗಂಟೆಗಳಷ್ಟು ಕಾಲ ನೋಡಲು ಸಿಗುತ್ತದೆ.

ಬುಧಗ್ರಹವೂ ಸಂಜೆಯ ಆಕಾಶದಲ್ಲೇ ಇದೆಯಾದರೂ ಸಂಧ್ಯಾ ಪ್ರಕಾಶದ ಕಾರಣ ಅದನ್ನು ಹುಡುಕಲು ಸಾಧ್ಯವಾಗಲಾರದು. ತಿಂಗಳ ಕೊನೆಯಲ್ಲಿ ಶುಕ್ರ ಗ್ರಹಕ್ಕೂ ದಿಗಂತಕ್ಕೂ ಮಧ್ಯೆ ಕಾಣುತ್ತದೆ.

ಮಂಗಳ ಗ್ರಹ ಸೂರ್ಯನ ಜೊತೆಗೇ ಉದಯಿಸಿ ಕಂತುವುದರಿಂದ ನೋಡಲು ಸಿಗುವುದಿಲ್ಲ. ಗುರು ಗ್ರಹ ತಿಂಗಳ ಕೊನೆಯಲ್ಲಿ ಬೆಳಗಿನ ಝಾವ ಪೂರ್ವದ ಅಂಚಿನಲ್ಲಿ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳ ವೈಭವವನ್ನು ಬರೆಯಲು ಸಾಧ್ಯವಾಗದು. ವರುಣನ ಕೃಪೆ ಸಿಕ್ಕಿದಾಗಲೆಲ್ಲಾ ಆಕಾಶಗಂಗೆಯ ಸೌಂದರ್ಯವನ್ನು ಕಂಡು ಆನಂದಿಸಲು ಮರೆಯದಿರಿ. ದಕ್ಷಿಣದ ವೃಶ್ಚಿಕ, ಧನುಗಳಲ್ಲಿ (ದುರ್ಬೀನಿನಿಂದ ಕಾಣುವ) ನಕ್ಷತ್ರ ಗುಚ್ಛಗಳು, ನೆಬ್ಯುಲಗಳು ಧಾರಾಳವಾಗಿವೆ. ಆಕಾಶಗಂಗೆಯ ಕೇಂದ್ರಭಾಗ ಇದು. ನೆತ್ತಿಯ ಮೇಲಿನ ಅಕ್ವಿಲಾ (ಗರುಡ), ಸ್ವಲ್ಪ ಉತ್ತರಕ್ಕೆ ಸಿಗ್ನಸ್ (ರಾಜಹಂಸ) ಇನ್ನೊಂದು ಪುಂಜ ಲೈರಾ (ವೀಣೆ) ಇವುಗಳಲ್ಲೂ ಆಕಾಶಗಂಗೆ ಹರಡಿದೆ. ಹೀಗೆ ಮುಂದುವರಿದ ಗಂಗೆ ಮುಂದೆ ಕಾಸಿಯೋಪಿಯಾ (ಕುಂತಿ) ಪರ್ಸಿಯಸ್ (ಅರ್ಜುನ) ಇವುಗಳ ಮೂಲಕವೂ ಸಾಗುತ್ತದೆ. ಚಂದ್ರನಿಲ್ಲದ ರಾತ್ರಿಯಲ್ಲಿ ಇದನ್ನು ಗುರುತಿಸುವುದು ಸಾಧ್ಯವಾದರೆ ಆಕಾಶಗಂಗೆ ಎಂದಾಗಲಿ ಅಥವಾ ಪಾಶ್ಚಾತ್ಯರ ಮಿಲ್ಕಿ ವೇ ಎಂದಾಗಲೀ ಹೆಸರು ಇಟ್ಟಿದುದರ ಔಚಿತ್ಯ ಮನದಟ್ಟಾಗುತ್ತದೆ.

**ಖಗೋಳ ದಿನಚರಿ**

**ಆಗಸ್ಟ್**

- ೧ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
- ೫ ಚಂದ್ರ ಶನಿಗ್ರಹದಿಂದ ಎರಡು ಡಿಗ್ರಿ ಉತ್ತರಕ್ಕೆ.
- ೯ ಅಮಾವಾಸ್ಯೆ (ಬೆಳಗಿನ ಜಾವ ೦೦:೪೫ಕ್ಕೆ)
- ೧೦ ಮಂಗಳ ಮತ್ತು ಸೂರ್ಯ ಇವುಗಳ ಯುತಿ (ಒಟ್ಟಿಗೆ ಉದಯಿಸಿ, ಕಂತುವುವು).
- ೧೧ ಚಂದ್ರ ಪುರುಭೂ ಬಿಂದುವಿನಲ್ಲಿ
- ೧೨ ಚಂದ್ರ ಶುಕ್ರಗ್ರಹದ ಆರು ಡಿಗ್ರಿ ಉತ್ತರಕ್ಕೆ
- ೧೨ ಪರ್ಸಿಯ್ಡ್ ಉಲ್ಕೆಗಳ ಗರಿಷ್ಠ
- ೧೫ ಚಾಂದ್ರಮಾಸದ ಮೊದಲ ಪಾದ
- ೨೨ ಶುಕ್ರಗ್ರಹದ ಗರಿಷ್ಠ ಉನ್ನತಾಂಶ (೪೬ ಡಿಗ್ರಿ)
- ೨೩ ಹುಣ್ಣಿಮೆ (ಬೆಳಗಿನ ನಾಲ್ಕು ಗಂಟೆಗೆ)
- ೨೬ ಚಂದ್ರ ಅಪಭೂಮಿ ಬಿಂದುವಿನಲ್ಲಿ
- ೩೦ ಚಾಂದ್ರಮಾಸದ ಕೊನೆಯ ಪಾದ (ಚಂದ್ರಾಸ್ತಮಾನ ನಡುರಾತ್ರಿಯಲ್ಲಿ)


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು-೫೬೦ ೦೦೧


*೩೯ನೇ ಪುಟದಿಂದ*

ಏಟಿನ ಮೇಲೆ ಏಟು ಬಿತ್ತು, ಮೈಯೆಲ್ಲಾ ನೀಲಿ ಬಣ್ಣಕ್ಕೆ ತಿರುಗಿತು. ಹಿಂಸೆಯನ್ನು ಇನ್ನು ನೋಡಲಾಗದ ಹನುಮಂತರಾಯಪ್ಪ ಮಾಂತ್ರಿಕ ಕೇಳಿದಷ್ಟು ಹಣ ಕೊಟ್ಟು ಹೆಂಡತಿಯನ್ನು ಮನೆಗೆ ಕರೆತಂದ. ಆ ದಿನವೆಲ್ಲಾ ದೇವಕಿ ಅಳುತ್ತಾ ಕಳೆದಳು. ಬೆಳಗ್ಗೆ ಕೆಲಸ ಮಾಡಲು ಶಕ್ತಿ ಇರಲಿಲ್ಲ. ಆರೋಗ್ಯ ಸುಧಾರಿಸಲು ಒಂದು ವಾರ ಬೇಕಾಯಿತು.

ಪುನಃ ದೇವಕಿ ಇದೇ ರೀತಿ ವರ್ತಿಸಲು ಇದು ಮನೆಯವರಿಗೆ ಬಿಡಿಸಲಾಗದ ಸಮಸ್ಯೆಯಾಯಿತು. ಪುನಃ ದೇವಕಿಯೂ ಗಂಡ, ಅತ್ತೆಮಾವಂದಿರಲ್ಲಿ ಬೇಡಿದಳು. ''ನನ್ನನ್ನು ಬೇಕಾದರೆ ನೀವೇ ಹೊಡೆಯಿರಿ, ಸಾಯಿಸಿಬಿಡಿ, ನನಗೆ ದುಃಖವಿಲ್ಲ, ಆದರೆ ಮಂತ್ರ ತಂತ್ರ ಎಂದು ಮಾತ್ರ ನನ್ನನ್ನು ಮತ್ತೊಬ್ಬರಿಂದ ಹೊಡೆಸಬೇಡಿ. ನನ್ನನ್ನು ದಯವಿಟ್ಟು ನಂಬಿ, ನಾನು ಏನು ಮಾಡುತ್ತೇನೆಂದು ನನಗೇ ತಿಳಿಯುತ್ತಿಲ್ಲ. ನೀವು ಹೇಳಿದಾಗ ಮಾತ್ರ ನಾನು ಹಾಗೆ ಮಾಡಿದೆನೇ ಎಂದು ನನಗೇ ಆಶ್ಚರ್ಯವಾಗುತ್ತದೆ. ಇಲ್ಲದಿದ್ದರೆ ನನಗೇ ಅವೆಲ್ಲಾ ತಿಳಿಯುವುದಿಲ್ಲ.''

ಅವಳ ಪರಿಸ್ಥಿತಿಯನ್ನು ನೋಡಿದ ಹನುಮಂತರಾಯಪ್ಪನ ಕಣ್ಣು ಒದ್ದೆಯಾದವು. ಮಕ್ಕಳೂ ಅಮ್ಮನ ಜೊತೆ ಸೇರಿ ಅತ್ತರು. ಮರುದಿನ ರೋಗಿಯನ್ನು ವೈದ್ಯರಲ್ಲಿಗೆ ಕರೆದೊಯ್ದರು. ವಿವರವಾಗಿ ಇವಳ ಚರಿತ್ರೆ ಕೇಳಿಸಿಕೊಂಡ ವೈದ್ಯ ಇವಳನ್ನು ದೀರ್ಘವಾಗಿ ಪರೀಕ್ಷಿಸಿ ಇವಳ ಮನೆಯವರಿಗೆ ವಿವರಿಸಿದ, ''ನೋಡಿ ಈಕೆಗೆ ಇರುವುದು ಮೂರ್ಛೆರೋಗ.''

''ಅಲ್ಲಾ ಡಾಕ್ಟರೇ, ನಾನೂ ಮೂರ್ಛೆ ರೋಗಿಗಳನ್ನು ನೋಡಿದ್ದೇನೆ. ಅವರಂತೆ ಇವಳು ಬಟ್ಟೆ ಒದ್ದೆಮಾಡಿಕೊಳ್ಳುವುದಿಲ್ಲ. ಬಾಯಲ್ಲಿ ಬುರುಗು ಬರುವುದಿಲ್ಲ. ಕೈಕಾಲು ಒದರುವುದಿಲ್ಲ. ಪ್ರಜ್ಞೆ ತಪ್ಪಿ ನೆಲಕ್ಕೆ ಬೀಳುವುದಿಲ್ಲ. ಹೀಗಿರುವಾಗ ಇದು ಮೂರ್ಛೆರೋಗ ಅನ್ನುತ್ತಿದ್ದೀರಲ್ಲ? ಹೇಗೆ?'' ರೋಗಿಯ ಮಾವ ಕೇಳಿದ. ಅವನಿಗಿನ್ನೂ ದೆವ್ವದಲ್ಲಿ ನಂಬಿಕೆ ಹೋಗಿರಲಿಲ್ಲ.

ವೈದ್ಯ ನಕ್ಕು ನುಡಿದ: ಕೇಳಿ, ಮೂರ್ಛೆರೋಗದಲ್ಲಿ ಹಲವಾರು ವಿಧಗಳಿವೆ. ನೀವು ನೋಡಿರುವ ಮೂರ್ಛೆ ಇಂತಹ ಹಲವಾರು ರೀತಿಗಳಲ್ಲಿ ಒಂದು. ನಿಮ್ಮ ಸೊಸೆಗಿರುವುದೂ ಮೂರ್ಛೆರೋಗ. ಅದಕ್ಕೆ 'ಕಾಂಪ್ಲೆಕ್ಸ್ ಪಾರ್ಶಿಯಲ್ ಸೀಜರ್ಸ್' ಎನ್ನುತ್ತಾರೆ. ಇದಕ್ಕೆ ಮಾತ್ರೆ ಕೊಟ್ಟರೆ ಗುಣವಾಗುತ್ತದೆ.

ರೋಗಿಯ ಗಂಡನೇನೋ ಮಾತ್ರೆ ಕೊಡಲು ಒಪ್ಪಿದ. ಆದರೆ ವಯಸ್ಸಾದ ಮಾವ ಮತ್ತು ಅತ್ತೆಯನ್ನು ಒಪ್ಪಿಸುವುದು ವೈದ್ಯನಿಗೆ ಕಷ್ಟದ ಕೆಲಸವಾಯಿತು. ಕಡೆಗೂ ಒಪ್ಪಿದರು. ಮೂರ್ಛೆರೋಗಕ್ಕೆ ಚಿಕಿತ್ಸೆ ಪ್ರಾರಂಭವಾಗುತ್ತಿದ್ದಂತೆ ದೇವಕಿ ಸರಿಹೋದಳು. ಅವಳ ವರ್ತನೆಯಲ್ಲಿ ಪುನಃ ಬದಲಾವಣೆ ಕಂಡುಬರಲಿಲ್ಲ.

ಭೂತ ಚೇಷ್ಟೆ ಎಲ್ಲಿ? ಮೂರ್ಛೆ ರೋಗವೆಲ್ಲಿ?


**ಡಾ|| ಜಿ. ಎಸ್. ಪಾಲಾಕ್ಷ**
ಮನೋರೋಗ ತಜ್ಞ, ಎಚ್.ಎ.ಎಲ್ ಆಸ್ಪತ್ರೆ,
ಬೆಂಗಳೂರು - ೫೬೦ ೦೧೭


## ಸೃಷ್ಟಿ-ಲಯ

ಕೆಲವರು ಕಲ್ಲುಗಳನ್ನು
ವಿಗ್ರಹಗೊಳಿಸುವವರು;
ಮತ್ತೆ ಕೆಲವರು
ವಿಗ್ರಹ ಭಂಜಕರು.


**ಸಿ.ಪಿ.ಕೆ.**
ಮೈಸೂರು

# ಒಳ್ಳೆಯ ಓದು



## ಬಂದೂಕಿನ ಮನುಷ್ಯ (ಕವನ ಸಂಕಲನ)

*ಡಾ|| ಬಸವರಾಜ ಕುಂಬಾರ*

**ಪುಟ :** ೫೮ **ಬೆಲೆ :** ರೂ. ೩೫

**ಲಡಾಯಿ ಪ್ರಕಾಶನ**, ೪೨, ಪ್ರಸಾದ ಲಾಜ್, ಗದಗ

*ಮನುಷ್ಯ ಬಂದೂಕಿನ ಜೊತೆಗೂಡಿದಾಗ ರಾಕ್ಷಸನಾಗುತ್ತಾನೆ ; ಬೆಂಕಿ ಸಿಡಿಸುತ್ತಾನೆ. ಹೃದಯದೊಂದಿಗೆ ಸಂವಾದಿಸಿದಾಗ ಮಾತ್ರ ಎಂದೂ ಆರದ ಬೆಳಕನ್ನು ಕೊಡುವ ನಂದಾದೀಪದಂತೆ ಕತ್ತಲೆ ಕಳೆಯಬಲ್ಲ. ಅವನಿಂದ ಬಂದೂಕನ್ನು ಕಿತ್ತುಕೊಂಡು ಹೂವಿನ ಪರಿಮಳವನ್ನು ಪರಿಚಯಿಸುವುದು ಹೇಗೆ ? ಇಲ್ಲಿನ ಕವನಗಳು ಆ ಬಗ್ಗೆ ಚಿಂತಿಸಿವೆ. ಬಡವರ್ಗಗಳ, ಮುಗ್ಧರ ಬಗ್ಗೆ ಮಾತಾಡುತ್ತಾ ಪ್ರೀತಿಯ ಸೋಪಾನಗಳನ್ನು ಕಟ್ಟಿಕೊಟ್ಟು ಬದುಕನ್ನು ಪ್ರೀತಿಸಲು ಈ ಕವನಗಳು ಪ್ರೇರೇಪಿಸುತ್ತವೆ. ಮನುಷ್ಯ ಮನುಷ್ಯನಾಗಿದ್ದಾನೆಯೇ ಪುಟ್ಟ ಕವಿತೆ ''ಪ್ರಶ್ನೆ'' ಕೇಳುತ್ತದೆ.*



## ಜೀವನ ಸಂಧ್ಯಾ (ಲಲಿತ ಪ್ರಬಂಧಗಳು)

*ಕೃಷ್ಣ ಮೂರ್ತಿ ಕಿತ್ತೂರ*

**ಪುಟ :** ೧೫೪ **ಬೆಲೆ :** ರೂ. ೭೫

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

*ಲೇಖಕರ ಹಾಸ್ಯಮಿಶ್ರಿತ ಧಾಟಿ ಪುಸ್ತಕವೋದುತ್ತಿದ್ದರೂ ಅವರೇ ಕುಳಿತು ನಮ್ಮೊಂದಿಗೆ ಆತ್ಮೀಯ ಸಂವಾದ ನಡೆಸುತ್ತಿದ್ದಾರೇನೋ ಎನ್ನುವಂತಿದೆ. ಲವಲವಿಕೆ ಮೂಡಿಸುತ್ತ, ಆಸಕ್ತಿಯನ್ನು ಉಂಟುಮಾಡುತ್ತ ಓದುಗನನ್ನು ತನ್ನೊಂದಿಗೆ ಕರೆದೊಯ್ಯುವ ಲೇಖಕರು ತಾವು ಅನುಭವಿಸಿದ ಕೆಲ ಸ್ವಾರಸ್ಯ ಪ್ರಸಂಗಗಳನ್ನು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ. ಮಾಗಿದ ವ್ಯಕ್ತಿತ್ವದ ಅನುಭವದ ಮೂಸೆಯಿಂದೆದ್ದು ಬಂದ ಬರಹಗಳು. ಅನೇಕ ಪ್ರಸಂಗಗಳು ಒಂದು ತಲೆಮಾರಿನಷ್ಟು ಹಳೆಯವು. ಇಂದಿನ ಸಂಕೀರ್ಣ ಬದುಕಿಗೆ ಹೀಗೂ ಉಂಟೇ ಅನ್ನಿಸುವಂಥವು.*



## ನಾಗರಿಕತೆ ಮತ್ತು ಅರಾಜಕತೆ

*ಜಿ. ಕೆ. ಗೋವಿಂದರಾವ್*

**ಪುಟ :** ೨೯೮ **ಬೆಲೆ :** ರೂ. ೧೬೦

**ಇಳಾ ಪ್ರಕಾಶನ**, ನಂ. ೩೬, ೪೦ ಅಡಿ ರಸ್ತೆ, ರಾಘವ ನಗರ, ನ್ಯೂ ಟಿಂಬರ್ ಯಾರ್ಡ್ ಲೇ ಔಟ್, ಬೆಂಗಳೂರು - ೨೬.

*ಕೋಮುವಾದ ಹಾಗೂ ಜಾಗತೀಕರಣದ ಹುಚ್ಚು ಪ್ರವಾಹದಲ್ಲಿ ಜಗತ್ತೇ ಕೊಚ್ಚಿಹೋಗುತ್ತಿರುವ ಇಂದಿನ ಸಂದರ್ಭದಲ್ಲಿ ಅಪಾಯವನ್ನರಿತು ಒಂದಷ್ಟು ತಡೆಗೋಡೆ ಒಡ್ಡುವತ್ತ ತಮ್ಮ ಕಾಳಜಿ-ಕರ್ತವ್ಯ ನಿರ್ವಹಿಸುತ್ತಿರುವ ಅಪರೂಪದ ಲೇಖಕ ಜಿ. ಕೆ. ಗೋವಿಂದರಾವ್ ಅಭಿನಂದನಾರ್ಹರು. ಇತಿಹಾಸದ ಅನೇಕ ಉದಾಹರಣೆಗಳಿಂದ ನಮ್ಮನ್ನು ಬೆಚ್ಚಿಬೀಳಿಸುತ್ತ, ಜಗತ್ತಿನ ಶ್ರೇಷ್ಠ ಚಿಂತಕರನ್ನು ಪರಿಚಯಿಸುತ್ತ ನಮ್ಮ ಹೊಣೆಗೇಡಿತನವನ್ನು ಬೊಟ್ಟು ಮಾಡಿ ತೋರಿಸುವ ಅವರು ವರ್ತಮಾನವನ್ನು ಉದಾಹರಿಸುವ ರೀತಿ ಅನನ್ಯ !*



## ನೊಂದವರ ನೋವು (ಲೇಖನಗಳ ಸಂಗ್ರಹ)

*ಮೂಡ್ನಾಕೂಡು ಚಿನ್ನಸ್ವಾಮಿ*

**ಪುಟ :** ೧೨೦ **ಬೆಲೆ :** ರೂ. ೬೦

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩೧೦೩

*ಬದುಕಿಗೆ ಸುಸಂಸ್ಕೃತಿಯ ಸುಂದರ ಮಾಲೆಯನ್ನು ತೊಡಿಸುವ ಆಶಯವುಳ್ಳ ಇಲ್ಲಿನ ಲೇಖನಗಳು ವೈಚಾರಿಕತೆಯ ಪ್ರಖರ ಬೆಳಕಿನಲ್ಲಿ ಮೂಡಿಬಂದಿವೆ. ನೊಂದವರ ನೋವನ್ನು ಸಮರ್ಥವಾಗಿ ಅರ್ಥೈಸಲು ಸಾಮಾನ್ಯರ ಮಧ್ಯದಿಂದೆದ್ದುಬಂದ ವಚನಕಾರರಿಗೆ ಸಾಧ್ಯವಾದಷ್ಟು ಇತರ ಯಾವುದೇ ಧಾರ್ಮಿಕ- ಡಾಂಭಿಕ- ಸ್ವಯಂ ಘೋಷಿತ ಅಧಿಕಾರಿಗಳಿಗದು ಸಾಧ್ಯವಾಗಿಲ್ಲ. ವಚನ ಸಾಹಿತ್ಯ ಶ್ರೀಸಾಮಾನ್ಯನ ಭಾಷೆಯಾಯಿತು.*



## ಬಿಳಿ ಮುಗಿಲ ಕೆಳಗೆ (ಕವನ ಸಂಕಲನ)

*ಸಿ. ಜಿ. ಹಿರೇಮಠ*

**ಪುಟ :** ೪೬ **ಬೆಲೆ :** ರೂ. ೩೦

**ಲಡಾಯಿ ಪ್ರಕಾಶನ**, ೪೨, ಪ್ರಸಾದ ಲಾಜ್, ಗದಗ

*ತಲೆಮಾರಿನಿಂದ ತಲೆಮಾರಿಗೆ ಕಾವ್ಯದ ವಸ್ತುವಿನಲ್ಲಿ ಭಿನ್ನತೆ ಎದ್ದು ಕಾಣುವ ಅಂಶ. ಅದಕ್ಕೆ ಸಮಾಜದ ಪರಿವರ್ತನೆಯೂ ಒಂದು ಮುಖ್ಯ ಕಾರಣ. ಒಂದು ಕಾಲದ ಮೌಲ್ಯ ಇಂದಿಗೆ ಪ್ರಸ್ತುತವಲ್ಲವೇನೋ ಎಂಬಷ್ಟರ ಮಟ್ಟಿನ ಬದಲಾವಣೆ ಕಾಣಬಹುದು. ಬದಲಾದ ಸಮಾಜಕ್ಕೆ ಸ್ಪಂದಿಸುವ ಹೊಸ ಆಶಯಗಳಿಗೆ ತೆರೆದುಕೊಳ್ಳುವ ಕಾವ್ಯಗುಣ ಇಲ್ಲಿ ಬಿಂಬಿಸಿದೆ. ಒಂದು ವ್ಯವಸ್ಥೆಯಲ್ಲಿನ ದೋಷಗಳನ್ನು ಥಟ್ಟನೆ ನಮ್ಮ ಗಮನಕ್ಕೆ ತಂದು ಅದರಲ್ಲಿನ ಪಾತ್ರವನ್ನು ವಿವರಿಸಲು ಈ ಸಂಕಲನದ ''ಸಾಲಿ ಮಾಸ್ತರ'' ಅತ್ಯುತ್ತಮ ಉದಾಹರಣೆಯೆಂದು ಹೇಳಬಹುದು. ಓದಿನೋಡಿ !*



## ಮೀಸಲಾತಿ ಮತ್ತು ಸಾಮಾಜಿಕ ಧ್ರುವೀಕರಣ

*ಸಂ| ಎ. ಎಂ. ಸಾಣಕರ*

**ಪುಟ :** ೭೨ **ಬೆಲೆ :** ರೂ. ೪೫

**ಸಂಕೇತ ಪ್ರಕಾಶನ**, ನಂ . ೧೦, ಸಿ. ಎಂ. ಸಿ. ಕಾಲನಿ, ಇಬ್ರಾಹಿಂಪೂರ, ವಿಜಾಪೂರ.

*ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಅಸಮಾನತೆ ಹಾಗೂ ಶಿಲ್ಪಿಗಳಲ್ಲೊಬ್ಬರಾದ ಅಂಬೇಡ್ಕರ್ ಅವರ ವಿಚಾರಧಾರೆಯ ಸಮಾನತೆ ಇವೆರಡರ ಅಂತರ ಈ ಲೇಖನಗಳಲ್ಲಿ ಚರ್ಚಿಸಲಾಗಿದೆ. ಶೂದ್ರ-ಪಂಚಮರೆನ್ನಿಸಿಕೊಂಡು ತಮಗಿಂತ ಮೇಲಿನ ವರ್ಗಗಳಿಂದ ತುಳಿಯಲ್ಪಟ್ಟ ದಲಿತರಿಗೆ, ದಲಿತ ನಾಯಕರನ್ನು ದಾರಿತಪ್ಪಿಸಿ ಆಮಿಷವೊಡ್ಡಿ ಕೊಡಮಾಡುವ ಮೀಸಲಾತಿಗಳಿಂದ ಯಾವುದೇ ಪ್ರಯೋಜನವಾಗಲಾರದೆಂಬುದು ಇಲ್ಲಿನ ಲೇಖನಗಳ ವಾದ. ದಲಿತ ನಾಯಕರ ದಿಟ್ಟ ಹೆಜ್ಜೆಗಳು ತಪ್ಪು ಹೆಜ್ಜೆಗಳಾದಾಗ ಏನಾದೀತೆಂಬುದು ಪ್ರಶ್ನೆ !*



## ಮೂಗಿನ ತುದಿ (ನಗೆ ಬರಹಗಳು)

*ಅನಂತ ಕಲ್ಲೋಳ*

**ಪುಟ :** ೧೭೪ **ಬೆಲೆ :** ರೂ. ೮೦

**ಅಮೋಘ ವಾಙ್ಮಯ ಪ್ರಸಾರ**, ೭೫, ರಾಣಿ ಚೆನ್ನಮ್ಮ ನಗರ, ಬೆಳಗಾವಿ - ೫೯೦ ೦೦೬

*ನಗೆಬರಹಗಳ ಮೂಲಕ ಓದುಗರಿಗೆ ಪರಿಚಿತರಾಗಿರುವ ಕಲ್ಲೋಳರ ಹಾಸ್ಯ ನಾಯಕ ಗುಂಡಣ್ಣ. ಹಾಸ್ಯವನ್ನು ದಿನನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿ ಅಳವಡಿಸಿಕೊಂಡು ಸಮಾನ ಮನಸ್ಕರಿಂದ ಸೈ ಎನಿಸಿಕೊಂಡು ವಿಡಂಬನಾ ಶೈಲಿಯ ಬರಹವನ್ನು ಆರಿಸಿಕೊಂಡಿರುವ ಲೇಖಕರು ಇಲ್ಲಿ ೩೮ ಬರಹಗಳನ್ನು ನಮಗಾಗಿ ಸಂಕಲಿಸಿ ಕೊಟ್ಟಿದ್ದಾರೆ. ಮುದುಡಿದ ಮನಸ್ಸಿಗೆ ಒಂದಿಷ್ಟು ನಗೆ ಸಿಂಚನಗೊಳಿಸಲು, ಮನಸ್ಸು ಹಗುರಾಗಲು ಇದಿಷ್ಟು ಸಾಕಾದೀತು.*



## ಗೋದಾವರಿವರಂ ಇರ್ದ ಕನ್ನಡ ನಾಡು

(ಶಾಸನಗಳ ಅಧ್ಯಯನ) *ಡಾ|| ಜಿ. ಎನ್. ಉಪಾಧ್ಯ*

**ಪುಟ :** ೨೫೦ **ಬೆಲೆ :** ರೂ. ೧೫೦

**ಕನ್ನಡ ವಿಭಾಗ**, ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಸಾಂತಾಕ್ರೂಸ್ (ಪೂರ್ವ), ಮುಂಬಯಿ- ೯೮

*ಹಿಂದೊಮ್ಮೆ ಗೋದಾವರಿವರೆಗೆ ಹಬ್ಬಿದ್ದ ಕನ್ನಡ ನಾಡಿನ, ಕನ್ನಡಿಗರ ಹಿರಿಮೆಗಳನ್ನು ಕುರಿತು ಸಾಕ್ಷಿ ಹೇಳುವಂಥ ಶಾಸನಗಳ ಅಪೂರ್ವ ಅಧ್ಯಯನ. ಮಹಾರಾಷ್ಟ್ರದಲ್ಲಿರುವ ಕನ್ನಡ ಶಾಸನಗಳನ್ನು ವಿಸ್ತಾರವಾಗಿ ಅಭ್ಯಾಸ ಮಾಡಿ, ಅಂದಿನ ಸಮಗ್ರ ಕರ್ನಾಟಕದ ಒಂದು ನೋಟವನ್ನು ನಮ್ಮ ಕಣ್ಮುಂದೆ ತಂದು ನಿಲ್ಲಿಸಲಾಗಿದೆ. ರಾಜಕೀಯ - ಐತಿಹಾಸಿಕ - ಜನಜೀವನ ಇವುಗಳ ಮೇಲೆ ಈ ಸಂಶೋಧನೆ ಅಪಾರ ಬೆಳಕು ಬೀರಿದೆ.*

**- ಇಂದಿರಾಕುಮಾರಿ**

# ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಸ್ತ್ರೀ



**ಕಾ**ದಂಬರಿಯ ಮುತ್ತು ಪೋಣಿಸಿದಂಥ ಮುದ್ದಾದ ಹೆಸರೇ ಮೊತ್ತಮೊದಲಿಗೆ ಓದುಗರಿಗೆ ಹೃದ್ಯವೆನಿಸಿ ಬಿಡುತ್ತದೆ. ಅದಕ್ಕೆ ಕಾರಣ ಅದರ ಪ್ರಾಸಬದ್ಧತೆ-ಶಬ್ದಾಕರ್ಷಣೆ ಮಾತ್ರವಲ್ಲದೆ ಅದು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಸೂಚಿಸಿಬಿಡುವ ಕವಿಯ ಸ್ತ್ರೀಪರ ಕಾಳಜಿ ಮತ್ತು ವ್ಯಾಮೋಹ ಕೂಡ ಇರಬಹುದು. ಕುವೆಂಪುರವರ ಪ್ರಸ್ತುತ ಕಾದಂಬರಿಯ ಮುಖ್ಯ ಸೂತ್ರ ಜೈವಿಕ ಸಿದ್ಧಾಂತವೇ ! ಈ ಮುಖ್ಯ ಸೂತ್ರದ ಸುತ್ತಮುತ್ತಲೂ ವಿಭಿನ್ನ ಪಾತ್ರಗಳೂ ಘಟನೆಗಳೂ ಔಚಿತ್ಯಪೂರ್ಣವಾಗಿ, ಅತ್ಯಂತ ಸಹಜವಾಗಿ ಮೈತಾಳುತ್ತ ಹೋಗಿವೆ. ಪಕ್ಕದ ಮನೆಯ ಕತೆಗಳಂತಿವೆ. ಕೃತಕತೆಯ ಸೋಂಕು ಹುಡುಕಿದರೂ ಸಿಗದು. ಕತೆಗಳು ನಡೆಯುವ ತಾಣವಂತೂ ಸುಂದರ ಪ್ರಕೃತಿಯ ಸಂಪದ್ಭರಿತ ಮಡಿಲು. ತೊರೆ, ತಪ್ಪಲು, ಗಿರಿಶಿಖರ, ಕಾನನಗಳ ಮೌನಗಾನ, ಇವುಗಳ ವರ್ಣನೆ ಮನಮೋಹಕವಾಗಿವೆ. ಅಂದಮೇಲೆ ಕಾವ್ಯ ಸೌಖ್ಯ ಇಲ್ಲಿ ಯಥೇಚ್ಛ.

ಈ ಕಾದಂಬರಿಯಲ್ಲಿ ಮುಖ್ಯವಾಗಿ ಐದು ಕುಟುಂಬಗಳು ಬರುತ್ತವೆ. ಸಿಂಬಾವಿ ಭರಮೈ ಹೆಗ್ಗಡೆ, ಹಳೆಮನೆ ಸುಬ್ಬಣ್ಣ ಹೆಗ್ಗಡೆ, ಕೋಣೂರಿನ ರಂಗಪ್ಪ ಗೌಡ, ಬೆಟ್ಟಳ್ಳಿಯ ಕಲ್ಲಯ್ಯ ಗೌಡ ಮತ್ತು ಹೂವಳ್ಳಿಯ ವೆಂಕಟಣ್ಣ ನಾಯಕ. ಈ ಕುಟುಂಬಗಳು, ಅವುಗಳಿಗೆ ಸಂಬಂಧಪಟ್ಟ ಜೀತದಾಳುಗಳು, ಬಡವ-ಬಲ್ಲಿದ ಭೇದವಿಲ್ಲದ ಮನುಷ್ಯ ಕನಸುಗಳು, ಪರಸ್ಪರ ವೈಷಮ್ಯಗಳು, ಅಲ್ಲಲ್ಲೇ ಏರ್ಪಡುವ ಹಾಗೇ ಹರಿದು ಹೋಗಿಬಿಡುವ ಸಂಬಂಧಗಳು, ಗುರಿ ಸೇರುವ ಛಲ ಇವೆಲ್ಲವುಗಳ ವರ್ಣನೆ ಒಂದಕ್ಕೊಂದು ಬೆಸುಗೆಯಾಗಿ ಕತೆಯನ್ನು ತುಂಬಿಕೊಳ್ಳುತ್ತವೆ.

ಇದೊಂದು ಬೃಹತ್ ಕಾದಂಬರಿಯಾದ್ದರಿಂದ ಇಲ್ಲಿನ ಸಿರಿವಂತ ಮನೆತನಗಳ, ಹಟ್ಟಿ-ಬಿಡಾರಗಳ ಸಂಕೀರ್ಣ ಸಂಘಟನೆಗಳು ತಮ್ಮೆಲ್ಲ ವಿವರಗಳೊಡನೆ ಪದರ ಪದರವಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಪೂರಕವಾಗಿ, ಬಗೆ ಬಗೆಯ ಸ್ತ್ರೀ ವ್ಯಕ್ತಿತ್ವಗಳ ಸರಳ ಹೆಣಿಗೆಗಳೂ ಅಲ್ಲಲ್ಲೇ ಕಾಣಸಿಗುತ್ತವೆ. ಒಂದೊಂದು ಪಾತ್ರ ತನ್ನ ವಿಭಿನ್ನ ಸ್ವಭಾವದಿಂದ ಗಮನ ಸೆಳೆದು ರಂಜಿಸುತ್ತದೆ. ಈ ಕೆತ್ತನೆ ಬಹುಮಟ್ಟಿಗೆ ಕವಿಯದೇ ಕುಸುರಿ ಕೆಲಸ. ಆದರೂ ಈ ಕಲಾನೈಪುಣ್ಯದ ಹಿಂದಿರುವ ಪ್ರಜ್ಞಾವಂತ ಮನಸ್ಸಿನ ಅನುಭವ ವಿಸ್ತಾರ, ಸ್ವಂತ ಜೀವನ ದರ್ಶನ ಗುರುತಿಸಿ ಗೌರವಿಸುವಂಥವು.

ಇಲ್ಲಿ ಬರುವ ಎಲ್ಲ ಹೆಣ್ಣು ಮಕ್ಕಳೂ – ಒಂದೆರಡನ್ನು ಹೊರತುಪಡಿಸಿ – ಸಹಜ ಮುಗ್ಧೆಯರು. ಪ್ರಕೃತಿಯೊಂದಿಗೆ ಪ್ರಕೃತಿಯಲ್ಲಿಯೆ ಹೂವುಗಳಂತೆ ಅರಳಿದವರು. ಇವರ್ಯಾರಿಗೂ ವಿದ್ಯೆಯಿಲ್ಲ, ನವನಾಗರಿಕತೆಯ ಸೋಂಕಿಲ್ಲ. ಆದರೆ ಹೆಣ್ತನಕ್ಕೆ ವಿಶಿಷ್ಟವಾದ ಕೆಲವು ಸೂಕ್ಷ್ಮ ಸ್ಪಂದನಗಳು ಇವರೆಲ್ಲರಲ್ಲಿ ಸಹಜವಾಗಿವೆ. ಪೀಂಚಲುವಿನಂತಹ ಕೆಳ ವರ್ಗದ ಹೆಣ್ಣಿಗೂ ಉನ್ನತ ಚಿಂತನೆಯಿದೆ. ಇಂಥ ಚಿಂತನೆಗಳು, ಹಲವಾರು ಆದರ್ಶಗಳು, ನೀತಿ ಕಲ್ಪನೆಗಳು ಮತ್ತೆ ಲೇಖಕರದೇ ಕೈವಾಡ ಅನ್ನುವುದನ್ನು ಒಪ್ಪಲೇಬೇಕಾದರೂ, ಗ್ರಾಮೀಣ ಮಹಿಳೆಯರ ಬುದ್ಧಿಶಕ್ತಿಯನ್ನು, ಯುಕ್ತಾಯುಕ್ತ ವಿವೇಚನೆಯನ್ನು ನಾವು ಅಲ್ಲಗಳೆಯುವಂತಿಲ್ಲ. ಮತ್ತೊಂದು ಮುಖ್ಯ ವಿಷಯ. ಮೌಲ್ಯಗಳು ಹೇಗೋ ಹಾಗೆಯೇ ವಂಚನೆ, ಕುಟಿಲೋಪಾಯ ಮುಂತಾದ ಕುತಂತ್ರಗಳಲ್ಲಿಯೂ ಆಕೆಯ ಸಹಜ ವ್ಯಾಪಾರಗಳು ಕೃತಕವಿಲ್ಲದೆ ಇಲ್ಲಿ ಬಣ್ಣಿತವಾಗಿವೆ. ಒಟ್ಟಾರೆ ಮಹಿಳೆಯ ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ವ್ಯಕ್ತಿತ್ವದ ವಿಶೇಷ ವರ್ಣನೆ ಓದುಗರಿಗೆ ಇಲ್ಲಿ ಹೇರಳವಾಗಿ ಗ್ರಾಸವಾಗಿದೆ.

ಇಡೀ ಕಾದಂಬರಿಯಲ್ಲಿ ಇಪ್ಪತ್ತಕ್ಕೂ ಹೆಚ್ಚು ಸ್ತ್ರೀ ಪಾತ್ರಗಳಿವೆ. ಶ್ರೀಮಂತ ಮನೆತನದ ಜಟ್ಟಮ್ಮ, ಲಕ್ಕಮ್ಮ, ಮಂಜಮ್ಮ, ಕಾಗಿನಹಳ್ಳಿ ಅಮ್ಮ ಎಂದೇ ಪ್ರಸಿದ್ಧರಾದ ದಾನಮ್ಮ ಹೆಗ್ಗಡಿತಿ, ದೇವಮ್ಮ, ರಂಗಮ್ಮ, ದೊಡ್ಡಮ್ಮ ಹೆಗ್ಗಡಿತಿ; ಮಧ್ಯಮ ವರ್ಗದ ಕಾಡಮ್ಮ, ಅಂತಕ್ಕ ಸೆಟ್ಟಿಗಿತ್ತಿ, ಇವಳ ಮಗಳು ಕಾವೇರಿ, ಚಿನ್ನಮ್ಮ, ಸೀತಮ್ಮ, ಚಿನ್ನಮ್ಮನ ಅಜ್ಜಿ; ದುಡಿಯುವ ವರ್ಗದಲ್ಲಿ ನಾಗತ್ತೆ, ನಾಗಕ್ಕ, ಹೂವಿ, ಸೂಲಗಿತ್ತಿ ಯೆಂಕಿ; ಮತ್ತು ಜೀತದಾಳುಗಳಾಗಿ ಪೀಂಚಲು, ದೇಯಿ, ಅಕ್ಕಣಿ, ಬಾಗಿ, ತಿಮ್ಮಿ, ಸೇಸಿ ಮತ್ತಿತರರು ಇಲ್ಲಿ ಸಜೀವವಾಗಿ ಮೈತುಂಬುತ್ತಾರೆ. ಇಲ್ಲಿ ಕೆಲವು ಮಾತ್ರ ಮುಖ್ಯ ಪಾತ್ರಗಳು, ಕೆಲವು ಪೋಷಕ ಪಾತ್ರಗಳು, ಮತ್ತೆ ಕೆಲವು ಕೇವಲ ಬಂದು ಹೋಗುವುವು. ಆದರೆ ಹಾಗೆ ಮಿಂಚಿ ಹೋಗುವ ಕೆಲವು ಕ್ಷಣಿಕ ಪಾತ್ರಗಳೂ ಹೃದಯದ ಮೇಲೆ ಗಾಢ ಪರಿಣಾಮ ಬೀರಿಯೇ ಹೋಗಿಬಿಡುವುದು ಕಾದಂಬರಿಯ ವಿಶೇಷ ಮತ್ತು ಸೊಗಸು.

> *ಸಮಾಜದ ಬೇರೆ ಬೇರೆ ವರ್ಗದ, ಬೇರೆ ಬೇರೆ ಜಾತಿಯ ಅನೇಕ ಮಹಿಳೆಯರ ವ್ಯಕ್ತಿ ಚಿತ್ರಣಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವಿಸ್ತೃತವಾಗಿ ಹರಡಿಕೊಂಡಿವೆ. ಕೆಳವರ್ಗದ ಜೀತದಾಳಾಗಲಿ, ಮೇಲ್ವರ್ಗದ ಹೆಗ್ಗಡಿತಿಯರಾಗಲಿ, ಅವರೆಲ್ಲರ ಅಂತರಂಗವನ್ನು ಹೊಕ್ಕು ನೋಡಿ ಅನುಭವಿಸಿ ಅರ್ಥೈಸಿ, ತಮ್ಮದೇ ಆದ ಭಾವ-ಬಣ್ಣಗಳಲ್ಲಿ ನಿರೂಪಿಸುವ ಕವಿಯ ಪ್ರತಿಭೆ ಅನುಪಮವಾದದ್ದು.*
>
> **ಭಾರತೀ ಕಾಸರಗೋಡು**

ಕಾದಂಬರಿಯ ಮೊದಲ ನಾಯಕಿಯಾಗಿ ಮೆರೆಯುವ ಚೆಲುವೆ ಚಿನ್ನಮ್ಮ ಷೋಡಶಿ: ತರುಣ ಮುಕುಂದನ ಜನ್ಮ ಜನ್ಮಾಂತರದ ಪ್ರೇಯಸಿ. ಕಾದಂಬರಿಯ ಮುಖ್ಯ ಕಳೆಯೇ ಈಕೆ. ಕೆನ್ನೆಗಳು ಮಿರುಗುವ ಕೋಮಲತೆ, ತುಟಿಯ ಮನೋಹರತೆ, ಗಲ್ಲದ ದುಂಡನೆಯ ಮುದ್ದು, ಹೊಳೆವ ನೀಳ ಮೂಗುಗಳ ಈ ಅಂದಗಾತಿ ದೈವಭಕ್ತಳೂ ಹೌದು. ಆದರೆ ಈ ಭಕ್ತಿ ಆಕೆಯ ಮಿಕ್ಕೆಲ್ಲ ನಡೆವಳಿಕೆಗಳಂತೆ ಶಿಶು ಮುಗ್ಧವಾಗಿತ್ತು. ವಿಚಾರ-ವಿಶ್ಲೇಷಣೆಗಳಿಂದ ದೂರವಾದ ಕೇವಲ ನಿಸರ್ಗಸಿದ್ಧವಾದ ಸಹಜ ಭಕ್ತಿ ಚಿನ್ನಮ್ಮನದು.

ಸ್ವಭಾವತಃ ಮುಗ್ಧೆಯಾದ ಈಕೆ ಕೆಲವು ಹೃದಯಸ್ಪರ್ಶಿ ಸಂದರ್ಭಗಳಲ್ಲಿ ಅಷ್ಟೇ ಪ್ರಬುದ್ಧೆ. ಪ್ರಾಯ ಈಕೆಯಲ್ಲಿ ಚೆಲುವಾಗಿ ಅರಳಿ, ಹೊಂಗನಸುಗಳನ್ನು ಮೂಡಿಸಿ, ನವಿರು ಶೃಂಗಾರ ಪೀಡನೆಗಳನ್ನು ಮೆಲ್ಲಗೆ ಅನುಭವಿಸುವಾಗ, ತನ್ನಂತೆಯೇ ಅಂಥ ತಲ್ಲಣಗಳನ್ನು ಅನುಭವಿಸುವ ಬಾಲ್ಯ ಸ್ನೇಹಿತ ಮುಕುಂದ ತನ್ನನ್ನು ಕಂಡು ಏನೋ ಹೇಳಲು ಹೋಗಿ, ತುಟಿ ನಡುಗಿ, ಮತ್ತೇನೋ ಒದರಿಬಿಟ್ಟಾಗ ಅವನ 'ಅತ್ಯಂತ ಅಪ್ರಕೃತ ತೊದಲಿನಲ್ಲಿಯೂ ಅಂತಃಕರಣದ ಸುಪ್ರಕೃತವನ್ನು' ಕರುಣೆಯಿಂದ ಗ್ರಹಿಸಿಬಿಡಬಲ್ಲ ಪ್ರೌಢೆ. ಸಾಮಾನ್ಯ ಸಂದರ್ಭಗಳಲ್ಲಿ ತನ್ನ ಸಹಜ ಸೌಂದರ್ಯದ ಪ್ರಕಾಶನಕ್ಕೆ ಅವಕಾಶವಿಲ್ಲದ ಈಕೆ ಮಣ್ಣು ಹಿಡಿದು ಕಾಂತಿ ಕುಂದಿದ ಚಿನ್ನದ ಸಲಾಕೆಯಂತೆ ಭಾಸವಾಗುತ್ತಾಳೆ !

ಅಜ್ಜಿಯ ಅಕ್ಕರೆಯಲ್ಲಿ ಸುಮಕೋಮಲವಾಗಿ ಅರಳಿರುವ ಈ ಪುಟ್ಟ ಹುಡುಗಿ ನಿಸರ್ಗದ್ದೆ ಮತ್ತೊಂದು ಮುದ್ದು ಹೂವು. ಅಂತೆಯೇ ನಿಸರ್ಗದೊಂದಿಗಿನ ಒಡನಾಟ ಈಕೆಗೆ ಅತಿ ಪ್ರಿಯ. ಹಕ್ಕಿಗಳ ಕಲರವ ಕೇಳಿದರೇನೇ ಈಕೆಗೆ ಅವರ್ಣನೀಯ ಪುಳಕ ! ಇವಳ ಅಂತರಂಗವೂ ಹಕ್ಕಿ ಹಾಡಿನೊಡನೆ ಅಂತಃಕರಣ ಪೂರ್ವಕವಾಗಿ ದನಿಗೂಡಿಸಿಬಿಡುತ್ತದೆ.

ಮುಂದೆ ಈ ಕೋಮಲೆ ಪರಿಸ್ಥಿತಿಯ ಒತ್ತಡಗಳಿಂದ ತನಗೊಲ್ಲದ ಕಠೋರತೆಯನ್ನು ಎದುರಿಸಬೇಕಾಗುತ್ತದೆ. ಕಾಯಿಲೆಯವನೂ ಮುದುಕನೂ ಆದ ಭರಮೈ ಹೆಗ್ಗಡೆಗೆ ಆಕೆಯನ್ನು ಕೊಟ್ಟು ಲಗ್ನ ಮಾಡುವ ಸಂದರ್ಭ ಅದು. ಆ ಕರಾಳ ದಿನದಂದು ಆಕೆಗೆ ದಾರುಣ ದುಃಖದಿಂದಲೇ ಬೆಳಗಾಗುತ್ತದೆ. ಸುತ್ತ ಕಣ್ಣಾಡಿಸುತ್ತಾಳೆ. ಧರ್ಮ, ಕಾಡು,

ತಿಮ್ಮಿ ಮುಂತಾದ ಮುದ್ದು ಮಕ್ಕಳು ಅಸ್ತವ್ಯಸ್ತ ವಿಚಿತ್ರ ವಿನ್ಯಾಸ ಭಂಗಿಗಳಲ್ಲಿ ನಿದ್ರಾಮಗ್ನರಾಗಿದ್ದಾರೆ. ಈ ಮುಗ್ಧ ಭಂಗಿಗೆ ತನ್ನ ವಿಷಮ ಸಂಕಟ ಸ್ಥಿತಿಯಲ್ಲಿಯೂ ಆಕೆ ಮುಗುಳ್ನಗುತ್ತಾಳೆ. ಅಷ್ಟೇ ಅಲ್ಲ, ಮಳೆಯ ರೇಜಿಗೆಯ ದುರ್ದಿನದ ನಿರಾಶಾಮಯ ಮ್ಲಾನತೆಯಲ್ಲಿಯೂ ಮಕ್ಕಳ ಪ್ರಶಾಂತತೆ ಆಕೆಯ ಹೃದಯದಲ್ಲಿನ ಕತ್ತಲನ್ನು ಕರಗಿಸಿ, ಹೊಸದೊಂದು ಭರವಸೆಯನ್ನು ಮೂಡಿಸುತ್ತದೆ. ಈ ಸಂದರ್ಭ ಸಹಜ ಸುಂದರವಾಗಿ ತೋರುತ್ತದೆ. ಯಾಕೆಂದರೆ ಸತ್ಯವೂ ಸುಂದರವೂ ಆದದ್ದು ಮಾತ್ರ ಭೀತಿಯನ್ನು ಹೋಗಲಾಡಿಸಬಲ್ಲುದು. ಮಕ್ಕಳ ಮುದ್ದು ಮುಖಕಾಂತಿಗೆ ಈ ಶಕ್ತಿ ಇರುವುದನ್ನು ಲೇಖಕರು ಮನಸ್ಸಿಗೆ ತಟ್ಟುವಂತೆ ಚಿತ್ರಿಸಿದ್ದಾರೆ.

ಚಿನ್ನಮ್ಮನ ಮಗು ಮನಸ್ಸನ್ನು ಬಿಂಬಿಸುವ ಮತ್ತೊಂದು ವರ್ಣನೆ ಕೂಡ ತುಂಬ ಸುಂದರವಾಗಿದೆ. ಈ ಘಟನೆಯೂ ಮೇಲೆ ಪ್ರಸ್ತಾಪಿಸಿರುವ ಸಂದರ್ಭದಲ್ಲಿಯೇ ನಡೆದಿರುವುದು. ಸಣ್ಣ ವಯಸ್ಸಿನಲ್ಲಿಯೇ ಅಮ್ಮನನ್ನು ಕಳಕೊಂಡಿರುವ ಚಿನ್ನಮ್ಮ ಯಾವಾಗಲೂ ತಾಯ ನೆನಪಿನಿಂದ ಹಂಬಲಿಸುವವಳು. ಮುದುಕನೊಂದಿಗಿನ ಮದುವೆಯ ಕ್ರೂರ ಪರಿಸ್ಥಿತಿಯಲ್ಲಂತೂ ಆ ನೆನಪು ತೀವ್ರವಾಗಿ ಕಾಡುತ್ತದೆ. ''ಈಗ ತನ್ನ ಅವ್ವ ಇದ್ದಿದ್ದರೆ ?'' ಎಂದಾಕೆ ನಿಡುಸುಯ್ಯುತ್ತಾಳೆ. ಆಕೆಯನ್ನೊಮ್ಮೆ ನೋಡಲೇಬೇಕು ಎಂದು ಹೃದಯ ಹಾತೊರೆಯುತ್ತದೆ. ಊರವರೆಲ್ಲರೂ ತನ್ನನ್ನು ತಾನು ತಾಯಿಯದೇ ತದ್ರೂಪು ಅನ್ನುತ್ತಿದ್ದುದು ಕೂಡಲೇ ನೆನಪಾಗಿ ತನ್ನ ಮುಕುಂದ ಭಾವ ತಂದುಕೊಟ್ಟಿದ್ದ ಸಣ್ಣ ಕನ್ನಡಿಯಲ್ಲಿ ಮುಖ ಇಣುಕುತ್ತಾಳೆ. ಆಗ ಆಕೆಯಿಂದ ಹೊರಡುತ್ತದೆ ಮುಗ್ಧ ಪ್ರಲಾಪ – ''ಆಹಾ! ಎಷ್ಟು ಚೆಂದಾಗದೆ ನನ್ನವ್ವ ! ನೋಡಾಕೆ ಎರಡು ಕಣ್ಣು ಸಾಲ್ದು... ಇಂಥವಳನ್ನು ಹೊಡೀತಿದ್ದನಂತಲ್ಲ ನನ್ನ ಅಪ್ಪಯ್ಯ ?... ಹೆಂಗಾರು ಕೈ ಬರತಿತ್ತೋ ಅವಗೆ ?''

ಹೀಗೆ ಚಿನ್ನಮ್ಮ ಓರ್ವ ಮುಗ್ಧೆಯೂ ಕೋಮಲೆಯೂ ಆದರೂ ಪ್ರೀತಿಸಿದವನನ್ನೇ ಹೊಂದುವ ಪ್ರಣಯದ ಉತ್ಕಟತೆಯಿಂದಾಗಿ ಸಾಹಸಿಯಾಗಿ ಪರಿವರ್ತಿತಳಾಗುತ್ತಾಳೆ. ಸಖಿ ಪೀಂಚಲುವಿನೊಂದಿಗೆ ಕಾಳ ಕತ್ತಲೆಯಲ್ಲಿ ಸುರಿವ ಜಡಿ ಮಳೆಯಲ್ಲಿ ಕಾಡದಾರಿಯನ್ನು ಕ್ರಮಿಸಿ ಕಡೆಗೂ ಗುರಿ ಸೇರುತ್ತಾಳೆ. ಈಕೆಯ ಕತೆ ಸುಖಾಂತ್ಯವೂ ಆಗಿ ಪರಿಣಮಿಸುತ್ತದೆ.

ಮತ್ತೊಂದು ಮುಖ್ಯ ಪಾತ್ರ ಪೀಂಚಲು, ಚಿನ್ನಮ್ಮನ ಆಪ್ತ ಸಖಿ. ಈಕೆಯೂ ಎಳೆಯಳು. ದಿಟ್ಟ ತರುಣ ಐತನ ಹುಡುಗಿ ಹೆಂಡತಿ. ಇವಳದು ದಯೆ ತುಂಬಿದ ಹೃದಯ. ಹೆರವರ ಕಷ್ಟ ನೋಡಲಾರಳು. ತನ್ನ ಒಡತಿ ಚಿನ್ನಮ್ಮನಿಗಾಗಿ ಮತ್ತು ಅವಳ ಇನಿಯ ಹಾಗೂ ತನ್ನ ಅನ್ನವಿಡುವ ಧಣಿ ಮುಕುಂದನಿಗಾಗಿ ಎಂತಹ ಕಷ್ಟಗಳನ್ನು ಬೇಕಾದರೂ ಸಹಿಸಬಲ್ಲವಳು.

ಈಕೆ ಎಂತಹ ಸಾತ್ವಿಕ ಚೆಲುವೆಯೆಂದರೆ, ಆಳು ಮಗಳಾದರೂ ಮುಕುಂದಯ್ಯನ ಶುಭ್ರ ಕಣ್ನೋಟಕ್ಕೆ ವನರಾಜಿಯಲ್ಲಿ ಸಂಚರಿಸುವ ಶಿವಾಣಿಯಂತೆ ಗೋಚರಿಸುತ್ತಾಳೆ. ಒಡತಿ ಚಿನ್ನಮ್ಮನಿಗೆ ಹೇಗೋ ಹಾಗೆ ಒಡೆಯ ಮುಕುಂದನಿಗೂ ಅಂತರಂಗದ ಮಿತ್ರೆ. ಆದರೆ ಗಂಡು-ಹೆಣ್ಣುಗಳೆಂಬ ಲಿಂಗಭೇದವನ್ನು ಮೀರಿದ ಉದಾತ್ತ ಮನುಷ್ಯ ಸ್ನೇಹ ಇವರದು. ಮುಕುಂದನಿಗಂತೂ ಪೀಂಚಲು ಹೆಣ್ಣು ಎಂಬುದು ಜ್ಞಾನ ವಿಷಯವಾಗಿತ್ತೇ ಹೊರತು ಭಾವ ವಿಷಯವಾಗಿರಲಿಲ್ಲ.

ಈ ರೀತಿಯ ಸದ್ಗುಣಗಳಿಂದಾಗಿ ಪೀಂಚಲು ಸದಾ ಕಾಲ ತನ್ನಿನಿಯನ ಮೋಹಿನಿ. ಪ್ರೇಮ ಸೂಸುವ ಮುದ್ದು ಮಡದಿ. ಇಂಥ ಮನ ಮೆಚ್ಚಿದ ಮಡದಿಯ ಬಗ್ಗೆ ಕೂಡ ಐತ ಒಂದು ಸಾರಿ ಸಂಶಯ ತಾಳುವ ಅಹಿತಕರ ಪ್ರಸಂಗ ಬರುತ್ತದೆ. ಆ ಅಸಮಾಧಾನದ ಸಂದರ್ಭದಲ್ಲಿಯೂ ಪುಟ್ಟ ಮಡದಿ ಗುಡಿಸಲನ್ನು ಪ್ರವೇಶಿಸುತ್ತಿದ್ದಂತೆ ಗುಡಿಸಲಿಗೆ ಗುಡಿಸಲೇ ಬೆಳಕಾಗಿಬಿಟ್ಟಂತೆ ಆತನಿಗೆ ಭಾಸವಾಗುತ್ತದೆ. ಬಿಳಿಯ ಹಲ್ಲಿನ ಸಾಲೆಲ್ಲ ಬೆಳಗುವಂತೆ ನಗುತ್ತ ಪೀಂಚಲು ಮನೆಯನ್ನು ಮಾತ್ರವಲ್ಲ ಗಂಡನ ಮನಸ್ಸನ್ನೂ ಪ್ರವೇಶಿಸಿ ಬಿಡುತ್ತಾಳೆ. ಅವಳ ಬಗೆಗಿನ ಅನುಮಾನವೆಲ್ಲ ಪರಾರಿಯಾಗಿ ಮನಸ್ಸು ನಿರ್ಮಲವಾಗಿ ಮೋಹದ ಮಡದಿಗೆ ಮರುಳಾಗಿ ಬೆರಗು ಹೊಡೆದುಬಿಟ್ಟಿದ್ದಾನೆ ಐತ !

ಪೀಂಚಲು ತನ್ನ ಗಂಡನ ದೇಹ-ಆತ್ಮಗಳೊಂದಿಗೆ ಸರಿಸಮವಾಗಿ ಬೆರೆತು ಸಂಸಾರಕ್ಕೆ ಸಾರ ತಂದಿತ್ತಾಕೆ. ಈ ಎಳೆಯರಿಬ್ಬರ ಹಸಿಬಿಸಿ ಪ್ರಣಯ ಪ್ರಕರಣಗಳು ಕಾದಂಬರಿಯುದ್ದಕ್ಕೂ ಒದುಗರ ಮನಸ್ಸಿಗೆ ಕಚಗುಳಿಯಿಡುತ್ತವೆ. ಒಂದು ಗಂಭೀರ ಮನಸ್ಸಿನ ತುಂಟ ಸ್ಥಾಯಿಗಳಾಗಿ ಅಲ್ಲಲ್ಲೇ ಮಿಂಚುತ್ತವೆ. ಭಾಷೆ ಬಲ್ಲ ರಸಿಕ ಸಾಹಿತಿಯ ಕೈಗೆ ಸಿಗುವ ಸಣ್ಣ ಪುಟ್ಟ ವಿಷಯಗಳು ಕೂಡ ಹೇಗೆ ರಾಗ-ರಂಗುಗಳನ್ನು ಪಡೆದು ಮಿಂಚಿಬಿಡಬಲ್ಲವು ಅನ್ನುವುದಕ್ಕೆ ಈ ಪ್ರಣಯ ಸನ್ನಿವೇಶಗಳು ಸಾಕ್ಷಿಯಾಗಿವೆ. ಮುಂದೆ ಈ ಎಳೆ ಹುಡುಗಿ ಪೀಂಚಲು ತನ್ನ ಎಳೆತನವನ್ನು ಮೀರಿ ಪ್ರಕೃತಿ ಸಹಜ ತಾಯ್ತನಕ್ಕೆ ಅಣಿಯಾಗುತ್ತಾಳೆ. ಗಂಡ ಐತನ ಮಟ್ಟಿಗೆ ಇದು ಕೂಡ ಒಂದು ಆಪ್ಯಾಯಮಾನವಾದ ಬದಲಾವಣೆಯೇ. ಏಕೆಂದರೆ ಎಂದಿನ ಅವಳ ಹೆಣ್ತನದ ಪ್ರೀತಿ ಇದೀಗ ತಾಯ್ತನದ ಸವಿಗೂ ಏರಿಬಿಡುತ್ತಿದೆ.

ಹೀಗೆ ಪೀಂಚಲುವಿನ ಸತೀತ್ವದ ವಿಜೃಂಭಣೆಯೇ ಆಕೆಯ ವ್ಯಕ್ತಿತ್ವ ವರ್ಣನೆಯಾಗಿ ಕಾದಂಬರಿಯನ್ನು ಹಾಸುಹೊಕ್ಕಾಗಿದೆ. ತಾಯ್ತನದ ಅಕ್ಕರೆಯನ್ನೇ ತನಗೆ




ಪ್ರಿಯರಾದವರಲ್ಲಿ, ವಿಶೇಷವಾಗಿ ಚಿನ್ನಮ್ಮನಲ್ಲಿ, ಮೆರೆಯುತ್ತ ಅದರಲ್ಲೇ ಸಾರ್ಥಕ್ಯ ಪಡೆಯುವ ಪಾತ್ರವಾಗಿ ಈಕೆ ಚಿತ್ರಿತವಾಗಿದ್ದಾಳೆ.

ಈ ಕಾದಂಬರಿಯ ಇನ್ನೊಂದು ನಾಯಕಿಯಾಗಿ ಭಾವಿಸಬಹುದಾದ ಜೀತದಾಳು ತಿಮ್ಮಿ ಈ ಸುಂದರ ಮಲೆಗಳಲ್ಲಿನ ಮತ್ತೊಬ್ಬ ಮದುಮಗಳು. ತಾಯಿಯ ಸೋದರ ಸಂಬಂಧಿ ಯುವಕ ಗುತ್ತಿಯಲ್ಲಿ ಈಕೆಗೆ ಮೊದಲಿನಿಂದಲೂ ಪ್ರೇಮ. ಆತನನ್ನೇ ಮದುವೆಯಾಗುವ ತವಕ. ಒಲ್ಲದ ಬೇರೊಬ್ಬನೊಡನೆ ಮದುವೆ ನಿರ್ಧಾರವಾಗುವಾಗ ಚಿನ್ನಮ್ಮನಂತೆಯೇ ಈಕೆಯೂ ಸಾಹಸಿಯಾಗುತ್ತಾಳೆ. ಮನೆಬಿಟ್ಟು ಓಡುತ್ತಾಳೆ. ಮೊದಲ ಬಾರಿಯ ಪ್ರಯತ್ನ ವಿಫಲಗೊಂಡಾಗ ಧೃತಿಗೆಡದೆ ಮತ್ತೊಮ್ಮೆ ಪ್ರಯತ್ನಿಸಿ ಜಯಶಾಲಿಯಾಗುತ್ತಾಳೆ.

ಪ್ರಕೃತಿಯದೇ ಮಗುವಾದ ತಿಮ್ಮಿ ಸಹ ಸಹಜ ರಸಿಕತೆ ಉಳ್ಳವಳು. ಸುತ್ತಲ ಸೌಂದರ್ಯವನ್ನು ಮುಗ್ಧವಾಗಿ ಆಸ್ವಾದಿಸಬಲ್ಲವಳು. ಮನೆಯಿಂದ ತಪ್ಪಿಸಿಕೊಂಡು ಓಡಿ ಬಂದು, ಮಲೆನೆತ್ತಿಯಲ್ಲಿ ಅವಿತಿರುವಾಗಲೂ ಕಾನು-ಕಣಿವೆಗಳನ್ನೆಲ್ಲ ಆವರಿಸಿರುವ ಕಾವಣನನ್ನು ಕಂಡು ಸಂತೋಷಾಧಿಕ್ಯದಿಂದ ''ಇದೇನು, ನೊರೆ ನೊರೆ ಹಾಲು ಕಡ್ಲು ನಿಂತ್ಹಾಗೆ ಅದೆಯಲ್ಲಾ ?'' ಎಂದು ಕವಿಯಂತೆ ಉದ್ಗರಿಸಬಲ್ಲವಳು. ಪೂರ್ವ ದಿಗಂತದ ಕೆಂಡದುಂಡೆಯಂಥ ಸೂರ್ಯ, ಹಸಿರು ದ್ವೀಪಗಳಂಥ ಮಲೆನೆತ್ತಿಗಳು, ಮೋಡಗಳ ವರ್ಣಲೀಲೆ ಇವುಗಳನ್ನು ಕಂಡು ''ಆಹಾ, ನಮ್ಮ ಬಿಡಾರ ಇಲ್ಲೇ ಇದ್ದಿದ್ರೆ ?'' ಎಂದು ಮಗುವಂತೆ ಉದ್ಗರಿಸಬಲ್ಲವಳು.

ಮಾತಿನಮಲ್ಲಿ ಈ ತಿಮ್ಮಿ ಗಂಡನಾಗಲಿರುವ ಗುತ್ತಿಯನ್ನೂ ಸಹಿಸುವುದಿಲ್ಲ. ಆತ ಬೈದರೆ, ಹೀನಾಯಿಸಿದರೆ, ಪ್ರತ್ಯಸ್ತ್ರಗಳಿಂದ ತತ್ತರಿಸುವಂತೆ ಮಾಡಿಬಿಡುತ್ತಾಳೆ. ಆದರೂ ಆತನಲ್ಲಿನ ಪ್ರತ್ಯೇಕ ವ್ಯಾಮೋಹಕ್ಕಾಗಿ ತವರನ್ನೇ ತ್ಯಾಗ ಮಾಡುತ್ತಾಳೆ, ಕಷ್ಟಗಳನ್ನು ಸಹಿಸುತ್ತಾಳೆ, ಕಡೆಗೂ ಗುರಿ ಸೇರುತ್ತಾಳೆ.

ಪ್ರಣಯ ಸಾಹಸಿಗಳೂ ಧೀರೆಯರೂ ಆದ ತಿಮ್ಮಿ ಮತ್ತು ಚಿನ್ನಮ್ಮರಿಗೆ ವಿರುದ್ಧ ಪಾತ್ರಗಳಾಗಿ ನಿಲ್ಲುವವರು ಮತ್ತಿಬ್ಬರು ಮದುವಣಗಿತ್ತಿಯರು. ಭರಮೈ ಹೆಗ್ಗಡೆಯ ತಂಗಿ ಲಕ್ಕಮ್ಮ ಮತ್ತು ಸುಬ್ಬಣ್ಣ ಹೆಗ್ಗಡೆಯ ಮಗಳು ಮಂಜಮ್ಮ. ಇವರಿಬ್ಬರೂ ಶ್ರೀಮಂತ ಮನೆತನದ ಹೆಣ್ಣುಗಳಾದರೂ ಭಾವನೆಗಳಿಗೆ ಬೆಲೆಯಿಲ್ಲದ ಮದುವೆಯೆಂಬ ಸಂತೆಯಲ್ಲಿ ಮಾರಾಟಕ್ಕಿಟ್ಟಿರುವ ಚೆಂದುಳ್ಳಿ ಚೆಲುವೆಯರು. ಇವತ್ತು ತಂದೆ ಅಥವಾ ಅಣ್ಣ ''ಸಣ್ಣ ಹೆಗ್ಗಡೆಯೇ ನಿನ್ನ ಒಡೆಯ'' ಅಂದರೆ ಮುಗುಳ್ನಕ್ಕು ತಲೆದೂಗಬೇಕು. ಮರುದಿನ ಅವರು ಮನಸ್ಸು ಬದಲಿಸಿ ''ಸಣ್ಣ ಹೆಗ್ಗಡೆಯಲ್ಲ ಅವನ ಅಪ್ಪನೇ ನಿನ್ನ ಗಂಡ'' ಅಂದರೆ ಕೂಡಲೇ ತಾವೂ ಮನಸ್ಸು ಬದಲಿಸಿ ಕನಸಿನ ಏರ್ಪಾಡುಗಳನ್ನು ಆ ದಿಸೆಯಲ್ಲಿ ಬದಲಾಯಿಸಿಕೊಂಡು ಬಿಡಬೇಕು. ಬುಗುಡಿ-ಬುಲಾಕು, ಜುಮುಕಿ-ಅಡ್ಡಿಕೆಗಳಿಂದ ಸರ್ವಕಾಲವೂ ಅಲಂಕೃತರಾದರೂ ಬಾವಿಯಿಂದ ನೀರು ಹೊರುವುದೇನೂ ಇವರಿಗೆ ತಪ್ಪುವುದಿಲ್ಲ. ಮನೆಗೆಲಸದ ಜತೆಜತೆಗೆ ಮನೆಮಂದಿಯೊಂದಿಗೆ ಸಣ್ಣಪುಟ್ಟ ಕದನ ಇವರ ಮನರಂಜನೆ. ಕರಿಮೀನು ಸಾಹೇಬರು ಕದ್ದ ಮಾಲಿಗೆ ಬೆಲೆಯಾಗಿ ಕೊಡುವ ಉತ್ತುತ್ತೆ ಬತಾಸು ಓಲೆಬೆಲ್ಲ

ಮುಂತಾದವು ಇವರ ಆಹಾರದ ಬದಲಾವಣೆ. ಸ್ವಂತ ನಿರ್ಧಾರಗಳಿಗೆ ಅವಕಾಶವಿಲ್ಲದುದರಿಂದ, ಆ ಬಗ್ಗೆ ಅವರೂ ಹೆಚ್ಚು ಯೋಚಿಸುವುದಿಲ್ಲವಾದ್ದರಿಂದ, ಕಡೆಗೂ ಇವರಿಬ್ಬರ ಬಿಕರಿ ಮನೆಯ ಹಿರಿಯರ ಇಷ್ಟದಂತೆಯೇ ನಡೆಯುತ್ತದೆ.

ಇವೆಲ್ಲ ಸ್ತ್ರೀ ಪಾತ್ರಗಳಿಗಿಂತ ವಿಭಿನ್ನಳಾಗಿ ತೋರುವ ಕಾವೇರಿ ಪ್ರಕೃತಿಯ ಮಡಿಲಲ್ಲಿ ಮೈತುಂಬಿ ಬೆಳೆದಿರುವ ಮತ್ತೊಬ್ಬ ಮುದ್ದು ಬಾಲೆ. ನಿರ್ಭೀತ ವ್ಯಕ್ತಿತ್ವ, ನಿರ್ಭಿಡೆ ಈಕೆಯ ಸ್ವಭಾವ. ಜನಗಳ ಬಾಯಲ್ಲಿ ಚೆಲ್ಲುತನ ಹೆಚ್ಚಾಗಿರುವ ತುಂಟ ತರಳೆ. ಅಂಗಡಿ ವ್ಯವಹಾರದ ಅಂತಕ್ಕ ಸೆಟ್ಟಿಗಿತ್ತಿಯ ಮಗಳು ಕಾವೇರಿ ಮುಗ್ಧೆಯಾದರೂ ಕಡೆಕಡೆಗೆ ಮುಗ್ಧತೆ, ಅಜ್ಞಾನ ಮತ್ತು ಭಂಡ ಧೈರ್ಯಗಳ ಒಂದು ವಿಚಿತ್ರ ಸಂಗಮವಾಗಿ ತೋರುತ್ತಾಳೆ. ಅಪರಿಚಿತ ಪುರುಷರ ಬಗ್ಗೆ ಹೆಣ್ಣು ಮಕ್ಕಳಲ್ಲಿ ಜನ್ಮಸಿದ್ಧವಾಗಿರುವ ಸಂಕೋಚ ಅಥವಾ ಅಂಜಿಕೆ ಈಕೆಯಲ್ಲಿ ಕಾಣುವುದಿಲ್ಲ. ಒಂದು ವೇಳೆ ಅಂಥ ಅನುಮಾನ ಅಷ್ಟಿಷ್ಟು ತಲೆಯೆತ್ತಿದರೂ ಆಕೆಯ ಭಂಡ ಧೈರ್ಯ ಅದನ್ನು ಮೆಟ್ಟಿಬಿಡುತ್ತದೆ. ಈ ಕಾರಣಗಳಿಂದಾಗಿ ತಾನು ಕಣ್ತಪ್ಪಿನಿಂದ ಕಳೆದುಕೊಂಡಿರುವ ಹರಳುಂಗುರವನ್ನು ಮರಳಿ ಸಂಪಾದಿಸುವುದಕ್ಕಾಗಿ ಚೀಂಕ್ರನಂತಹ ಧೂರ್ತ ವ್ಯಕ್ತಿಯ ಸಂಚಿಗೆ ಬಲಿಯಾಗುತ್ತಾಳೆ. ಮನೆಯವರಾರಿಗೂ ಹೇಳದೆ ನಡುರಾತ್ರಿಯ ಕಗ್ಗತ್ತಲೆಯಲ್ಲಿ ಆಪ್ತನಲ್ಲದ ಅದೇ ಗಂಡಸಿನೊಂದಿಗೆ ಆ ಪ್ರಾಂತ್ಯದಲ್ಲೇ ಪುಂಡನೆಂದು ಹೆಸರಾದ ಇನ್ನೊಬ್ಬ ಗಂಡಸಿನ ಭೇಟಿಗೆ ಸಾಹಸ ಮಾಡುತ್ತಾಳೆ. ಈ ಸಂದರ್ಭದಲ್ಲಿ ಈ ಎಳೆ ಬಾಲೆಯ ಮೇಲೆ ಉಂಟಾಗುವ ಸಾಮೂಹಿಕ ದೌರ್ಜನ್ಯ ಕರುಳು ಕೊರೆಯುವಂಥದ್ದೇ ಆದರೂ ಮೂರ್ಖತನಗಳ ಅಂತ್ಯ ಕ್ಷೇಮಕರವಾಗೇನೂ ಇರುವುದಿಲ್ಲ ಅನ್ನುವುದು ಇಲ್ಲಿಯ ಪಾಠ.

ಕಾವೇರಿಯ ತಾಯಿ ಅಂತಕ್ಕ ಕಾದಂಬರಿಯ ಒಂದು ಅತ್ಯಂತ ಸಹಜ ಸ್ತ್ರೀ ಪಾತ್ರವಾಗಿ ಚಿತ್ರಿತವಾಗಿದ್ದಾಳೆ. ನಿತ್ಯಜೀವನದಲ್ಲಿ ಅಪ್ಪಟ ವ್ಯವಹಾರಗಿತ್ತಿಯಾದರೂ ಒಳ ಮನಸ್ಸಿನಲ್ಲಿ ಸ್ತ್ರೀ ಸಹಜ ಅನುಕಂಪ-ಮಾರ್ದವತೆಗಳನ್ನು ಹೇರಳವಾಗಿ ಉಳ್ಳವಳು. ಸನ್ನಿವೇಶಗಳಿಗೆ ತಕ್ಕಂತೆ ಭಾವ ತರಂಗಗಳನ್ನು ಸಹಜವಾಗಿ ಹರಿಯಬಿಡುವಾಕೆ. ಬಂದದ್ದನ್ನು ಬಂದಂತೆ ಒಪ್ಪಿಕೊಳ್ಳುವಾಕೆ. ಕಡೆಯಲ್ಲಿ ಮುದ್ದು ಮಗಳು ಕಾವೇರಿ ಅಮಾನುಷವಾಗಿ ಹಿಂಸೆಗೊಳಗಾಗಿ ಆತ್ಮಹತ್ಯೆ ಮಾಡಿಕೊಂಡಾಗ ಹಿಂದೆ ತನ್ನ ಗಂಡನ ಮರಣವನ್ನು ಸಹಿಸಿದಂತೆ ಮಗಳ ಮರಣವನ್ನೂ ಸಹಿಸುತ್ತಾಳೆ. ಆದರೆ ಮಗಳ ಮೇಲೆ ನಡೆದಿರುವ ಅತ್ಯಾಚಾರವನ್ನು ಈ ತಾಯಿ ಒಪ್ಪುವುದೇ ಇಲ್ಲ. ಕಾವೇರಿಯ ಮೈಮೇಲಿನ ಕ್ರೂರ ಗಾಯಗಳು ಆಕೆ ಬಾವಿಯಿಂದ ಕೆಳಕ್ಕೆ ಬೀಳುವಾಗ ಕಲ್ಲು ತರಚಿಯೇ ಉಂಟಾದವು ಎಂದೇ ವಾದಿಸುತ್ತದೆ ಈ ಮುಗ್ಧ ಮಾತೃ ಹೃದಯ ! ಇಳಿ ವಯಸ್ಸಿನಲ್ಲಿ ಹೀಗೆ ಒಂಟಿಯಾಗಿಬಿಡುವ ಈಕೆ ಮನೆ ಪಕ್ಕದ ಹೊಸ ಶಾಲೆಗೆ ಬರಲಿರುವ ಪುಟ್ಟ ಮಕ್ಕಳ ಒಡನಾಟದಲ್ಲಿ ಸಮಾಧಾನಿಯಾಗಲು ನಿರ್ಧರಿಸುತ್ತಾಳೆ. ಇದೇ ತನ್ನ ಜೀವನದ ಕರಿಮೋಡದಲ್ಲಿ ಅಂತಕ್ಕ ಕಂಡುಕೊಳ್ಳುವ ಹೊಸ ಬೆಳ್ಳಿ ಮಿಂಚು.

ಕಾವೇರಿಯಂತಹುದೇ ಮತ್ತೊಂದು ದುರಂತ ಪಾತ್ರ ರಂಗಮ್ಮ. ತಿರುಪತಿಗೆ ಹೋಗಿ ವಾಪಸು ಬರದಿರುವ

## ಬೆಳಕು



ನಾ ಕಂಡ ಬೆಳಕು ಮಲ್ಲಿಗೆಯಂತೆ
ಬೆಳದಿಂಗಳ ಮುಗಿಲ ಚಂದ್ರಿಣಿಯಂತೆ
ಕಂಡುಕಾಣದ ಆ ಬೆಳಕು
ಬದುಕಿನ ಹೆದ್ದಾರಿಯ ಥಳಕು

ಅಚ್ಚರಿಯ ಎಚ್ಚರದ ರಾತ್ರಿಗಳ ವೈಭವ
ನೊಂದ ದಿನಗಳ ನೀಲಿರಾಗದ ಅನುಭವ
ಇರುಳ ಆಳಕ್ಕಿಂತ ಹಗಲ ಕಿರುಕುಳ ಹೆಚ್ಚು
ವಜ್ರ ಬೆಳಕಿನಲಿ ವಜ್ರ ಹರಿತದ ರೊಚ್ಚು

ಅರೇ ಬರೇ ಮುಗಿಲ ಕರೆ
ಬಾಳಿಗೆ ಬದುಕಿನ ನೆನಪುಗಳೇ ಆಸರೆ
ಜೀವನಕೆಷ್ಟೋ ಕಪ್ಪು-ಬಿಳುಪಿನ ತೆರೆ
ಆ ಬೆಳಕ ಅರಿತರೆ ಬಾಳಿಗೇ ಆಸರೆ

ಅರಿತರೆ ಇಷ್ಟ-ಕಷ್ಟದ ಬದುಕು
ಸುರಿಯುವುದು ಸ್ವಪ್ನ ಜೀವನದ ಬೆಳಕು

ರವಿಕುಮಾರ್ ಎಂ.
೨ನೇ ಬಿ.ಎಫ್.ಎ., ಕಾಲೇಜ್ ಆಫ್ ಫೈನ್ ಆರ್ಟ್ಸ್
ಕರ್ನಾಟಕ ಚಿತ್ರಕಲಾ ಪರಿಷತ್, ಕುಮಾರಕೃಪ ರಸ್ತೆ
ಬೆಂಗಳೂರು-೫೬೦ ೦೦೧

ಸಹೃದಯಿ ದೊಡ್ಡಣ್ಣ ಹೆಗ್ಗಡೆಯ ಧರ್ಮಪತ್ನಿ. ದುರಂತದಿಂದಲೇ ಆರಂಭವಾಗಿ ದುರಂತದಿಂದಲೇ ಅಂತ್ಯಗೊಳ್ಳುತ್ತದೆ ಈಕೆಯ ಪಾತ್ರ. ತನ್ನ ಯಾವ ತಪ್ಪೂ ಇಲ್ಲದೆಯೇ ಬಾಳಿನಲ್ಲಿ ನರಕಯಾತನೆಗಳನ್ನು ಅನುಭವಿಸುತ್ತಾಳೆ. ಜನರಿಂದ ಅರೆಹುಚ್ಚಿ ಎಂದು ಭಾವಿಸಲ್ಪಟ್ಟ ಈಕೆ ಕಲ್ಲೂರಿನಲ್ಲಿ ದೇವರನ್ನು ಕುರಿತು ಸಲ್ಲಿಸುವ ಪ್ರಾರ್ಥನೆ ಹೃದಯಸ್ಪರ್ಶಿಯಾಗಿದೆ. ಮನುಷ್ಯರೊಂದಿಗೆ ಮಾತನಾಡದ ಈಕೆ ದೇವರೊಂದಿಗೆ ನಿಷ್ಕಲ್ಮಶವಾಗಿ ಸಂಭಾಷಿಸುತ್ತಾಳೆ. ಈ ಸಂದರ್ಭದಲ್ಲಿ ಥುತ್ತನೆ ಆಕೆಗೆ ಒದಗಿಬಿಡುವ ಶುದ್ಧ ಸಾಹಿತ್ಯಿಕ ಭಾಷೆ ಅಚ್ಚರಿಯುಂಟುಮಾಡಿದರೂ, ಆ ದೀನ ಮೊರೆ ಮನಕಲಕುತ್ತದೆ. ಗಂಡನಿಗಾಗಿ ವರ್ಷಾನುಗಟ್ಟಲೆ ಹಂಬಲಿಸಿ ಕಡೆಗೂ ಆತ ಜೀವವಿಲ್ಲದೆಯೇ ಬಳಿ ಬಂದಾಗ ಮೃದು ಸ್ವಭಾವದ ಈಕೆ ಆತನ ಶವವನ್ನಪ್ಪಿ ಪ್ರಾಣ ಬಿಡುತ್ತಾಳೆ. ಸಾಧು ಗುಣದವರಿಗೇ ಕಷ್ಟಗಳು ಹೆಚ್ಚು ಎನ್ನುವ ಲೋಕ ಸ್ವಭಾವವನ್ನು ಮುಗ್ಧೆ ರಂಗಮ್ಮ ಮತ್ತೊಂದು ಸಾರಿ ನಿರೂಪಿಸುತ್ತಾಳೆ.

ತನ್ನ ಒಳಿತನ್ನು ತಾನು ನೋಡಿಕೊಳ್ಳುವವನು ಸ್ವಾರ್ಥಿಯಲ್ಲ. ತನ್ನ ಒಳಿತಿಗಾಗಿ ಬೇರೆಯವರಿಗೆ ತೊಂದರೆ ಕೊಡುವವನು ಸ್ವಾರ್ಥಿ. ಈ ರೀತಿಯ ಪರಮಸ್ವಾರ್ಥಿಯಾಗಿ ಕಾದಂಬರಿಯಲ್ಲಿ ಚಿತ್ರಿತವಾಗಿರುವವಳು ನಾಗತ್ತೆ. ಒಂದು ರೀತಿಯಲ್ಲಿ ಈಕೆಗೆ ಖಳನಾಯಕಿಯ ಬಣ್ಣವೇ ಇದೆ. ತನ್ನ ಸ್ವಂತ ಸುಖ ಈಕೆಗೆ ಬಹಳ ಪ್ರಧಾನವಾದದ್ದು. ಅದರ ಸಾಧನೆಗಾಗಿ ಎಂತಹ ಹೇಯ ಕೃತ್ಯಗಳಿಗೂ ಈಕೆ ಸಿದ್ಧಳಾಗುತ್ತಾಳೆ. ತನ್ನ ಅನಾಚಾರಗಳ ಬಗ್ಗೆ ಊರವರೆಲ್ಲ ಅಸಹ್ಯಿಸಿಕೊಂಡರೂ ಈಕೆಗೆ ಗಣನೆಯೇ ಇಲ್ಲ. ತನ್ನ ಸ್ವಾರ್ಥ ಪರಾಕಾಷ್ಠೆಗೆ ಸೊಸೆ, ಸಾಧು ನಾಗಕ್ಕನನ್ನು ಬಲಿಕೊಡಲೂ ಈಕೆ ಹೇಸುವುದಿಲ್ಲ. ಮನಸ್ಸಿನೊಳಕ್ಕೆ ಬಿಟ್ಟುಕೊಳ್ಳದೆ ದೂರ ನಿವಾರಿಸಿಬಿಡುವಂಥ ಪಾತ್ರ ನಾಗತ್ತೆಯದು.

ಗುಣದಲ್ಲಿ ಅತ್ತೆ ನಾಗತ್ತೆಯಿಂದ ಸಂಪೂರ್ಣವಾಗಿ ವಿಭಿನ್ನಳಾಗಿ ನಿಲ್ಲುವ ನಾಗಕ್ಕ ಪ್ರೇಮಮಯಿ, ಸದ್ಗುಣಿ. ಸಣ್ಣ ಪ್ರಾಯದಲ್ಲಿಯೇ ವಿಧವೆಯಾದ ಆಕೆ ವಿಧಿಯಿಲ್ಲದೆ ಅತ್ತೆಯನ್ನೇ ಆತುಕೊಂಡವಳು. ಈಕೆಯ ವಾತ್ಸಲ್ಯ ಸ್ವಭಾವವನ್ನು ಕಂಡ ಚಿನ್ನಮ್ಮ ಚಿಕ್ಕಂದಿನಲ್ಲಿ ತಾನು ಕಳಕೊಂಡ ತಾಯಿಯನ್ನು ಈ ಮಮತಾಮಯಿಯಲ್ಲಿ ಕಾಣಬಯಸುತ್ತಾಳೆ. ಇಂಥ ಉದಾತ್ತ ಪ್ರೀತಿಯನ್ನು ತುಂಬಿಕೊಡಲು ನಾಗಕ್ಕನೂ ಕೂಡಲೇ ಸಿದ್ಧಳಾಗುತ್ತಾಳೆ. ಸದಾಕಾಲ ಚಿನ್ನಕ್ಕನ ಕ್ಷೇಮಕಾತರೆಯಾಗುತ್ತಾಳೆ. ತನ್ನ ಜೀವನ ಏನೆಲ್ಲ ಸಂದಿಗ್ಧಗಳನ್ನು, ದುರಂತಗಳನ್ನು ಕಂಡರೂ ಚಿನ್ನಮ್ಮನ ಬಗೆಗಿನ ಆಕೆಯ ಪ್ರೀತಿ ಮಾಸುವುದಿಲ್ಲ. ತನ್ನ ಸ್ವಂತ ಸುಖವನ್ನು ಚಿನ್ನಮ್ಮನ ಸುಖ-ಸಂತೋಷಗಳಲ್ಲಿ ಕಂಡುಕೊಳ್ಳುತ್ತಾ ಆಕೆಗೆ ಆಸರೆಯಾಗಿ ನಿಲ್ಲುತ್ತಾಳೆ. ಅದನ್ನೇ ಇನ್ನುಳಿದ ತನ್ನ ಜೀವನದ ಉದ್ದೇಶವಾಗಿಸಿಕೊಳ್ಳುತ್ತಾಳೆ.

ಇಂಥದ್ದೇ ಇನ್ನೊಂದು ಉದಾತ್ತ ಪಾತ್ರ ದೊಡ್ಡಮ್ಮ ಹೆಗ್ಗಡಿತಿ. ಈಕೆ ತರುಣ ದೇವಯ್ಯನ ಅಮ್ಮ. ವ್ಯವಹಾರ ನಿಷ್ಠುರರಾದ ಕಲ್ಲಯ್ಯ ಗೌಡರ ಪತ್ನಿ. ಸಹಜವಾಗಿ ಸನ್ನಡತೆಗಳುಳ್ಳ ದೊಡ್ಡಮ್ಮ ಹೆಗ್ಗಡಿತಿ ಕರುಣಾಳು. ಧರ್ಮಭೀರು, ನೆರೆ ಹೊರೆಯವರಲ್ಲಿಯೂ ಕೈಕೆಳಗೆ ದುಡಿಯುವ ಆಳುಗಳಲ್ಲಿಯೂ ಪ್ರೇಮವುಳ್ಳವಳು. ಜೀತದಾಳುಗಳ ವಿಷಯವಾಗಿ ಗಂಡನ ಕ್ರೂರ ವರ್ತನೆಗಳನ್ನು ಬಲವಾಗಿ

ವಿರೋಧಿಸುವವಳು. ಅಷ್ಟೇ ಅಲ್ಲ, ಗಂಡನ ಕ್ರೂರ ವರ್ತನೆಗೂ ನಂತರ ಅವರಿಗೆ ಒದಗುತ್ತಿದ್ದ ದೈಹಿಕ-ಮಾನಸಿಕ ವ್ಯಾಧಿ ವ್ಯಾಪಾರಗಳಿಗೂ ಸಂಬಂಧ ಇರುವುದನ್ನು ಅನುಭವದಿಂದ ತಿಳಿದು ಆಗಿಂದಾಗ್ಗೆ ಗಂಡನಿಗೆ ಬುದ್ಧಿ ಹೇಳುತ್ತಿದ್ದಾಕೆ. ಹಿರಿತನದ ಜವಾಬ್ದಾರಿಯಿಂದ ಸಂಸಾರದ ಸಾಮರಸ್ಯವನ್ನು ಹಿತವಾಗಿ ತೂಗಿಸಿಕೊಂಡು ಹೋಗುತ್ತಿದ್ದಾಕೆ. ಮನೆಮಂದಿಗೂ ಆಕೆಯ ಪ್ರವರ್ತನೆಗಳಲ್ಲಿ ಗೌರವಾದರಗಳಿದ್ದುದರಿಂದ ಈಕೆಯ ವ್ಯಕ್ತಿತ್ವ ವಿಶೇಷ ಸ್ಥಾನವನ್ನು ಗಳಿಸಿಕೊಳ್ಳುತ್ತದೆ.

ಇಡೀ ಕಾದಂಬರಿಯಲ್ಲಿ ಒಂದೆರಡು ಬಾರಿ ಮಾತ್ರ ಸುಳಿಯುವ ಸೀತಮ್ಮ ಜಿಂಕೆಯಂಥ ಒಂದು ಸಾಧು ಪಾತ್ರ. ಅತ್ಯಂತ ದೈವಭಕ್ತನಾದ ಶಂಕರ ಹೆಗಡೆ ದೈವಭಕ್ತಿ ಅಥವಾ ಶುಚಿಗೂ, ಸಂತಾನಾಭಿವೃದ್ಧಿಗೂ ಯತ್ಕಿಂಚಿತ್ತೂ ಸಂಬಂಧ ವಿಲ್ಲವೆಂದು ಭಾವಿಸಿದವನಾದ್ದರಿಂದ, ಅವನ ಮಡದಿ ಸೀತಮ್ಮ ಕಾದಂಬರಿಯಲ್ಲಿ ಒಂದು ಹೆರುವ ಯಂತ್ರವಾಗಿ ಮಾತ್ರ ಚಿತ್ರಿತವಾಗಿದ್ದಾಳೆ. ಪದೇ ಪದೇ ಹೆರುವಂತೆಯೇ ಹೆತ್ತದ್ದನ್ನು ಕಳೆದುಕೊಳ್ಳುವುದನ್ನು ಅನಿವಾರ್ಯವಾಗಿ ಅಭ್ಯಾಸಮಾಡಿಕೊಳ್ಳಬೇಕಾದ ಬಡಪಾಯಿ ಈಕೆ.

ಸೀತಮ್ಮ ಹೀಗೆ ಅತಿ ಸಂತಾನಕ್ಕೆ ಮಾದರಿಯಾದರೆ ಸಂತಾನದ ಅಭಾವದ ಮಾದರಿ, ಈಕೆಯ ನಾದಿನಿ ಶ್ರೀಮಂತೆ ಜಟ್ಟಮ್ಮ. ಈಕೆಯದೇ ದೋಷವೋ ಕಾಮವ್ಯಸನಿ ಗಂಡ ಭರಮೈ ಹೆಗ್ಗಡೆಯದೇ ದೋಷವೋ ಅಂತೂ ಈಕೆಗೆ ಮಕ್ಕಳಿಲ್ಲ. ಆ ವಿಷಯವಾಗಿ ಗಂಡನನ್ನು ಅನುಮಾನ ಪಡಬಹುದೆಂಬುದು ಕೂಡ – ಆಗಿನ ಮುಗ್ಧ ಪರಿಸರದ ಇನ್ನಿತರ ಹೆಣ್ಣುಗಳಂತೆ – ಈಕೆಗೆ ತಿಳಿದಿಲ್ಲ. ಕುಷ್ಠರೋಗ ಬಂದು ನಡೆಯಲಾಗದ ಗಂಡನನ್ನು ಕುಕ್ಕೆಯಲ್ಲಿ ಹೊತ್ತು ವೇಶ್ಯೆಯ ಮನೆ ತಲುಪಿಸುತ್ತಿದ್ದ ಹಿಂದಿನ ಕಾಲದ ಪರಮ ಪತಿವ್ರತೆಯನ್ನು ನೆನಪಿಸುವ ಮತ್ತೊಬ್ಬ ಪತಿವ್ರತೆ ಈಕೆ ! ಗಂಡ ಎರಡನೇ ಮದುವೆ ಮಾಡಿಕೊಂಡರೂ ಪರವಾಗಿಲ್ಲ, ಬರುವವಳು ತನ್ನ ತಾಳಿಭಾಗ್ಯವನ್ನು ವಿಸ್ತರಿಸುವವಳಾಗಿರಬೇಕು... ಅನ್ನುವುದು ಈಕೆಯ ಸತೀತ್ವದ ಹಂಬಲ. ಕಡೆಗೂ ಗಂಡ ಭರಮೈ ಹೆಗ್ಗಡೆಯ ಔದಾರ್ಯ ಅದನ್ನು ಈಡೇರಿಸುತ್ತದೆ.

ಇನ್ನುಳಿದ ಕೆಲವು ಸ್ತ್ರೀ ಪಾತ್ರಗಳು ಈ ವಿಶಾಲ ಕಥಾ ಸಮುದ್ರದ ಸಣ್ಣ ಪುಟ್ಟ ಹನಿಗಳು. ಪ್ರತಿಯೊಬ್ಬರಲ್ಲಿಯೂ ಸ್ನೇಹವುಳ್ಳವಳಾಗಿ, ಎಲ್ಲರ ಗೌರವಾದರಗಳಿಗೆ ಪಾತ್ರಳಾಗಿ, ಒಂದು ಸುಗಂಧಭರಿತ ಎಲೆಮರೆಯ ಹೂವಿನಂತೆ ಚಿತ್ರಿತಳಾಗಿರುವ ಕೋಣೂರಿನ ದಾನಮ್ಮ ಹೆಗ್ಗಡಿತಿ; ತನ್ನ ಸಣ್ಣಕೂಸಿನ ಲಾಲನೆ-ಪಾಲನೆಗಳನ್ನೇ ಜೀವನದ ಮಹತ್ವದ ಸಂಗತಿಗಳಾಗಿ ಭಾವಿಸಿ, ಮೂರು ಹೊತ್ತೂ ಅದರಲ್ಲೇ ತಲ್ಲೀನಳಾಗಿರುವ ಈಕೆಯ ಮಗಳು ದೇವಮ್ಮ; ಹಾಗೆಯೇ ಮೊಮ್ಮಗಳ ಯೋಗಕ್ಷೇಮವೊಂದೇ ಜೀವಿತೋದ್ದೇಶ ವಾದ ಚಿನ್ನಮ್ಮನ ಅಜ್ಜಿ; ಗಂಡನ ಘೋರ ಆತ್ಮಹತ್ಯೆಯಿಂದ ಮನಸ್ಸು ನೊಂದರೂ ಇನ್ನೆಲ್ಲೋ ಆಶ್ರಯ ಕಂಡುಕೊಂಡು ಬಾಳನ್ನು ಕಟ್ಟಿಕೊಳ್ಳುವ ಅಕ್ಕಣಿ; ಹಳ್ಳಿಯ ಅಮಾಯಕ ಹೆಣ್ಣಾದರೂ ಸಂದರ್ಭ ಬಂದಾಗ ಸಾಹಸಿಯಾಗಿ ಮಗಳ ಪಲಾಯನಕ್ಕೆ ನೆರವಾಗುವ ತಿಮ್ಮಿಯ ಅಮ್ಮ ಸೇಸಿ; ಗಂಡ ಚೀಂಕ್ರನಿಂದಲೇ ಅಮಾನುಷ ಅತ್ಯಾಚಾರಕ್ಕೊಳಗಾಗಿ ಆ ಕಾರಣದಿಂದಲೇ ಪ್ರಾಣಬಿಡುವ ತುಂಬಿದ ಬಸುರಿ ದೇಯಿ – ಇವರೆಲ್ಲ ಕಥಾ ಹಂದರದಲ್ಲಿ ಆಗೊಮ್ಮೆ ಈಗೊಮ್ಮೆ ಸುಳಿದು ಹೋಗುವ ಪಾತ್ರಗಳು.

ಇಡೀ ಕಾದಂಬರಿಯಲ್ಲಿ ಒಂದೇ ಒಂದು ಬಾರಿ ಸಂಕ್ಷಿಪ್ತವಾಗಿ ಕಾಣಿಸಿಕೊಂಡರೂ ಗಮನ ಸೆಳೆಯುವವಳು, ಹೃದಯಕ್ಕೆ ಹತ್ತಿರವಾಗುವವಳು, ಮುದಿಗಾಲದಲ್ಲಿ ಒಂಟಿ ಬಾಳು ಬಾಳುತ್ತಿರುವ ಸೂಲಗಿತ್ತಿ ·ಯೆಂಕಿ. ಸುರಿವ ಜಡಿಮಳೆಯಲ್ಲಿ ಮದುಮಗಳ ವೇಷದಲ್ಲೇ ಇನಿಯ ಮುಕುಂದನೊಡನೆ ಪರಾರಿಯಾಗುತ್ತಿರುವ ಚಿನ್ನಮ್ಮನನ್ನು ಮನೆಗೆ ಕರೆಸಿಕೊಂಡು ಈ ವೃದ್ಧೆ ಆದರಿಸುವ ಸಂದರ್ಭ ಇದು. ಚಿನ್ನಮ್ಮನನ್ನು ಕಾಣುತ್ತಿದ್ದಂತೆ ಈಕೆಯ ಹೃದಯದಲ್ಲಿ ಅಧಿಕ ಪ್ರೇಮ ಉತ್ಪನ್ನವಾಗುತ್ತದೆ. ಆಕೆ ಬೇಡ ಬೇಡವೆಂದರೂ ಕೇಳದೆ ಕೆಸರಾಗಿದ್ದ ಕಾಲುಗಳನ್ನು ತಾನೇ ಅರ್ತಿಯಿಂದ ತೊಳೆಯುತ್ತಾಳೆ. ಮಣ್ಣು ಮೆತ್ತಿದ್ದ ಕಾಲುಂಗುರಗಳನ್ನು ಶುಚಿಮಾಡಿ ಮತ್ತೆ ಮುದ್ದಿನಿಂದ ತೊಡಿಸುತ್ತಾಳೆ. ಆಮೇಲೆ ಚಿನ್ನಮ್ಮನನ್ನು ಬೆಂಕಿಯ ಮುಂದೆ ಕರೆದೊಯ್ದು ಒದ್ದೆಯಾರಿಸುತ್ತಾಳೆ. ಹಣ್ಣು ತಿನ್ನಿಸಿ ಹಾಲು ಕುಡಿಸುತ್ತಾಳೆ. ಸೊಬಗು ತುಂಬಿ ಹೊಂಬೆಳಗ ಮುದ್ದು ಸೂಸುವ ಚಿನ್ನಮ್ಮನ ಸುಕುಮಾರ ಗಾತ್ರವನ್ನು ನಾನಾ ನೆವದಿಂದ ತನ್ನ ಸುಕ್ಕುಗಟ್ಟಿದ ಒರಟು ಕೈಯಿಂದ ಮುಟ್ಟಿ ಮುಟ್ಟಿ ಸೊಗಯಿಸುತ್ತಾ ಬರಿದಾಗಿದ್ದ ಪ್ರೀತಿ ಪಾತ್ರೆಯನ್ನು ಮೊಗೆದು ಮೊಗೆದು ತುಂಬಿಕೊಳ್ಳುತ್ತಾಳೆ. ಕಡೆಗೆ ಮನಸ್ಸಿಲ್ಲದ ಮನಸ್ಸಿನಿಂದ ಹನಿಗಣ್ಣಾಗಿ ಬೀಳ್ಕೊಡುತ್ತಾಳೆ. ಒಂದು ಅತಿ ಪುಟ್ಟ ಪ್ರಸಂಗದಲ್ಲೂ ತನ್ನ ಪ್ರೇಮಲ ಸ್ವಭಾವದಿಂದಾಗಿ ಕೋರೈಸುವ ಈ ಯೆಂಕಿ ಪ್ರೀತಿಸುವ ಸಂತೋಷಕ್ಕಾಗಿಯೇ ಪ್ರೀತಿಸುವ ಶಬರಿಯನ್ನು ನೆನಪು ಮಾಡುತ್ತಾಳೆ.

ಹೀಗೆ ಸಮಾಜದ ಬೇರೆ ಬೇರೆ ವರ್ಗದ, ಬೇರೆ ಬೇರೆ ಜಾತಿಯ ಅನೇಕ ಮಹಿಳೆಯರ ವ್ಯಕ್ತಿ ಚಿತ್ರಣಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವಿಸ್ತೃತವಾಗಿ ಹರಡಿಕೊಂಡಿವೆ. ಕೆಳವರ್ಗದ ಜೀತದಾಳಾಗಲಿ, ಮೇಲ್ವರ್ಗದ ಹೆಗ್ಗಡಿತಿಯರಾಗಲಿ, ಅವರೆಲ್ಲರ ಅಂತರಂಗವನ್ನು ಹೊಕ್ಕು ನೋಡಿ ಅನುಭವಿಸಿ ಅರ್ಥೈಸಿ, ತಮ್ಮದೇ ಆದ ಭಾವ-ಬಣ್ಣಗಳಲ್ಲಿ ನಿರೂಪಿಸುವ ಕವಿಯ ಪ್ರತಿಭೆ ಅನುಪಮ ವಾದದ್ದು. ಮಹಿಳೆಯರ ಮನದಾಳದ ಮಾತುಗಳು, ನೋವುಗಳು, ಸಮಸ್ಯೆಗಳು ಅಲ್ಲಲ್ಲೇ ಕತೆಗಳಾಗುತ್ತಾ, ಅಲ್ಲಲ್ಲೆ ದಿಕ್ಕು ಬದಲಾಯಿಸುತ್ತಾ ರಂಜನೀಯವಾಗಿ ಕವಲೊಡೆಯುತ್ತವೆ. ಇಲ್ಲಿ ಯಾವುದೂ ಪೂರ್ತಿ ದುರಂತವಲ್ಲ ಅಥವಾ ಪೂರ್ತಿ ಸುಖಾಂತವಲ್ಲ. ಸನ್ನಿವೇಶಕ್ಕೆ ತಕ್ಕ ಹಾಗೆ ಕೆಲವು ಸಹಜ ಸುಖಾಂತ; ಕೆಲವು ಸಹಜ ದುರಂತ.

**ಭಾರತೀ ಕಾಸರಗೋಡು**
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್,
ವಿಜಯನಗರ, ಬೆಂಗಳೂರು - ೫೬೦ ೦೪೦



# ಬಾತುಕೋಳಿ ಸರದಾರರು

ಕೊಯ್ಲಾಗಿದ್ದ ಗದ್ದೆ ಪಾತಿಗಳಲ್ಲಿ ಬಾತುಕೋಳಿಗಳ ಹಿಂಡು ಕ್ವಾಕ್‌ಕ್ವಾಕ್ ಎಂದು ಸದ್ದುಮಾಡುತ್ತ ಹೊಟ್ಟೆ ತುಂಬಿಸಿಕೊಳ್ಳುವ ಕಾಯಕದಲ್ಲಿ ತೊಡಗಿತ್ತು. ಮೂರು ಮಂದಿ ಯುವಕರು ಕೈಗಳಲ್ಲಿ ಕೋಲು ಹಿಡಿದು ಕೊಂಡು ಅವನ್ನು ಕಾಯುತ್ತಿದ್ದರು. ಹಕ್ಕಿಗಳನ್ನು ಅರಸುತ್ತ ಕೆರೆಯತ್ತ ಹೊರಟಿದ್ದ ನಾನು, ಈ ಬಾತುಕೋಳಿ ಮಂದಿಯ ಬಗ್ಗೆ ತಿಳಿದುಕೊಳ್ಳಲೆಂದು ಅವರೊಂದಿಗೆ ಮಾತಿಗೆ ನಿಂತೆ.

''ಯಾವ ಕಡೆಯವರು ನೀವು ?''

ಅಣ್ಣ ತಮ್ಮಂದಿರ ಪೈಕಿ ಹಿರಿಯನಾದ ಶಿವರಾಮ್ ಉತ್ತರಿಸಿದ: ''ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಸಾರ್.''

''ಅರೆ, ಬಹಳ ದೂರವಾಯಿತಲ್ಲ! ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಎಲ್ಲಿ, ಕಿರುಗಾವಲು ಹೋಬಳಿಯ ಕಾಗೆಪುರ ಎಲ್ಲಿ?''

''ನಾವು ಪ್ರತಿವರ್ಷ ಬರತೀವಲ್ಲ ಸಾರ್. ಹೇಳಿಕೇಳಿ ನಮ್ಮದು ಬೆಂಗಾಡು. ನಮಗೆ ಸ್ವಂತ ಭೂಮಿಗೀಮಿ ಇಲ್ಲ. ಬಾತುಕೋಳಿ ಸಾಕಣೆಯೇ ನಮ್ಮ ಜೀವನ.''

''ಕೋಳಿ ಸಾಕಣೆ, ಮೊಲ ಸಾಕಣೆ ಮುಂತಾದವಕ್ಕೆಲ್ಲ ಸರಕಾರದ ಸಬ್ಸಿಡಿ, ಸಹಾಯ ಇರುವಂತಿದೆ. ನಿಮಗೂ ಇರಬಹುದಲ್ಲವೆ ?''

''ಬಾತುಕೋಳಿ ಸಾಕಣೆಗೆ ಯಾರು ಸಬ್ಸಿಡಿ ಕೊಡ್ತಾರೆ ಸಾರ್! ಸಾಲಸೋಲ ಮಾಡಿ ಬೇಕಾದ ಬಂಡವಾಳ ನಾವೇ ಒದಗಿಸಿಕೊಳ್ಳಬೇಕು....''

ಕಾಗೆಪುರದ ಒಂದು ಗದ್ದೆಯಲ್ಲಿ ಇವರು ಕ್ಯಾಂಪ್ ಹಾಕಿದ್ದಾರೆ. ಬಾತುಕೋಳಿಗಳಿಗಾಗಿ ಬಲೆಯ ಬೇಲಿ ಹಾಕಿದ್ದಾರೆ. ಅದರ ಸಮೀಪದಲ್ಲಿ ಅಡಿಗೆ ಮಾಡಲು, ಮಲಗಲು ಒಂದು ಸಣ್ಣ ಟೆಂಟ್. ಮುಂಜಾನೆ ಅಡಿಗೆ ಮಾಡಿ ಉಂಡು, ಮಧ್ಯಾಹ್ನದ ಊಟ ಡಬ್ಬಿಯಲ್ಲಿ ತುಂಬಿಕೊಂಡು ಬಾತುಕೋಳಿ ಹಿಂಡಿನೊಂದಿಗೆ ಹೊರಟುಬಿಡುತ್ತಾರೆ. ಕನ್ನಡ, ತೆಲುಗು ಮತ್ತು ತಮಿಳು ಭಾಷೆಗಳನ್ನು ಸರಾಗವಾಗಿ ಮಾತನಾಡುತ್ತಾರೆ. ಹಿರಿಯ ಶಿವರಾಂ ಅಕ್ಷರ ಕಲಿತಿಲ್ಲ. ಇಲ್ಲಿರುವ ಮತ್ತೊಬ್ಬ ತಮ್ಮ ಮಂಜುನಾಥ್ ಹೈಸ್ಕೂಲು ಮುಗಿಸಿದ್ದಾನೆ. ಕೆಲಸಕ್ಕೆ ಪ್ರಯತ್ನಿಸಿಲ್ಲ. ಕಿರಿಯ ರವಿ ಸ್ವಲ್ಪ ಕಲಿತಿದ್ದಾನೆ. ಮತ್ತೊಬ್ಬ ತಮ್ಮ ಹೈಸ್ಕೂಲ್ ಮುಗಿಸಿ ಊರಿನಲ್ಲಿ ತಂದೆತಾಯಿಗಳ ಬಳಿ ಇದ್ದು ಕೆಲಸಕ್ಕಾಗಿ ಪ್ರಯತ್ನಿಸುತ್ತಿದ್ದಾನೆ. ಇವರು ಮೂಲತಃ ತಮಿಳ್ನಾಡಿನ ಗುಡಿಯಾತ್ತಮ್‌ಗೆ ಸೇರಿದವರು.

ಬಾತುಕೋಳಿ ಸಾಕಣೆ ಆಂಧ್ರದಲ್ಲಿ ದೊಡ್ಡಪ್ರಮಾಣದಲ್ಲಿ ನಡೆಯುತ್ತದೆ. ಸಣ್ಣ ಮರಿಗಳನ್ನು ಹೈದರಾಬಾದಿನಿಂದ ತರಿಸುತ್ತಾರೆ. ಸಾಕುವವರಿಗೆ ಮರಿಗಳನ್ನು ಸರಬರಾಜು ಮಾಡುವ ಜಾಲಬಂಧವೇ ಇದೆ. ಸಣ್ಣಮರಿಗಳಿಗೆ ನಾಲ್ಕರಿಂದ ಹತ್ತು ರೂ.ವರೆಗೆ ಬೆಲೆ ಇರುತ್ತದೆ. ದೊಡ್ಡಬಾತುಗಳು ೫೦ ರಿಂದ ೭೦ ರೂ.ವರೆಗೆ ಮಾರಾಟವಾಗುತ್ತವೆ. ಇವರು ಮುಖ್ಯವಾಗಿ ಮೊಟ್ಟೆಗಳಿಗಾಗಿ ಬಾತು ಸಾಕುತ್ತಾರೆ. ಒಂದೊಂದು ಬಾತು ಸುಮಾರು ೫೦ರವರೆಗೆ ಮೊಟ್ಟೆಯಿಡುತ್ತದೆ. ಸುಮಾರು ೪೦ ದಿನಗಳ ನಂತರ ಅವು ಮತ್ತೆ ಮೊಟ್ಟೆಯಿಡಲು ಪ್ರಾರಂಭಿಸುತ್ತವೆ. ಮೊಟ್ಟೆಗಳನ್ನು ಹೆಚ್ಚಾಗಿ ಕೇರಳಕ್ಕೆ ಕಳಿಸುತ್ತಾರೆ. ಬಾತುಕೋಳಿ ಮಾಂಸ ಮತ್ತು ಮೊಟ್ಟೆಗಳಿಗೆ ಕೇರಳದಲ್ಲಿ ಬೇಡಿಕೆ ಹೆಚ್ಚು. ಮೊಟ್ಟೆಗಳಿಂದ ಪ್ರತಿದಿನ ೨೮೦ ರಿಂದ ೩೦೦ ರೂ. ವರೆಗೆ ವರಮಾನವಿದೆ. ಇವರು ಇರುವಲ್ಲಿಗೇ ಬಂದು ಹಣ ನೀಡಿ ಮೊಟ್ಟೆಗಳನ್ನು ಒಯ್ಯಲು ಸಹ ವ್ಯವಸ್ಥೆ ಇದೆ. ಇವರ ಹಿಂಡಿನಲ್ಲಿ ೭೦೦ ಬಾತುಕೋಳಿಗಳಿವೆ.

ಒಂದು ಕಡೆ ಎರಡರಿಂದ ಮೂರು ತಿಂಗಳು ಇರುತ್ತಾರೆ. ಮುಂದಿನ ಕ್ಯಾಂಪಿಗೆ ಹೋಗುವಾಗ ಬಾಡಿಗೆ ಲಾರಿಯಲ್ಲಿ ಮಂದೆಯನ್ನು ಸಾಗಿಸುತ್ತಾರೆ. ಮಂದೆಯನ್ನು ಇಡೀ ಹಗಲು ರಾತ್ರಿ ಬಹಳ ಜಾಗರೂಕತೆಯಿಂದ ಕಾಯಬೇಕಾಗುತ್ತದೆ. ಊರಿನಲ್ಲಿ ನಾಯಿಗಳ ಉಪದ್ರವ, ಕಬ್ಬಿನ ಗದ್ದೆಗಳಿರುವ ಕಡೆ ನರಿಗಳ ಕಾಟದ ಅಪಾಯವಿರುತ್ತದೆ. ಕ್ಯಾಂಪು ಮಾಡುವ ಊರಿನವರೊಂದಿಗೆ ಸ್ನೇಹದಿಂದ ಇರುವುದು ಮುಖ್ಯ. ಬಹುಮಟ್ಟಿಗೆ ಹೆಚ್ಚು ವಿನಯದಿಂದಲೂ ನಡೆದುಕೊಳ್ಳಬೇಕಾಗುತ್ತದೆ. ಕೆಲವು ಮಂದೆಗಳವರು ಸಂಸಾರ ಸಮೇತ ಬಂದಿರುತ್ತಾರೆ. ತಮ್ಮದೇ ಕಾವಲು ನಾಯಿಗಳನ್ನು ಹೊಂದಿರುವ ಮಂದೆಗಳೂ ಇವೆ. ಬಾತುಕೋಳಿ ಹಿಂಡಿನೊಂದಿಗೆ ಪ್ರತಿದಿನ ನಾಲ್ಕರಿಂದ ಐದುಮೈಲು ತಿರುಗಾಡಲೇಬೇಕಾಗುತ್ತದೆ. ಸಣ್ಣಪುಟ್ಟ ಹಳ್ಳಗಳು, ನೀರಿರುವ ಗದ್ದೆ ಪಾತಿಗಳಲ್ಲಿ ಅವು ಸಂತೋಷದಿಂದ ವಿಹರಿಸುತ್ತವೆ. ಹುಳಹುಪ್ಪಡಿಗಳನ್ನು ತಿನ್ನುತ್ತವೆ.

ಹಿಂದೆ, ಹೊಲಗಳಲ್ಲಿ ಕುರಿ ಮಂದೆ ಹಾಕುತ್ತಿದ್ದರು. ಹೊಲದೊಡೆಯನಿಗೆ ಸಾಕಷ್ಟು ಕುರಿಗೊಬ್ಬರ ಸಿಕ್ಕುತ್ತಿತ್ತು. ಅದಕ್ಕಾಗಿ ಮಂದೆಯವನಿಗೆ ಹೊಲದೊಡೆಯ ಹಣ ತೆರಬೇಕಾಗುತ್ತಿತ್ತು. ಈಗ ಬಾತುಕೋಳಿ ಮಂದೆಯವರಿಗೂ ಹಣ ಸಿಗುತ್ತದೆಂದು ಕೆಲವರು ತಪ್ಪಾಗಿ ಭಾವಿಸುವುದುಂಟು. ಶಿವರಾಮ್ ಅದನ್ನು ಅಲ್ಲಗಳೆಯುತ್ತಾರೆ.

ಬಾತುಕೋಳಿಗಳು ಬಿರುಬೇಸಿಗೆಯನ್ನು ತಾಳಿಕೊಳ್ಳಲಾರವು. ಆಗ ನೆರಳು ನೀರಿನ ಆಶ್ರಯ ಬೇಕಾಗುತ್ತದೆ. ಬಿಸಿಲೇರುವ ಮೊದಲೇ ಮೇವು ಅರಸಬೇಕಾಗುತ್ತದೆ. ಅವುಗಳಿಗೆ ಜೋಳ, ಭತ್ತ ಮುಂತಾದ ಧಾನ್ಯಗಳ ಮೇವನ್ನು ನೀಡಬೇಕಾಗುತ್ತದೆ.

ಕೆಲಸ ಹುಡುಕುತ್ತ ನಗರಗಳತ್ತ ವಲಸೆಹೋಗುವ ಬದಲು ಬದುಕಲು ಇರುವ ಅವಕಾಶಗಳನ್ನು ಬಳಸಿಕೊಳ್ಳುವವರು ಇವರು !

❑ *ಕೆ. ಪಿ. ಎಸ್.*

## ಶತಾವರಿಯ ಮಹತ್ವ

ಭಾರತೀಯ ವೈದ್ಯಶಾಸ್ತ್ರದಲ್ಲಿ ಆಯುರ್ವೇದವು ಪ್ರಾಚೀನ ಕಾಲದಿಂದಲೂ ಮಹತ್ವದ ಸ್ಥಾನ ಪಡೆದಿದೆ. ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಬ್ರಿಟಿಷರು ನಮ್ಮ ಕಂದಮೂಲಗಳನ್ನೇ ಮೆಚ್ಚಿಕೊಂಡು ಇಲ್ಲಿ ಧ್ವಜ ಊರಿದ್ದು. ನಮ್ಮ ದೇಶವು ಸಕಲ ಸಸ್ಯ ಸಂಪತ್ತಿನ ತವರೂರಾಗಿದೆ. ಆದ್ದರಿಂದಲೇ ಕವಿಗಳು ನಮ್ಮ ದೇಶಕ್ಕೆ 'ಸಸ್ಯಶ್ಯಾಮಲೆ' ಎಂದಿರುವರು. ಈ ಸಸ್ಯ ಸಂಪತ್ತಿನಲ್ಲಿ ಹುಲ್ಲಿನ ಜೊತೆಗೆ ಹುಲ್ಲಾಗಿ ಹುದುಗಿಕೊಂಡು ಜನಸಾಮಾನ್ಯರಿಗೆ ತಿಳಿಯದಂತಿರುವ ಮಹತ್ವದ ಸಸ್ಯವೆಂದರೆ ಆಯುರ್ವೇದದಲ್ಲಿ 'ಅದ್ವಿತೀಯ ಘನಮೂಲಿಕೆ' ಎಂದು ಹೆಸರು ಪಡೆದಿರುವ ಶತಾವರಿ. ಇದಕ್ಕೆ 'ಹಲವು ಮಕ್ಕಳ ಬೇರು' ಎಂತಲೂ ಕರೆಯುವರು. ಐದಾರು ಎಸಳುಗಳಿಂದ ಕೂಡಿಕೊಂಡು ನೋಡಲು ಹುಣಿಸೆ ಸೊಪ್ಪಿನಂತಿರುವ ಶತಾವರಿಯು ನೆಲಕ್ಕೆ ಬಳ್ಳಿಯಂತೆ ಹಬ್ಬುತ್ತದೆ. ಅವರೆ ಕಾಯಿಯಂತೆ ಚಿಕ್ಕ ಚಿಕ್ಕ ಕಾಯಿ ಬಿಡುವ ಇದು ಆಯುರ್ವೇದದಲ್ಲಿ ಬಹೂಪಯೋಗಿ ಸಸ್ಯವಾಗಿ ಕೆಲಸ ಮಾಡುತ್ತದೆ.

ಶತಾವರಿಯು ಮನುಷ್ಯನ ಅನೇಕ ರೋಗಗಳನ್ನು ಗುಣಪಡಿಸಿ ನಿರೋಗಿಯುತ ಶರೀರವನ್ನಾಗಿ ರೂಪಿಸಿ, ಮನುಷ್ಯ ಪ್ರಕೃತಿಯನ್ನು ಸ್ವಾಸ್ಥ್ಯದಿಂದಿಡಲು ಬಹುಮುಖ್ಯ ಪಾತ್ರ ವಹಿಸುತ್ತದೆ. ಧಾತು ಪುಷ್ಟಿಯಲ್ಲಂತೂ ಇದು ಅದ್ವಿತೀಯವಾದ ಔಷಧಿ. ಆಯುರ್ವೇದಕಾರರು ಇದನ್ನು ಕೆಳಗಿನಂತೆ ವರ್ಣಿಸಿದ್ದಾರೆ:

''ಶತಾವರಿಯು ಗುರು, ಶೀತಲ, ಕಹಿ, ಮಧುರ, ರಸಾಯನ, ಮೇಧಕಾರಕ, ಜಠರಾಗ್ನಿವರ್ಧಕ, ಪುಷ್ಟಿದಾಯಕ, ಸ್ನಿಗ್ಧ, ನೇತ್ರಗಳಿಗೆ ಹಿತಕಾರಿ. ಗುಲ್ಮ, ಅತಿಸಾರ ಇವುಗಳನ್ನು ನಿವಾರಣೆ ಮಾಡುವುದು. ಶುಕ್ರ (ವೀರ್ಯ) ಜನಕ, ಸ್ತನಗಳಲ್ಲಿ ಸ್ತನ್ಯವೃದ್ಧಿ ಮಾಡುವುದು. ಬಲಕಾರಿಯಾಗಿ ವಾತ, ರಕ್ತಪಿತ್ತ, ಶೋಭೆ ಮುಂತಾದವುಗಳನ್ನು ನಾಶಗೊಳಿಸುವುದು. ಹೆತ್ತತಾಯಂದಿರ ಎದೆ ಹಾಲನ್ನು ಶುದ್ಧೀಕರಿಸುವಲ್ಲಿಯೂ ಇದು ಸಹಾಯಕ.

*ಡಾ|| ಅಶೋಕ ಆಯ್. ಕಲಾಲ, ಅಗಸ್ತ್ಯ ಆಯುರ್ವೇದ ಚಿಕಿತ್ಸಾಲಯ, ನವೀ ಪೇಟೆ. ರಾಮದುರ್ಗ-೫೯೧ ೧೨೩*

# ಮಹಾದೇವಿಯಕ್ಕನೂ ಸ್ತ್ರೀವಾದವೂ

ಮಹಾದೇವಿಯಕ್ಕ ಕನ್ನಡ ಸಂಸ್ಕೃತಿಯ ಹೆಮ್ಮೆಯೆಂದು ಪರಿಭಾವಿಸುವುದಕ್ಕೆ ನೂರೆಂಟು ಕಾರಣಗಳಿವೆ. ಅಕ್ಕನಂಥ ಉಜ್ವಲ ವ್ಯಕ್ತಿತ್ವ ಕನ್ನಡ ನಾಡಿಗೆ ಮೊದಲು ಮಾತ್ರವಲ್ಲ, ಅನನ್ಯವಾದುದು ಕೂಡಾ. ಅಕ್ಕ ಕನ್ನಡ ಸಾಹಿತ್ಯದ ಪ್ರಥಮ ಕವಯತ್ರಿಯಾಗಿರುವಂತೆಯೇ ಕನ್ನಡ ನಾಡಿನ ಮೊದಲ ಸ್ತ್ರೀವಾದಿಯೂ ಆಗಿದ್ದಳೆಂದು ಹೇಳುವುದು ಹೊಸ ವಿಚಾರವಾದರೂ, ಇದರಲ್ಲಿ ಉತ್ಪ್ರೇಕ್ಷೆಯಾಗಲೀ, ಅತಿಶಯೋಕ್ತಿಯಾಗಲೀ ಇಲ್ಲವೇ ಇಲ್ಲ.

ಸ್ತ್ರೀವಾದವೆಂದರೆ ಸ್ತ್ರೀಯರ ಕುರಿತಾಗಿ ಸ್ತ್ರೀತ್ವದ ಒಳ ತೋಟಿಯಿಂದ ಬಂದ ಮಾತು; ಸ್ತ್ರೀ ಕಾರಣವಾಗಿಯೇ ಅನುಭವಿಸಿದ ನೋವು, ತಲ್ಲಣ, ಅಪಮಾನ, ಹತಾಶೆಗಳ ವಾಸನೆಯಿಂದ ನುಡಿದದ್ದು; ಸ್ತ್ರೀಪರವಾಗಿ ಸ್ತ್ರೀಯರೇ ಎತ್ತಿದ ಧ್ವನಿ. ಸ್ತ್ರೀ ಪರವಾದ ಮಾತುಗಳನ್ನು ವಚನಕಾರರೆಲ್ಲರೂ ಆಡಿದ್ದಾರೆಂಬುದು ನಿಜವಾದರೂ, ಅದೇ ಮಾತುಗಳನ್ನು ಸ್ತ್ರೀಯಾದವಳೇ ಆಡಿದ್ದರೆ ಇನ್ನೂ ಹೆಚ್ಚಿನ ಜೀವಂತಿಕೆ ಪ್ರಾಪ್ತವಾಗುತ್ತಿತ್ತು ಎನ್ನುವುದರಲ್ಲಿ ಎರಡು ಮಾತಿಲ್ಲ.

'ಮಾಯೆ' ಕುರಿತು ಭಾರತೀಯ ತತ್ವಜ್ಞಾನಿಗಳು ರಾಶಿಗಟ್ಲೆ ಪುಸ್ತಕಗಳನ್ನು ಬರೆದಿದ್ದಾರೆ; ಅವರೆಲ್ಲರೂ ತಮ್ಮ ಮೂಗಿನ ನೇರಕ್ಕೇ ನೋಡಿದ್ದರಿಂದ ಮಾಯೆಯ ಪರಿಕಲ್ಪನೆಯನ್ನು ತಪ್ಪಾಗಿ ವ್ಯಾಖ್ಯಾನಿಸಿದ್ದಾರೆಂದು ತೋರುತ್ತದೆ. ಸನಾತನವಾದಿಗಳು ಹೆಣ್ಣನ್ನು ಮಾತ್ರ ಮಾಯೆಯೆಂದು ಜರೆದರೇ ವಿನಃ ಗಂಡನ್ನಾಗಲೀ, ಗಂಡಿನ ಪ್ರಲೋಭನೆಯನ್ನಾಗಲೀ ದೂರಲೇ ಇಲ್ಲ. ಯಾಕೆ ಹೀಗಾಯಿತು ? ಕಾರಣವಿಷ್ಟೆ: ಅವರೆಲ್ಲ ಪುರುಷಪ್ರಧಾನ ಸಂಸ್ಕೃತಿಯ ಪಿಂಡಗಳು; ಮತ್ತು ಪುರುಷತನದ ಕಣ್ಣಿನಿಂದಲೇ ನೋಡಿದವರು. ಹೀಗಾಗಿ ಅವರ ದೃಷ್ಟಿಯಲ್ಲಿ ಹೆಣ್ಣು ಮಾತ್ರ ಮಾಯೆಯಾದಳು.

ಶರಣರು ತುಂಬಾ ವಿಶಿಷ್ಟ ಗೌರವಕ್ಕೆ ಪಾತ್ರರಾಗುವುದೇ ಮಾಯೆಯನ್ನು ವಿಭಿನ್ನವಾಗಿ, ಆದರೆ, ವಾಸ್ತವಿಕ ನೆಲೆಯಲ್ಲಿ ವ್ಯಾಖ್ಯಾನಿಸಿದ್ದರಿಂದ. ಅಂತೆಯೇ ಅಲ್ಲಮಪ್ರಭುಗಳು 'ಹೆಣ್ಣು, ಮಣ್ಣು, ಹೊನ್ನು ಇದ್ಯಾವುದು ಮಾಯೆಯಲ್ಲ, ಮನದ ಮುಂದಣ ಆಸೆಯೇ ಮಾಯೆ' ಎಂದು ಹೇಳುವ ಮೂಲಕ ಭಾರತೀಯ ತತ್ವಜ್ಞಾನಿಗಳಿಗೆ ಸವಾಲಾದರು. ಅಕ್ಕನ ಆಲೋಚನೆಯೂ ಇದೇ ಆಗಿದ್ದರೂ, ಓರ್ವ ಹೆಣ್ಣಾಗಿ ಆಕೆ 'ಮಾಯೆ'ಯ ಪರಿಕಲ್ಪನೆಯನ್ನು ವ್ಯಾಖ್ಯಾನಿಸಿದ್ದಕ್ಕೆ ವಿಶಿಷ್ಟ ಅರ್ಥವೂ ಔಚಿತ್ಯವೂ ಇದೆಯೆಂದೆನಿಸುತ್ತದೆ.

*ಪುರುಷನ ಮುಂದೆ ಮಾಯೆ*
*ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು*
*ಸ್ತ್ರೀಯ ಮುಂದೆ ಮಾಯೆ*
*ಪುರುಷನೆಂಬ ಅಭಿಮಾನವಾಗಿ ಕಾಡುವುದು*

*(ಅ. ಮ. ವ. ಸಂ. ೨೨೦)*

*ಹೆಣ್ಣಿಗೆ ಗಂಡು ಮಾಯೆ*
*ಗಂಡಿಗೆ ಹೆಣ್ಣು ಮಾಯೆ*

*(ಅ. ಮ. ವ. ಸಂ. ೨೨೭)*

ಮಹಾದೇವಿಯಕ್ಕನ ಈ ನುಡಿಗಳು ಸ್ತ್ರೀವಾದ ಸಂಬಂಧಿ ರಚನೆಗಳೇ ಆಗಿವೆ. ಹೆಣ್ಣೂ ಗಂಡಿನಂತೆಯೇ ಮಾಯೆಯಲ್ಲ ಎಂಬುದನ್ನು ಅಕ್ಕ ಅತ್ಯಂತ ತರ್ಕಬದ್ಧವಾಗಿ ರುಜುವಾತುಪಡಿಸಿದ್ದಾಳೆ. ಅಕ್ಕನದು ಗೊಡ್ಡುವಾದವಲ್ಲ; ಅರ್ಥಪೂರ್ಣ ವಿವೇಚನೆ ಉಳ್ಳದ್ದಾಗಿದೆ. ಇದಕ್ಕೆ ಈ ಮೇಲಿನ ವಚನಗಳೇ ದಿವ್ಯಸಾಕ್ಷಿ.

ಯಾವುದನ್ನೇ ಆಗಲಿ ವ್ಯಕ್ತಿ 'ಮಾನಸಿಕ ದೂರ'ದ ಪರಿಕಲ್ಪನೆಯಿಂದ ನೋಡದೆ ಇದ್ದರೆ ಆಗುವುದೇ ಹೀಗೆ.

**ಬಿ. ಶರಣಪ್ಪ ಸತ್ಯಂಪೇಟೆ**

'ಕಾಮಾಲೆ ಕಣ್ಣು' ವಸ್ತುವಿನ ನಿಜ ಸ್ವರೂಪವನ್ನು ಯಾವತ್ತೂ ತೆರೆದಿಡಲಾರದು. ಮಾಯೆಯ ವ್ಯಾಖ್ಯಾನವೂ ಇಂಥ ದೃಷ್ಟಿಯುಳ್ಳವರಿಂದಲೇ ಆಗಿರುವುದು. ಹೆಣ್ಣನ್ನು ಕಂಡಾಗ ಗಂಡಿನ ಮನೋಚಿತ್ತ ಚಂಚಲತೆಗೀಡಾಗುವುದು ಸಹಜವೂ ವಾಸ್ತವವೂ ಹೌದಾದರೂ ಅದೇ ಸಂದರ್ಭದಲ್ಲಿ ಗಂಡನ್ನು ಕಂಡಾಗ ಹೆಣ್ಣೂ ಚಿತ್ತ ಚಾಂಚಲ್ಯಕ್ಕೀಡಾಗುವುದು ಅಸಹಜವೇನಲ್ಲ.

ಕಠೋರ ಸತ್ಯ ಏನೆಂದರೆ, ಭಾರತೀಯ ಪರಂಪರೆ ಹೆಣ್ಣಿಗೆ ವಿಧಿಸಿದ ದಿಗ್ಬಂಧನಗಳು ಕಾರಣವಾಗಿ ಅನೇಕ ವೇಳೆ ಹೆಣ್ಣು ಗಂಡನ್ನೇ ನೋಡುವುದು ಅಕ್ಷಮ್ಯ ಅಪರಾಧವೆನಿಸಿರುವುದರಿಂದ, ಹೆಣ್ಣು ಚಿತ್ತ ಚಾಂಚಲ್ಯಕ್ಕೀಡಾಗುವ ಸಂದರ್ಭಗಳು ತೀರಾ ವಿರಳ. ಸುಗ್ರಾಸ ಭೋಜನ ಬಾರದು. ಹಾಗೆಯೇ ಹೆಣ್ಣಿಗೆ ಗಂಡಿನ ವಾಸನೆ ತಟ್ಟದಂತೆ ಇಟ್ಟಿರುವುದೇ ಅದನ್ನು ಅಪೇಕ್ಷಿಸದಿರುವುದಕ್ಕೆ ಕಾರಣವಿರಬಹುದು. ಹಾಗಂತ ಹೆಣ್ಣಿಗೆ ಅಂಥ ಆಸೆ-ಆಮಿಷಗಳೇ ಇಲ್ಲವೆನ್ನುವುದು ಶುದ್ಧ ಪ್ರಮಾದ. ಹೆಣ್ಣು - ಗಂಡುಗಳಲ್ಲಿ ಈ ತೆರನಾದ ಆಸೆಯ ಸ್ವರೂಪ ಸಮಾನವೇ ಆಗಿರುತ್ತದೆ; ಪ್ರಮಾಣದಲ್ಲಿ ಸ್ವಲ್ಪ ಹೆಚ್ಚು-ಕಮ್ಮಿ ಇರಬಹುದು ಅಷ್ಟೇ.

ಅಂತೆಯೇ ಗಂಡಿಗೆ ಹೆಣ್ಣು ಮಾಯೆಯಾಗಿ ಗೋಚರವಾದರೆ ಹೆಣ್ಣಿಗೆ ಗಂಡು ಮಾಯೆಯಾಗಿ ಕಾಣುತ್ತಾಳೆನ್ನುವುದನ್ನು ಶರಣರು ಪ್ರತಿಪಾದಿಸಿರುವುದು ತೀರಾ ವಾಸ್ತವವೂ ಔಚಿತ್ಯಪೂರ್ಣವೂ ಆಗಿದೆ. ನನ್ನ ಅಭಿಮತದ ಪ್ರಕಾರ ಹೆಣ್ಣು ಮಾತ್ರವೇ 'ಮಾಯೆ' ಎನ್ನುವುದು ಪುರುಷನ ಬೌದ್ಧಿಕ ದಬ್ಬಾಳಿಕೆ. ತನಗಿರುವ

೫೦ನೇ ಪುಟಕ್ಕೆ

# ಕಾಂಟೆಸಾದಲ್ಲಿ ಕಾವ್ಯ ಶ್ರಮ ಸಂಸ್ಕೃತಿಯ ಕಂಪು



**ಪ್ರೊ॥** ಬರಗೂರು ರಾಮಚಂದ್ರಪ್ಪ ಅವರದು ಬಹು ಮುಖ ಪ್ರತಿಭೆ. ಅವರ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಕಾವ್ಯವೂ ಒಂದು. 'ಕಾಂಟೆಸಾದಲ್ಲಿ ಕಾವ್ಯ' ಅವರು ಇಲ್ಲಿಯವರೆಗೆ ಬರೆದ ಕವಿತೆಗಳ ಒಟ್ಟು ಸಂಕಲನ. ಸಾಮಾಜಿಕ, ರಾಜಕೀಯ, ಆರ್ಥಿಕ ಹೀಗೆ ಒಟ್ಟಾಗಿ ನಮ್ಮ ಸಮುದಾಯದ ಸಾಂಸ್ಕೃತಿಕ ಬದುಕನ್ನು ಅನಾವರಣ ಗೊಳಿಸಿರುವ ಜನಪರ ಆಶಯವನ್ನು ಹೊತ್ತ ಕವಿತೆಗಳು ಇಲ್ಲಿವೆ. ಉಸಿರು ಕಳೆದುಕೊಂಡ, ಶ್ರಮ ಸಂಸ್ಕೃತಿಯ, ಶೋಷಿತ ಜಗತ್ತನ್ನು ಜೀವಂತಗೊಳಿಸುವ ಕೆಲಸವನ್ನು ಕವಿ ಇಲ್ಲಿ ಮಾಡಿದ್ದಾರೆ. ಭಾವೋತ್ಕಟತೆಯ ನಡುವೆಯೂ ಬರಗೂರರ ಕಾವ್ಯ ಕಲಾತ್ಮಕತೆಯನ್ನು ಉಳಿಸಿಕೊಂಡು ನಡೆದಿದೆ. ಹೀಗಾಗಿ ಬಂಡಾಯ ಕಾಲದ ಶ್ರೇಷ್ಠ ಪದ್ಯ ಗಳನ್ನು ನಾವಿಲ್ಲಿ ಕಾಣಬಹುದು. ಬದುಕು ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳಬೇಕಾದ ರೀತಿಯನ್ನು ಕವಿ ಇಲ್ಲಿ ಎತ್ತಿ ಹಿಡಿದಿರುವುದು ಗಮನಾರ್ಹ ಅಂಶ. ಮನುಷ್ಯನ ಮೂಲಕವೇ ಬದುಕನ್ನು ನೋಡುವ, ಆರೋಗ್ಯಕರವಾದ ಬದುಕಿಗಾಗಿ ಪರಿತಪಿಸುವ, ಕವಿತೆಗಳು ಇಲ್ಲಿ ಹೃದ್ಯವಾಗಿ ಪಡಿಮೂಡಿವೆ.

ಇಲ್ಲಿ ಮುಖ್ಯವಾಗಿ ನಮಗೆ ಕಂಡುಬರುವುದು ನಮ್ಮ ಸುತ್ತಲಿನ ಬದುಕನ್ನೇ ಕವಿ ಸೃಜನಶೀಲ ಶೋಧನೆಗೆ ಗುರಿಮಾಡಿರುವುದು. ಶ್ರಮ ಸಂಸ್ಕೃತಿಯ ಆಶಯಗಳನ್ನು ಕಟ್ಟಿಕೊಡುವಲ್ಲಿ ಇಲ್ಲಿನ ಕವಿತೆಗಳು ಸಫಲವಾಗಿವೆ. ಮನುಷ್ಯನೇ ಇಲ್ಲಿಯ ಕವಿತೆಗಳ ಕೇಂದ್ರ ಬಿಂದುವಿನಲ್ಲಿದ್ದಾನೆ. ಮನುಷ್ಯನನ್ನು ಮನುಷ್ಯನನ್ನಾಗಿ ನೋಡಬೇಕಾದ ಅವಶ್ಯಕತೆಯನ್ನು ಕವಿ ಇಲ್ಲಿ ಒತ್ತಿ ಹೇಳಿದ್ದಾರೆ. ಶ್ರಮಜೀವಿಗಳು, ಕೂಲಿಕಾರ್ಮಿಕರು, ಸಾಮಾನ್ಯ ಜನರ ಬಗೆಗೆ ಕವಿಗೆ ವಿಶೇಷ ಆಸ್ಥೆ. ಹಾಗೆಯೇ ದುಡಿಮೆ, ಋಣ, ಕೃತಜ್ಞತೆಯನ್ನು ಹೊದ್ದುಕೊಂಡು ಓಡಾಡುವವರ ಬಗೆಗೆ ಕವಿಗೆ ಅಪಾರ ಗೌರವ. ನಿಜವಾದ ಮಾನವೀಯ ಆವರಣವನ್ನು ಇವರು ಸೃಷ್ಟಿಸುವುದರಿಂದಲೇ ಸುತ್ತಲಿನ ಬದುಕು ಸಹ್ಯವಾಗುತ್ತದೆ ಎಂಬ ದೃಢ ನಿಲುವು ಕವಿಗಿದೆ. ಇದನ್ನೇ ಪ್ರೊ॥ ಬರಗೂರರು ಮುನ್ನುಡಿಯಲ್ಲಿ ''ಅಂತರಂಗ ಮತ್ತು ಬಹಿರಂಗಗಳೊಂದಾಗಿ ಅನುಭವ ಗಮ್ಯವಾಗುವ 'ಆತ್ಮ' ಮನುಷ್ಯ ರೂಪಿಗಳನ್ನು ನಿಜ ಮನುಷ್ಯರನ್ನಾಗಿಸುವ ಹುಡುಕಾಟದ ಕೇಂದ್ರಶಕ್ತಿಯಾಗಬೇಕು. ಇಂಥ ಹುಡುಕಾಟದ ಸಂಕಟ ನನ್ನ ಅನೇಕ ಕವಿತೆಗಳ ಸಾಮಾಜಿಕ ಆಕೃತಿಯಾಗಿದೆ'' ಎಂದು ಹೇಳಿಕೊಂಡಿದ್ದಾರೆ. ಈ ಆಶಯ ಪ್ರಸ್ತುತ ಕೃತಿಯ ಉದ್ದಕ್ಕೂ ಒಳ ವಿದ್ಯುತ್‌ನಂತೆ ಹರಿದುಬಂದಿದೆ.

'ಕಾಂಟೆಸಾದಲ್ಲಿ ಕಾವ್ಯ' ಈ ಸಂಕಲನದ ಮೊದಲ ಕವಿತೆ. ಇದೊಂದು ಗಮನಾರ್ಹ ಪದ್ಯ. ಇದೊಂದು ಪ್ರತೀಕವಾಗಿಯೂ ಕಾಣಿಸಿಕೊಂಡಿದೆ. ಕಾಂಟೆಸಾ ಚಲನಶೀಲ ತತ್ವದ ಪ್ರತೀಕ. ಒಳಗಿರುವ ಮನುಷ್ಯ ಜಡವಾಗುವಂತಿಲ್ಲ. ಆತ ಕುಬ್ಜನಾದರೆ ಎಲ್ಲವೂ ಸ್ಥಗಿತ. ಆಗ ಭವ್ಯತೆಯೊಂದೇ ಉಳಿದುಬಿಡುವ ಅಪಾಯವಿದೆ. ಹೀಗಾಗಿ ಕವಿ,



*ಪುಟ : XII + ೧೬೪ ಬೆಲೆ : ರೂ. ೬೦*
*ಅಂಕಿತ ಪುಸ್ತಕ, ಬೆಂಗಳೂರು-೫೬೦ ೦೦೪*

*ಕಾಂಟೆಸಾದಲ್ಲಿ ಕೂತಾಗ ಕಾವ್ಯವಾಗದಿದ್ದರೆ*
*ಕುಂಟುನೆಪದ ಭವ್ಯತೆಯಲ್ಲಿ ಬತ್ತಿ ಹೋಗುತ್ತೇನೆ.*
*ಉರುಳುವ ಚಕ್ರದಲ್ಲಿ ನರಳುವ ಕರುಳು –*
*ಕಾರಿರುಳ ಕಾರಲ್ಲಿ ಕಾಲಿಡುತ್ತಾನೆ ಕೌರವ;*
*ವಂದಿ ಮಾಗಧರು ನಂದಿ ಹೋದ ಹಾದಿಯಲ್ಲಿ*
*ಬರಿತಲೆಯ ಬರಿಗಾಲ ನಿಜ ಮಾನವ !*

ಎಂಬ ಎಚ್ಚರಿಕೆಯ ಮಾತಿನ ಜೊತೆಗೆ ವಾಸ್ತವದಲ್ಲಿ ಏನಾಗಬೇಕೆಂಬುದನ್ನು ಸೂಚಿಸಿದ್ದಾರೆ.

*ಕಾವ್ಯ ತುಂಬಿಕೊಳ್ಳಬೇಕು ಕಾಂಟೆಸಾದ ಒಳಗೆ*
*ನೆನಪಾಗುತ್ತಲೇ ಇರಬೇಕು ಬರಿಗಾಲ ನಡಿಗೆ.*

ಎಲ್ಲೇ ಇದ್ದರೂ ನೆಲದ ಮೇಲಿರಬೇಕೆಂಬುದನ್ನು ಕವಿ ಎತ್ತಿ ಹಿಡಿದಿದ್ದಾರೆ. ಜೀವನಮುಖಿಯಾದ ದರ್ಶನವಿಲ್ಲಿ ಚೆನ್ನಾಗಿ ಅಭಿವ್ಯಕ್ತಗೊಂಡಿದೆ. ಸಮಕಾಲೀನ ಅನುಭವ ಕ್ರೋಢೀಕರಣಗೊಂಡ ಪ್ರಗತಿಪರ ಧೋರಣೆ ಈ ಕವಿತೆಯ ಗುಣವಿಶೇಷ.

ಇತಿಹಾಸದ ವೈಭವೀಕರಣಕ್ಕೆ ಕವಿ ಎಂದೂ ಮುಂದಾಗದೇ ಜನಸಮುದಾಯದ ಶ್ರಮ, ದುಡಿಮೆಯ ಇತಿಹಾಸವನ್ನು ತೆರೆದ ಕಣ್ಣಿಂದ ನೋಡಿದ್ದಾರೆ. *ಯಾರು ಕಟ್ಟಿದರೊ ಈ ಭವ್ಯ ದೇಗುಲ / ಕೋಟಿ ಜನ ಹೊಗಳುವ ಈ ಕೋಟೆ ಕೊತ್ತಲ ? ಕಟ್ಟಿಸಿದಾತನು ಪಟ್ಟದ ಮೇಲೆ / ಅಟ್ಟಹಾಸದಲಿ ಹೆಸರಾದ / ಕಟ್ಟಿದ ಸಾವಿರ ಜನಗಳ ದುಡಿಮೆಗೆ / ಕೂಲಿ ಕೊಟ್ಟವನು ದಣಿಯಾದ /* ಎಂಬಲ್ಲಿ ಕಟ್ಟಿದವರ, ದುಡಿಮೆಗಾರರ ಸಾಧನೆ ಸಣ್ಣ ಪ್ರಮಾಣದಲ್ಲಿ ಅಲ್ಲಿ ಬೆವರಿನ ಹೊಳೆ ಹರಿದಿದೆ ಎಂಬುದನ್ನು ನೆನಪಿಸಿಕೊಡುತ್ತಾರೆ. ಹೀಗಾಗಿ ಕವಿ *'ಅರಳದ ಮೊಗ್ಗು ಮೊಳೆಯದ ಬೀಜ / ನೋವಿನ ನಿಜ ಇತಿಹಾಸ'* ಎಂದು ಭೂತದ ವೈಭವೀಕರಣವನ್ನು ಖಂಡಿಸುತ್ತಾ ಭಿನ್ನವಾಗಿ ಅರ್ಥೈಸಿದ್ದಾರೆ.

**ಡಾ॥ ಜಿ. ಎನ್. ಉಪಾಧ್ಯ**

ಇದೇ ಆಶಯ ದುಡಿಮೆಗಾರರು, ಕಲಾವಿದರ ಹಾಡು, ಚರಿತ್ರೆ, ಇತಿಹಾಸ, ಶ್ರಮಜೀವಿಗಳ ಹಾಡು – ಮೊದಲಾದ ಕವಿತೆಗಳಲ್ಲಿ ಸಶಕ್ತವಾಗಿ ಮೂಡಿಬಂದಿದೆ. ಯಾರೂ ಆಯದ ಮುಟ್ಟದ ವಸ್ತುಗಳನ್ನು ಕವಿ ಇಲ್ಲಿ ಕಾವ್ಯದೊಳಗೆ ತಂದಿದ್ದಾರೆ. ಉದಾಹರಣೆಗೆ ಜಾಲೀ ಮರದ ಹಾಡು. ತೆಂಗು ಕಂಗಿನ ಜೊತೆಗೆ ಕಂಗಾಲಾಗಿರುವ ಜಾಲೀಮರದ ಮಹತ್ವವನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾರೆ. ಹೊಲದ ಕಾವಲು, ಬೇಲಿಯ ಭಟ ಎಂದು ಕವಿ ಕಡೆಗಣಿಸಲ್ಪಟ್ಟ ಮರವನ್ನು ಸಾಂಕೇತಿಕವಾಗಿ ಬಣ್ಣಿಸಿದ್ದಾರೆ.

ಇಲ್ಲಿನ ಬಹುತೇಕ ಕವಿತೆಗಳಲ್ಲಿ ಸಾವು, ನೋವು, ಸಂಕಟ, ತಳಮಳ, ಅಳು, ಅಸಹಾಯಕತೆ, ಉರಿ, ಬೇಸರ, ಬಡತನ ಹೀಗೆ ಸಾಮಾಜಿಕವಾಗಿ ಆರ್ಥಿಕವಾಗಿ ತುಳಿತಕ್ಕೆ ಒಳಗಾದವರ ಬದುಕನ್ನೇ ಕವಿ ಇಲ್ಲಿ ಚಿತ್ರಿಸಿದ್ದಾರೆ. ನಮ್ಮ ವರ್ತಮಾನದ ಬದುಕಿನ ವಿಪರ್ಯಾಸ ವೈರುಧ್ಯಗಳನ್ನು ಕವಿ ಮುಲಾಜಿಲ್ಲದೆ ತೆರೆದಿಟ್ಟಿದ್ದಾರೆ. ಶ್ರಮವೇ ಈ ಸಂಸ್ಕೃತಿಯ ತಾಯಿ ಬೇರು. ಅದನ್ನೇ ಚರಿತ್ರೆ ತೂರಿ ಬಿಟ್ಟಿದೆ ಎಂಬ ಆಕ್ರೋಶ, ಬೇಸರ, ಸಿಟ್ಟು ಇಲ್ಲಿ ವ್ಯಕ್ತವಾಗಿದೆ. ''ಬೆವರು ಮನುಷ್ಯ ಸಮಾಜದ ಮೂಲ. ಕತ್ತಲಿನಿಂದ ಬೆಳಕಿಗೆ, ಬೆಳಕಿನಿಂದ ಕತ್ತಲಿಗೆ ಸೇತುವೆ ಕಟ್ಟುತ್ತಾ ಬಂದ ಬೆವರು ನಮ್ಮ ನಡುವಿನ ಒಂದು ಚಾರಿತ್ರಿಕ ಪ್ರಕ್ರಿಯೆ. ಹಗಲಿರುಳೆನ್ನದೆ ನಿರಂತರ ಕ್ರಿಯಾಶೀಲತೆಯಲ್ಲಿ ಮಗ್ನವಾದ ಈ ಬೆವರು ಬೆಟ್ಟ ಗುಡ್ಡಗಳಲ್ಲಿ ಬದುಕನ್ನು ಹುಡುಕಿದೆ. ತನ್ನ ತೊಡಗುವಿಕೆಯ ಮೂಲಕ ಬುದ್ಧಿಭಾವಗಳನ್ನು ಒಳಗೊಳ್ಳುತ್ತಾ ಸೃಜನಶೀಲ ನೆಲೆಗಳನ್ನು ನಿರ್ಮಾಣ ಮಾಡುತ್ತಾ ಬಂದಿದೆ. ಒಟ್ಟಾರೆ ಇದೊಂದು ಮನುಷ್ಯ ಚರಿತ್ರೆ. ಎಂದೂ ಬತ್ತದ ಅಕ್ಷಯಪಾತ್ರೆ. ಇದೇ ನನ್ನ ಭೂಮಿತತ್ವ'' ಎಂದು ಬರಗೂರು ಅವರೇ ಒಂದು ಕಡೆ ಹೇಳಿದ್ದುಂಟು. ಅದರ ಸಮಗ್ರ ದರ್ಶನ ಇಲ್ಲಿ ನಮಗಾಗುತ್ತದೆ.

ತೀವ್ರವಾದ ಸಾಮಾಜಿಕ ಕಳಕಳಿಯೇ ಇಲ್ಲಿ ಕಾವ್ಯವಾಗಿ ಮೈತಾಳಿದೆ. ಬರಗೂರು ಅವರು ಮಾನವತಾವಾದಿ. ಮಾನವೀಯತೆಯೇ ಈ ಕೃತಿಯ ಮೂಲಸೆಲೆ. ಬಂಡಾಯವೆಂದರೆ ಬರೀ ಹೋರಾಟವಷ್ಟೇ ಅಲ್ಲ, ಅದರಾಚೆಗೂ ಇನ್ನೂ ದನಿ ಪಡೆಯದ ಅದೆಷ್ಟೋ ಭಾವಗಳಿವೆ ಎಂಬ ಅರಿವು ಕವಿಗಿದೆ. ಕವಿ ಭಾವಜೀವಿಯಾದರೂ ನೋವನ್ನು ಮರೆತಿಲ್ಲ – ಎಂಬುದಕ್ಕೆ ನಿಸರ್ಗ ಕವಿತೆಯೇ ನಿದರ್ಶನ. *ನಿಸರ್ಗವೆಂದರೆ ನನಗೆ ತುಂಬಾ ಇಷ್ಟ / ಆದರೆ ನಾನು ಹಿಗ್ಗುತ್ತಿಲ್ಲ / ಮೊಗ್ಗು ಮೌನಕ್ಕೆ, ಮಾತು ಹೂವಿಗೆ / ಹಸಿರು ಹೃದಯಕ್ಕೆ ಸೂರ್ಯ ಉದಯಕ್ಕೆ / ನಾನು ಆತಂಕಿಸುತ್ತೇನೆ / ಹಸಿರು ಮುತ್ತೈದೆ ಮರ ನೋಡುತ್ತ / ವಿಧವೆ ಬೋಳು ಮರ ನೆನೆದು* ಮಾವು ಮಾವಾಗಿ ಬೇವು ಬೇವಾಗಿ ಹಸಿರು ಹಸಿರಾಗಿ ಕಾಣುವ ಸಹಜ ಸಾಚಾತನ ಪ್ರಕೃತಿಯಲ್ಲಿ ಎಲ್ಲಿದೆ

ಕಂಡುಬಂದರೂ ಅದು ಮನುಷ್ಯ ಲೋಕದಲ್ಲಿ ಇಲ್ಲವಾಗಿದೆ. ಇಲ್ಲಿಲ್ಲ ಮುಖವಾಡದ ಬದುಕು; ಬದುಕುವುದಕ್ಕೆ ಸಂಘರ್ಷ ನಡೆಸಬೇಕಾಗಿ ಬಂದಿರುವುದರ ಬಗೆಗೆ ಕವಿಗೆ ತೀವ್ರ ಬೇಸರ. ಇದೇ ಭಾವ 'ನವಿಲು ಗದ್ದೆ' ಪದ್ಯದಲ್ಲಿ ಸೊಗಸಾಗಿ ಚಿತ್ರಣಗೊಂಡಿದೆ.

*ಬನ್ನಿ ಗೆಳೆಯರೆ ಕತ್ತಲಲ್ಲೇ ಬೆಳೆಯೋಣ*
*ನಮ್ಮ ನಮ್ಮ ಮನಸುಗಳನ್ನು*
*ನಮ್ಮ ನಮ್ಮ ಕನಸುಗಳನ್ನು*
*ಗಾಯಗೊಂಡ ಹೂವುಗಳನ್ನು*
*ಸಾಯಗೊಡದ ನೋವುಗಳನ್ನು*
*ಬೆಳೆಯೋಣ, ಬೆಳೆಯುತ್ತ ಬೆಳೆಯುತ್ತ*
*ಬೆಳಕಾಗೋಣ–*
*ನವಿಲು ಗದ್ದೆಯ ಗರಿಯಾಗೋಣ*

ಭೂತದ ಬಗೆಗಿನ ಸಿಟ್ಟು, ಭವಿಷ್ಯದ ಬಗೆಗಿನ ಆಶಾವಾದವೇ ಇಲ್ಲಿ ಆಕೃತಿಯಾಗಿವೆ. *ಪುರಾಣಕ್ಕೆ ಮಾಡಿದ ಕಸಿ ಇತಿಹಾಸವಾಗಿ ! ಸಮಕಾಲೀನದಲ್ಲೂ ಬುದ್ಧಿಬಲದ ಅಟ್ಟಹಾಸ ! ಯಾರದೋ ಬಿಲ್ಲು ಯಾರದೋ ಬಾಣ ! ಮಾರಾಟಕ್ಕಿದೆ ಬೆವರಿನ ಪ್ರಾಣ !* ಇಲ್ಲೆಲ್ಲ ಕವಿ ಜನವಿರೋಧಿ ಮೌಲ್ಯಗಳ ವಿರುದ್ಧ ದನಿಯೆತ್ತಿ ಪ್ರತಿಭಟಿಸಿದ್ದಾರೆ.

ಹೊಸ ಹೊಸ ರೂಪಕಗಳು ಅಲ್ಲಲ್ಲಿ ನಮಗೆ ಕಾಣಸಿಗುತ್ತವೆ. ಭಾಷೆ ಹಾಗೂ ಪ್ರತಿಮೆಯನ್ನು ಕವಿ ಕ್ರಾಂತಿಕಾರಿಯಾಗಿ ಬಳಸಿಕೊಂಡಿದ್ದಾರೆ. ಬರಗೂರು ಅವರು ನಮ್ಮ ನಡುವಿನ ಪ್ರಮುಖ ಚಿಂತನಶೀಲ ಕವಿಗಳಲ್ಲಿ ಒಬ್ಬರು. ಚಿಕ್ಕ ಚಿಕ್ಕ ಸಾಲುಗಳಲ್ಲಿ ಹಸಿಗೋಡೆಯಲ್ಲಿ ಹರಳು ತೂರಿದಷ್ಟು ಪರಿಣಾಮಕಾರಿಯಾಗಿ ಅವರು ಹೇಳಬಲ್ಲರು. ನಿರಸನಗೊಂಡದ್ದೇ ನಿಜವಾದ ಕವನ, ಒಂದೊಂದು ಅಲೆಯೂ ಮಿಡಿನಾಗರ, ಭೂಮಿಯಲಿ ಎಲ್ಲರೂ ಬೆಂಕಿ ಬೆಳೆದವರು, ಕತ್ತಲ ಮಗ್ಗದಲಿ ಬೆಳಕು ನೇಯ್ದವರು, ನಗುವುದಕೆ ಹಲ್ಲುಗಳಷ್ಟೇ ಸಾಕು ಅಳುವುದಕೆ ಒಳ ಕರುಳು ಬೇಕು, ಪಿಸುಮಾತು ಆಡೋಣ ಬಾ ಕತ್ತಲೆ ಬೆಳಕೆಂಬ ಮಾಯೆ ಬರಿ ಬತ್ತಲೆ, ಸಾಲಸರ್ಪವು ಬಂದು ಸಂಸಾರ ಸೇರಿತು ಚಿತ್ತ ಚಿತ್ತವನೆಲ್ಲ ಹುತ್ತವ ಮಾಡಿತು, ಚರಿತ್ರೆಯ ಚಂದಿರ ಕರಗುತ್ತಿದೆ, ಅಳುವಿಲ್ಲದ ನೀವು ಮನುಷ್ಯರೇ ಅಲ್ಲ – ಹೀಗೆ ಗಟ್ಟಿಯಾದ ವೈಚಾರಿಕ ಬದ್ಧತೆಗಳಿಂದ ಇಲ್ಲಿನ ಕವಿತೆಗಳು ನಮ್ಮ ಗಮನ ಸೆಳೆಯುತ್ತವೆ; ಹಾಗೆಯೇ ಇಲ್ಲಿನ ಸಾಲುಗಳು ಆಪ್ತವಾಗಿ ನಮ್ಮೊಂದಿಗೆ ಸಂವಾದಕ್ಕಿಳಿಯುತ್ತವೆ. ಈ ಕವಿತೆಗಳ ಮೂಲಕ ಕವಿ ಅಭಿವ್ಯಕ್ತಿಗೆ ಹೊಸ ಆಯಾಮ ನೀಡಿದ್ದಾರೆ. ಸಾಮಾಜಿಕ ರಾಜಕೀಯ ವ್ಯವಸ್ಥೆಯನ್ನು ವಿಡಂಬಿಸುವ, ನಮ್ಮ ಸಂಸ್ಕೃತಿಯ ಒಳಗೆ ನಿಂತು ಮಾತನಾಡುತ್ತಲೇ ಬದಲಾವಣೆಯನ್ನು ಬಯಸುವ ಆಶಯ ಈ ಸಂಕಲನದ ಕವಿತೆಗಳಲ್ಲಿ ಕಾಣಬಹುದು. ಬಂಡಾಯ ಸಂಘಟನೆಯ ಮುಂಚೂಣಿಯಲ್ಲಿರುವ ಪ್ರೊ|| ಬರಗೂರು ಅವರ ಸಮಗ್ರ ಕವಿತೆಗಳು ಒಂದೆಡೆ ಈ ಮೂಲಕ ಸಿಗುವಂತಾದುದು ಸಂತೋಷದ ಸಂಗತಿ. ಈಗ ತುಸು ಹರಿಗಡಿದಿರುವ ಬಂಡಾಯ ಸಾಹಿತ್ಯ ಸಂಘಟನೆಗೆ ಈ ಕೃತಿ ಹೊಸ ಹುರುಪು ನೀಡುವುದರಲ್ಲಿ ಸಂದೇಹವಿಲ್ಲ.

**ಡಾ|| ಜಿ. ಎನ್. ಉಪಾಧ್ಯ**
ಕನ್ನಡ ಪ್ರಾಧ್ಯಾಪಕರು, ಮುಂಬೈ ವಿಶ್ವವಿದ್ಯಾಲಯ
ವಿದ್ಯಾನಗರಿ, ಮುಂಬೈ - ೪೦೦ ೦೯೮

---

*೪೮ ನೇ ಪುಟದಿಂದ*

ಬೌದ್ಧಿಕ ಸ್ವಾತಂತ್ರ್ಯವನ್ನು ಪುರುಷ ದುರುಪಯೋಗ ಪಡಿಸಿಕೊಂಡಿದ್ದಾನೆಂದೇ ನನ್ನ ತರ್ಕ.

ಇಲ್ಲಿಯವರೆಗೆ 'ಮಾಯೆ'ಯ ಪರಿಕಲ್ಪನೆಯನ್ನು ಕೇವಲ ಪುರುಷರೇ ವ್ಯಾಖ್ಯಾನಿಸಿದ್ದರಿಂದ 'ಹೆಣ್ಣು' ಮಾತ್ರ ಮಾಯೆಯಾಗಿ ಕಂಡಳು. ಹೆಣ್ಣು ಗಂಡಿಗೆ ವಿವಿಧ ಪ್ರಲೋಭನೆಗಳನ್ನು ಸೃಷ್ಟಿಸಿದ್ದರಿಂದ ಇವರು ಹೀಗೆ ತರ್ಕಿಸಿರಬಹುದು. ಆದರೆ ಗಂಡೂ ಹೆಣ್ಣಿಗೆ ಇಂಥದ್ದೇ ಪ್ರಲೋಭನೆಗಳನ್ನು ಹುಟ್ಟಿಸಿರಲಿಕ್ಕೂ ಬೇಕು ಎಂದು ಯೋಚಿಸಲಿಕ್ಕೆ ಇವರಿಗೆ ಸಾಧ್ಯವಾಗುವುದಾದರೂ ಹೇಗೆ ? ಹೆಣ್ತನದ ಒಳತೋಟಿಯ ಬೇಗುದಿ ಇವರಿಗೆ ಹೇಗೆ ಅರ್ಥವಾದೀತು? ಅಂತೆಯೇ ಹೆಣ್ತನದ ಕುರಿತು ಹೆಣ್ಣೇ ಮಾತಾಡುವುದು ಮಾತ್ರ ತುಂಬಾ 'ಅಥೆಂಟಿಕ್' ಆಗುತ್ತದೆ.

ಆದ್ದರಿಂದಲೇ ಅಕ್ಕ ಸ್ತ್ರೀ ಸಂಕುಲದ ಏಕಮೇವ ಧ್ವನಿಯಾಗಿ ಹೆಣ್ಣಷ್ಟೇ ಮಾಯೆಯಲ್ಲ, ಗಂಡೂ ಮಾಯೆ ಎಂದು ಹೇಳಿದ್ದು ಸ್ತ್ರೀಪರವಾದ ಮಾತಾಗಿರುವಂತೆಯೇ ಅಲ್ಲಿಯವರೆಗಿನ ಪುರುಷನ ಬೌದ್ಧಿಕ ದಬ್ಬಾಳಿಕೆಗೆ ಸವಾಲೂ ಆಗಿದೆ. ಅನುಭಾವ, ತತ್ವಜ್ಞಾನ ಇತ್ಯಾದಿ ಕೇವಲ ಪುರುಷರಿಗೆ ಮಾತ್ರ ಮೀಸಲು ಎನ್ನುವ ಅಲ್ಲಿಯವರೆಗಿನ ಸ್ಥಾಪಿತ ನಿಲುವನ್ನು ಅಕ್ಕ ಮೊದಲ ಬಾರಿಗೆ ಪ್ರಶ್ನಿಸಿದಳು; ತಾವೂ (ಹೆಣ್ಣು) ಅದಕ್ಕೆ ವಾರಸುದಾರರೆಂಬುದನ್ನು ಸ್ಥಾಪಿಸಿದಳು.

'ಮಾಯೆ'ಯಂಥ ಜಟಿಲವೂ, ಸೂಕ್ಷ್ಮವೂ ಆದ ಪರಿಕಲ್ಪನೆಯನ್ನು ವ್ಯಾಖ್ಯಾನಿಸಿರುವುದು ಸರಳವಾದುದೇನಲ್ಲ; ಮತ್ತು ಆ ಕಾಲದ ವಿಷಮ ಸಾಮಾಜಿಕ ಸಂದರ್ಭವನ್ನು ಗಮನಿಸಿದರೆ ಅಕ್ಕ ಅವತ್ತು ಆಡಿದ ಮಾತಿನ ಧೀಶಕ್ತಿ, ಔಚಿತ್ಯ ಅರ್ಥವಾದೀತು.

ಹೆಣ್ಣು ತನ್ನಷ್ಟಕ್ಕೆ ತಾನೆ ಮಾಯೆಯಾಗದು; ಗಂಡೂ ಅಷ್ಟೇ. ಮುಪ್ಪಾದವನ ಮುಂದೆ ಹೆಣ್ಣು ಏನೆಂದು ಗೋಚರವಾದಾಳು ? ಹಾಗೆಯೇ ಲೈಂಗಿಕತೃಷೆಯೇ ಇಲ್ಲದ ಗಂಡಸಿನ ದೃಷ್ಟಿಯಲ್ಲಿ ಹೆಣ್ಣು ಏನು ? ಏನೂ ಅಲ್ಲ; ಅದೊಂದು ಜೀವಿ ಅಷ್ಟೆ. ಸನಾತನ ಭಾರತೀಯ ತತ್ವಜ್ಞಾನಿಗಳು ವ್ಯಾಖ್ಯಾನಿಸಿರುವಂತೆ – 'ಹೆಣ್ಣು' ನಿಜವಾಗಿಯೂ ಮಾಯೆಯೇ ಆಗಿದ್ದರೆ ಶರಣ ಪರಂಪರೆಯ ಅಲ್ಲಮನಂಥವರೂ ಅಕ್ಕನಂಥ ಚೆಲುವೆಗೆ ಮಾರುಹೋಗಬೇಕಾಗಿತ್ತು. ಅಂತೆಯೇ ಮಾಯೆ ಮಾಡುವ ಗುಣ ಹೆಣ್ಣಿನಲ್ಲೂ ಇಲ್ಲ, ಗಂಡಿನಲ್ಲೂ ಇಲ್ಲ, ಮನದ ಮುಂದೆ ಮಾತ್ರ ಇದೆ. ಇದನ್ನು ಗುರುತಿಸಿದ್ದು ಶರಣರ ಹೆಗ್ಗಳಿಕೆ ಮಾತ್ರವಲ್ಲ, ಭಾರತೀಯ ತತ್ವಜ್ಞಾನಕ್ಕೆ ನೀಡಿದ ವಿಶಿಷ್ಟ ಕೊಡುಗೆಯೂ ಹೌದು.

ಅದಿರಲಿ, ಅಕ್ಕ ಪುರುಷನನ್ನು ಹಾಗೂ ಸ್ತ್ರೀಯರನ್ನು ಪರಸ್ಪರ 'ಮಾಯೆ' ಎಂದು ಕರೆದದ್ದರಲ್ಲಿ ತಥ್ಯವಿದೆಯೇ ? ತುಂಬಾ ಸ್ವಾರಸ್ಯಕರ ಸಂಗತಿಯೂ ಹೌದು. ''ಮಾಯೆ ಎಂದರೆ ಸತ್ಯವಲ್ಲದ, ಆದರೆ ಸತ್ಯದ ಹಾಗೆ ಭಾಸವಾಗುವ ಈ ಜಗತ್ತಿನ ತೋರಿಕೆ ಮತ್ತು ಅನೇಕ ವಿಧವಾದ ಆಸೆ-ಆಮಿಷೆಗಳಿಂದ ಜಗತ್ತಿನೊಂದಿಗೆ ಜೀವವನ್ನು ಬಂಧಿಸುವ ಒಂದು ಅವಿಧೇಯ ಉಪಕರಣ'' ಎಂಬ ಮಾತು ಉಲ್ಲೇಖನೀಯ.

ಮಾಯೆಯ ಕುರಿತಾದ ಈ ವ್ಯಾಖ್ಯಾನವನ್ನು ಗಮನಿಸಿ ಹೇಳುವುದಾದರೆ ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣು ಪರಸ್ಪರ ಮಾಯೆಗಳು. ಆದರೆ ಅಚ್ಚರಿಯ ಸಂಗತಿಯೆಂದರೆ ಅಕ್ಕ ವೀರವಿರಾಗಿಣಿಯಾಗಿಯೂ ಹೆಣ್ಣಿನ ವಯೋಸಹಜ ಬಯಕೆಗಳಿಗೆ ಧ್ವನಿ ನೀಡಿದ್ದು.

ಕಟ್ಟಿಕೊಂಡವಳನ್ನು ವೈರಾಗ್ಯ ಸಾಧನೆಗೋಸ್ಕರ ತೊರೆಯುವುದು ಸರಿಯಾಗುವುದಾದರೆ, ಕಟ್ಟಿಕೊಂಡವನನ್ನು ಹೆಣ್ಣಾದವಳು ತೊರೆಯುವುದೂ ಸರಿಯೇ ಆಗುತ್ತದೆ. ಈ ಅರ್ಥದಲ್ಲಿ ಅಕ್ಕ ಕೌಶಿಕನನ್ನು ತೊರೆದದ್ದು ಸರಿಯಾದುದು ಮಾತ್ರವಲ್ಲ, ಮಹಿಳಾ ಪರವಾದ ದೃಷ್ಟಿಕೋನವೂ ಆಗಿದೆ.

ನಿಜಕ್ಕೂ ಅಕ್ಕ ಸ್ತ್ರೀಪರವಾದ ಧ್ವನಿ. ಸ್ತ್ರೀಯರ ಬಗೆಗಿನ ಆಕೆಯ ಕಾಳಜಿಯ ಸ್ವರೂಪಗಳು ಸಾಮಾಜಿಕವಾದವುಗಳಲ್ಲ; ಧಾರ್ಮಿಕ ಸ್ವರೂಪದವು ಅಷ್ಟೆ. ಸ್ತ್ರೀ ಕುರಿತಾದ ಸಾಮಾಜಿಕ ಸ್ಪಂದನ ಸ್ತ್ರೀ ವಾದವೇ ಎನ್ನುವುದರಲ್ಲಿ ಎರಡು ಮಾತಿಲ್ಲ, ಹಾಗೆಂದ ಮಾತ್ರಕ್ಕೆ ಸ್ತ್ರೀಯರ ಧಾರ್ಮಿಕ ಸ್ವಾತಂತ್ರ್ಯವೂ ಸೇರಿದಂತೆ ಸ್ತ್ರೀ ಸಂಬಂಧಿ ಧಾರ್ಮಿಕ ಸ್ಪಂದನವನ್ನು ಸ್ತ್ರೀವಾದದ ವ್ಯಾಪ್ತಿಯಿಂದ ಹೊರಗಿಡಲಾಗದು. ಅಂತೆಯೇ ಇದೂ ಸ್ತ್ರೀ ವಾದವೇ. ಈ ಅರ್ಥದಲ್ಲಿ ಅಕ್ಕ ಕನ್ನಡದ ಮೊದಲ ಸ್ತ್ರೀ ವಾದಿ.*

(ಇಲ್ಲಿ ಬಳಸಿರುವ ವಚನಗಳನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸಿರುವ ಸಮಗ್ರ ವಚನ ಸಂಪುಟ ಜನಪ್ರಿಯ ಆವೃತ್ತಿಯ 'ಶಿವಶರಣೆಯರ ವಚನಗಳು' ಎಂಬ ಸಂಪುಟದಿಂದ ಆಯ್ದುಕೊಳ್ಳಲಾಗಿದೆ.)

**ಬ. ಶರಣಪ್ಪ ಸತ್ಯಂಪೇಟೆ**
ಸತ್ಯಂಪೇಟೆ; ಲಕ್ಷ್ಮೀಪುರ ಅಂಚೆ
ಗುಲಬರ್ಗಾ ಜಿಲ್ಲೆ

## ಮಡಿ

''ಹಳೆಯದನ್ನೆಲ್ಲ
ಒಗೆಯಿರಿ !'' ಎಂದು
ಕೆಲವರ ಬಿರುನುಡಿ.
ಎಲ್ಲವನ್ನೂ ಒಗೆಯಬೇಕಿಲ್ಲ;
ಒಗೆದು ಮಡಿ
ಮಾಡಿ ಬಳಸಬಹುದಲ್ಲವೆ ?

**ಸಿ.ಪಿ.ಕೆ.**
ಮೈಸೂರು

# ಎರಡನೇ ಪ್ರಕಾರದ ಮಧುಮೇಹ ಒಂದು ರೋಗವೇ ?

ಅನೇಕರಿಗೆ ಈ ತಲೆ ಬರಹವೇ ತಲೆ ಕೆಡಿಸಬಹುದು. ಹಲವಾರು ವರ್ಷಗಳಿಂದ ಗುರುತಿಸಲ್ಪಟ್ಟ, ಅಭ್ಯಸಿಸಲ್ಪಟ್ಟ, ಸಂಶೋಧನೆಗೊಳಪಟ್ಟ, ಇಡೀ ಜಗತ್ತೇ ಒಪ್ಪಿದ ಒಂದು ಸಂಗತಿಯನ್ನು ಪ್ರಶ್ನಿಸುವದು ಎಂದರೆ ಹುಚ್ಚರ ಸಾಹಸವೇ ಸರಿ. ಎರಡನೆಯ ಪ್ರಕಾರದ ಮಧುಮೇಹದ ಬಗ್ಗೆ ಅನೇಕ ತಜ್ಞರು ಬರೆದಿದ್ದಾರೆ. ಸಾವಿರಾರು ಪುಸ್ತಕಗಳು ಪ್ರಕಟಗೊಂಡಿವೆ. ರೋಗದ ತೊಡಕುಗಳ ಬಗ್ಗೆ ಗ್ರಂಥಗಳೇ ಬಂದಿವೆ. ಚಿಕ್ಕಪುಟ್ಟ ಪುಸ್ತಿಕೆಗಳಿಗೆ ಕೊರತೆಯಿಲ್ಲ. ಇದೆಲ್ಲ ಗೊತ್ತಿದ್ದರೂ ಅದು ಒಂದು ರೋಗವೇ ಅಲ್ಲ ಎನ್ನುವ ಮಾತನ್ನು ಯಾರು ನಂಬಬಹುದು ? ಪ್ರಸ್ತುತ ಲೇಖಕ ಅನೇಕ ವರ್ಷಗಳಿಂದ ಮಧುಮೇಹದ ಬಗ್ಗೆ ಅಧ್ಯಯನ ನಡೆಸಿದ್ದಾನೆ. ಅಷ್ಟಿಷ್ಟು ಸಂಶೋಧನೆಯನ್ನೂ ಮಾಡಿದ್ದಾನೆ. ಕೆಲವು ಪುಸ್ತಕಗಳನ್ನು ಬರೆದಿದ್ದಾನೆ. ಕೆಲವು ಗ್ರಂಥಗಳಲ್ಲಿ ಪ್ರಕರಣಗಳನ್ನು ಬರೆದಿರುವುದು ನಿಜ. ಈತ ಎರಡನೆಯ ಪ್ರಕಾರದ ಮಧುಮೇಹ 'ಸಖ್ಯ'ವನ್ನು ೧೨ ವರ್ಷಗಳಿಂದಲೂ ಪಡೆದಿರುವನು. ಲೇಖಕನ ರಕ್ತದ ಗ್ಲುಕೋಸ್ ಪ್ರಮಾಣ ಬರಿ ಹೊಟ್ಟೆಯಲ್ಲಿದ್ದಾಗ ೩೦೦ ಮಿಲಿಗ್ರಾಂ ಇದೆ. ಊಟದ ನಂತರ ಅದು ಸಾಮಾನ್ಯವಾಗಿ ೬೦೦ ಮಿಲಿಗ್ರಾಂ ದಾಟುತ್ತದೆ. ಇವನು ಸಕ್ಕರೆ-ಬೆಲ್ಲ ಸಿಹಿ ಪದಾರ್ಥಗಳನ್ನು ಸಾಕಷ್ಟು ಸೇವಿಸುತ್ತಾನೆ. ಎಲ್ಲ ಪ್ರಕಾರದ ಹಣ್ಣುಗಳನ್ನೂ ತೃಪ್ತಿಯಾಗುವ ತನಕ ತಿನ್ನುತ್ತಾನೆ. ಪದೇ ಪದೇ ರಕ್ತವನ್ನಾಗಲೀ ಮೂತ್ರವನ್ನಾಗಲೀ ಪರೀಕ್ಷೆಗೆ ಒಳಪಡಿಸುವುದಿಲ್ಲ. ಅನೇಕ ಸಲ ಇಡೀ ದಿನ ಉಪವಾಸ ಇರುವನು. ಒಂದೊಂದು ಬಾರಿ ಊಟವಿಲ್ಲದೆ ಪೂರ್ಣ ೨೪ ತಾಸುಗಳನ್ನು ಕಳೆಯುವನು. ಇಂದಿನವರೆಗೆ ಯಾವುದೇ ಮದ್ದುಗಳನ್ನು ರಕ್ತದ ಗ್ಲುಕೋಸ್ ಪ್ರಮಾಣ ಕಡಿಮೆಗೊಳಿಸಲು ಸೇವಿಸಿಲ್ಲ. ಯಾವುದೇ ತರದ ತೊಡಕುಗಳಿಗೆ ಗುರಿಯಾಗಿಲ್ಲ. ರಕ್ತದ ಒತ್ತಡವಿಲ್ಲ. ಹೃದಯದ ತೊಂದರೆಯಿಲ್ಲ. ಕಣ್ಣು ಹಾಗೂ ಮೂತ್ರಪಿಂಡಗಳು ಸರಿಯಾಗಿ ಕಾರ್ಯ ನಿರ್ವಹಿಸುತ್ತಿವೆ. ತನ್ನಂತೆ ಯಾರಾದರೂ ಸಮಾಜದಲ್ಲಿ ಇರುವರೇ ಎಂದು ತಿಳಿಯಲು ಪ್ರಯತ್ನಿಸಿದನು. ಅಚ್ಚರಿ ಎನಿಸುವಂತೆ ಸಮಾಜದಲ್ಲಿ ಇಂಥ ಸಾವಿರಾರು ಜನರು ಜೀವಿಸಿದ್ದಾರೆ, ಸುಖಮಯ ಜೀವನವನ್ನು ಸಾಗಿಸುತ್ತಿದ್ದಾರೆ ಎಂಬುದನ್ನು ಗುರುತಿಸಿದ್ದಾನೆ. ಲೇಖಕನಿಗೇ ಆಗಲಿ ಸಮಾಜದಲ್ಲಿ ಸುಖಮಯ ಜೀವನವನ್ನು ನಡೆಸುತ್ತಿರುವ ಎರಡನೇ ಪ್ರಕಾರದ ಮಧುಮೇಹಿಗಳಿಗೇ ಆಗಲಿ ಯಾವುದೇ ಪ್ರಕಾರದ ತೊಂದರೆಗಳಿಲ್ಲ. ಬಹಳವೆಂದರೆ ಜಾಸ್ತಿ ನೀರಡಿಕೆ, ಜಾಸ್ತಿ ಮೂತ್ರ ವಿಸರ್ಜನೆ ಮಾತ್ರ ಕಾಣುವುವು. ಅವರ ಗಾಯಗಳು ಸಾಮಾನ್ಯರಂತೆ ಬೇಗನೆ ಮಾಯುವುವು. ಇಂಥ ಎಲ್ಲ ಹಿನ್ನೆಲೆ ಹೊಂದಿದ ಲೇಖಕ ಎರಡನೇ ಪ್ರಕಾರದ ಮಧುಮೇಹವನ್ನು ರೋಗವೇ ಅಲ್ಲವೆಂದು ಹೇಳುತ್ತಾನೆ. ಅದಕ್ಕೆ ಯಾವುದೇ ಉಪಚಾರ ಬೇಡ ಎನ್ನುವನು.

**ಮಧುಮೇಹ ಹಾಗೂ ಡೈಯಬಿಟಿಸ್‌ಗಳ ಅರ್ಥ:** ಮಧುಮೇಹ ಅಂದರೆ ರುಚಿಯುಳ್ಳ ಮೂತ್ರ. ಇದು ಭಾಷಾಂತರಿಸಿದ ಶಬ್ದವಲ್ಲ. ಮೂಲ ಸಂಸ್ಕೃತ ಶಬ್ದ. ಇದನ್ನು ಡೈಯಬಿಟಿಸ್ ಎಂದು ಆಂಗ್ಲ ಭಾಷೆಯಲ್ಲಿ ಕರೆಯುವರು. ಇದರ ಅರ್ಥವೆಂದರೆ ಸೈಫನ್ ಮಾಡುವುದು. ಅಂದರೆ ಹೀರಿ ಹೊರಹಾಕುವುದು. ದೇಹದಲ್ಲಿಯ ಶಕ್ತಿಯನ್ನೆಲ್ಲ ಈ ರೋಗ ಮೂತ್ರದ ಮೂಲಕ ಹೀರಿ ಹಾಕುತ್ತದೆ ಎಂದು ಅವರು ತಿಳಿದಿದ್ದರು. ಪಾಶ್ಚಾತ್ಯ ವೈದ್ಯರಿಗೆ ಈ ರೋಗ ಸಕ್ಕರೆಗೆ ಸಂಬಂಧಿಸಿದ ಕಾಯಿಲೆ ಎಂಬುದರ ಕಲ್ಪನೆ ಇರಲಿಲ್ಲ. ಭಾರತೀಯರಿಗೆ ಪಾಶ್ಚಾತ್ಯರಿಗಿಂತ ನೂರಾರು ವರ್ಷಗಳ ಮೊದಲೇ ಈ ತೊಂದರೆ ಸಕ್ಕರೆಗೆ ಸಂಬಂಧಿಸಿದೆ ಎಂಬುದು ತಿಳಿದಿತ್ತು. ಭಾರತೀಯರು ಮಧುಮೇಹದ ಹಲವು ಪ್ರಕಾರಗಳನ್ನು ಗುರುತಿಸಿದ್ದರು. ಪಾಶ್ಚಾತ್ಯರು ತಡವಾಗಿ ವಿವಿಧ ಪ್ರಕಾರಗಳನ್ನು ಪತ್ತೆಹಚ್ಚಿದರು.



ಇಂದು ಡೈಯಬಿಟಿಸ್ ರೋಗವನ್ನು ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ವಿಭಾಗಿಸುತ್ತಾರೆ. ಮೊದಲನೆಯ ಪ್ರಕಾರದ ಹೆಸರು ಐಡಿಡಿಎಮ್. ಈ ರೋಗಿಗಳಿಗೆ ಇನ್ಸುಲಿನ್ ಮದ್ದು ಬೇಕೇ ಬೇಕು. ಎರಡನೆಯ ಪ್ರಕಾರವನ್ನು ಎನ್‌ಆಯ್‌ಡಿಡಿಎಮ್ ಎಂದು ಹೆಸರಿಸಿದ್ದಾರೆ. ನಾವು ಈಗ ಈ ರೋಗದ ಬಗ್ಗೆಯೇ ಚರ್ಚಿಸುವದಿದೆ. ನೂರಾರು ವರ್ಷಗಳಿಂದ ಇದನ್ನು ರೋಗವೆಂದೇ ಪರಿಗಣಿಸಿದ್ದೇವೆ. ಆದರೆ ಅದು ಇಂದು ನನಗೆ ರೋಗವೆಂದೇ ಕಾಣುತ್ತಿಲ್ಲ. ಅದೊಂದು ದೇಹದ ಹೊಂದಾಣಿಕೆ ಎನಿಸುತ್ತದೆ. ಈ ತೊಂದರೆಯನ್ನು ಉಪಚರಿಸುವುದೆಂದರೆ ರೋಗಿಗೆ ಹಿಂಸೆ ಕೊಟ್ಟಂತೆ ಎಂದೇ ನನ್ನ ತಿಳುವಳಿಕೆ. ಈ ಪ್ರಕಾರದ ತೊಂದರೆಯನ್ನು ಉಪಚರಿಸಲೇಬಾರದೆಂದು ನನ್ನ ಮತ.

ಡೈಯಬಿಟಿಸ್ ರೋಗಕ್ಕೆ ಮುಖ್ಯ ಕಾರಣವೆಂದರೆ ಮೇದೋಜೀರಕ ಗ್ರಂಥಿಯ ಅಶಕ್ತತೆ ಎಂದು ತಿಳಿದಿದ್ದೇವೆ. ಗ್ರಂಥಿಯ ಅಶಕ್ತತೆಯಿಂದ ಇನ್ಸುಲಿನ್ ಪದಾರ್ಥ ಕಡಿಮೆ ಸ್ರವಿಸಲ್ಪಡುತ್ತದೆ. ಇನ್ಸುಲಿನ್ ಕೊರತೆಯೇ ಡೈಯಬಿಟಿಸ್ ರೋಗಕ್ಕೆ ಮೂಲಕಾರಣ ಎಂದು ನಂಬಿದ್ದೇವೆ. ಈ ಕೊರತೆ ಡೈಯಬಿಟಿಸ್ ತರುವುದರಲ್ಲಿ ಯಾವ ಸಂಶಯವೂ ಇಲ್ಲ. ಮೊದಲನೆಯ ಪ್ರಕಾರದ ಡೈಯಬಿಟಿಸ್‌ದಲ್ಲಿ ಇದೆಲ್ಲ ಸರಿ. ಆದರೆ ಎರಡನೆಯ ಪ್ರಕಾರದ ಡೈಯಬಿಟಿಸ್‌ದಲ್ಲಿ ಇನ್ಸುಲಿನ್ ಕೊರತೆಯೇ ಇಲ್ಲ. ರಕ್ತದಲ್ಲಿ ಎಷ್ಟಿದೆ ಎಂದು ಪರೀಕ್ಷಿಸಿದರೆ ಹಲವಾರು ರೋಗಿಗಳಲ್ಲಿ ರಕ್ತದ ಇನ್ಸುಲಿನ್ ಪ್ರಮಾಣ ಬೇಕಾದುದಕ್ಕಿಂತ ಸ್ವಲ್ಪ ಮಟ್ಟಿಗೆ ಜಾಸ್ತಿಯೇ ಇರುವುದು. ಈ ಸಂಗತಿ ಎಲ್ಲರನ್ನೂ ಬೆಚ್ಚುವಂತೆ ಮಾಡುವುದು. ಇನ್ಸುಲಿನ್ ಕೊರತೆ ಇರದೇ ಹೋದರೂ ಡೈಯಬಿಟಿಸ್ ಬಂದಿರುವುದು ಎಂದಮೇಲೆ ಎರಡನೆಯ ಪ್ರಕಾರದ ಡೈಯಬಿಟಿಸ್ ಇನ್ಸುಲಿನ್ ಕೊರತೆಯಿಂದ ಅಲ್ಲ ಎಂದಂತೆ ಆಯಿತು. ಹಾಗಾದರೆ ಎರಡನೆಯ ಪ್ರಕಾರದ ಡೈಯಬಿಟಿಸ್ ತೊಂದರೆಯ ಕಾರಣವೇನು ?

ಈ ಬಿಕ್ಕಟ್ಟು ಬಗೆಹರಿಸಲು ತಜ್ಞರ ಪ್ರಯತ್ನಗಳು ಪ್ರಾರಂಭವಾದವು. ಕೊನೆಗೆ ಒಂದು ಪ್ರಸ್ತಾವನೆಯನ್ನು ಮುಂದಿಟ್ಟರು. ಆ ಪ್ರಸ್ತಾವನೆ ಜೀವಕೋಶಗಳ ಹೊರಮೈ ಮೇಲೆ ರಿಸೆಪ್ಟಾರ್ಸ್ (ಗ್ರಾಹಿಗಳು) ಇರಬಹುದು ಎಂದರು.

ಈ ತರ್ಕದಂತೆ ಸ್ನಾಯುಗಳ ಜೀವಕೋಶಗಳ ಮೈಮೇಲೆ ಮೊಗ್ಗುಗಳಂತೆ ತೋರುವ ಆಕೃತಿಗಳು ಇರುತ್ತವೆ. ಇವೇ ಗ್ರಾಹಿಗಳು. ಈ ಮೊಗ್ಗುಗಳು ಹೂವಿನಂತೆ ಅರಳಿದರೆ ಮಾತ್ರ ಗ್ಲುಕೋಸ್ ಸಕ್ಕರೆ ಜೀವಕೋಶಗಳೊಳಗೆ ಸೇರುವುದು. ಇಲ್ಲದೆ ಹೋದರೆ ಜೀವಕೋಶಗಳು ಸಕ್ಕರೆಯನ್ನು ಬಳಸಲಾರವು. ಹೀಗಾಗಿ ರಕ್ತದ ಗ್ಲುಕೋಸ್ ಹೆಚ್ಚಾಗುವುದು. ರೋಗಿಗೆ ಶಕ್ತಿ ಬರುವುದು. ಈ ತೊಂದರೆಯನ್ನು ನಿವಾರಿಸಲು ಬೇರೆ ಇನ್ಸುಲಿನ್ ಚುಚ್ಚಬೇಕೆಂದು ವಾದವಿದೆ. ಎರಡನೆಯದಾಗಿ ವ್ಯಕ್ತಿಯ ದೇಹದಲ್ಲಿ ತಯಾರಿಸಲ್ಪಡುವ ಇನ್ಸುಲಿನ್ ವಿಕಾರವಾಗಿ ಅದು ನಿರುಪಯುಕ್ತ ಆಗಿರಬಹುದೆಂಬ ವಾದವಿದೆ. ಇಂಥ ವ್ಯಕ್ತಿಗಳ ರಕ್ತದಲ್ಲಿರುವ ಇನ್ಸುಲಿನ್ ಬೇರ್ಪಡಿಸಿ ಅದು ತನ್ನ ಶಕ್ತಿಯನ್ನು ಕಳೆದುಕೊಂಡಿದೆಯೋ ಹೇಗೆ ಎಂಬುದನ್ನು

ಡಾ॥ ಸ. ಜ. ನಾಗಲೋಟಿಮಠ

ಪರೀಕ್ಷಿಸಿದರೆ ಯಾವ ಕುಂದೂ ಅಲ್ಲಿ ಪತ್ತೆಯಾಗಿಲ್ಲ. ಇನ್ನು ಜೀವಕೋಶಗಳು ಗ್ಲುಕೋಸ್ ಬಳಸಲಾರವು ಎಂಬ ಮಾತನ್ನೂ ನಾವು ಸಂಶಯದಿಂದ ನೋಡಬೇಕಾಗುತ್ತದೆ. ಏಕೆಂದರೆ ಎರಡನೇ ಪ್ರಕಾರದ ಡೈಯಬಿಟಿಸ್ ಪಡೆದ ವ್ಯಕ್ತಿ ಯಾವ ತೊಂದರೆ ಇಲ್ಲದೆ ತನ್ನ ನಿತ್ಯ ಕಾರ್ಯಗಳನ್ನು ಮಾಡುತ್ತಲೇ ಇರುತ್ತಾನೆ. ಸಾಮಾನ್ಯ ಅಶಕ್ತಿಯನ್ನು ಹೊಂದಿರಬಹುದೇ ವಿನಾ ಸ್ನಾಯುಗಳ ಅಶಕ್ತತೆಯನ್ನು ತೋರಿಸುವುದಿಲ್ಲ.

ಈ ಎಲ್ಲ ಸಂಗತಿಗಳನ್ನು ಪರಿಶೀಲಿಸಿದರೆ ಒಂದು ಮಾತು ಖಚಿತವಾಗುವುದು. ಅದೆಂದರೆ ಎರಡನೆಯ ಪ್ರಕಾರದ ಡೈಯಬಿಟಿಸ್ ತೊಂದರೆ ಇನ್ಸುಲಿನ್ ಸ್ರವಿಕೆಗೆ ಸಂಬಂಧಿಸಿಲ್ಲ ಎನಿಸುವುದು.

ಇನ್ನು ಮೇದೋಜೀರಕ ಗ್ರಂಥಿಯನ್ನೇ ಪರೀಕ್ಷಿಸ ಬಹುದು. ಎರಡನೇ ಪ್ರಕಾರದ ಡೈಯಬಿಟಿಸ್ ಪಡೆದ ಸಾವಿರಾರು ಮೃತರ ಗ್ರಂಥಿಗಳನ್ನು ಪರೀಕ್ಷಿಸಿದ್ದಾರೆ. ಜಗತ್ತಿನಲ್ಲಿ ಯಾರಿಗೂ ಕುಂದುಗಳು ಕಂಡಿಲ್ಲ. ತೊಂದರೆಗೆ ಮೂಲ ಗ್ರಂಥಿ ಕಾರಣವಲ್ಲ ಎಂದು ಇದು ಸಾರುತ್ತದೆ. ಹಾಗಿದ್ದರೆ ಎರಡನೆಯ ಪ್ರಕಾರದ ಡೈಯಬಿಟಿಸ್ ತೊಂದರೆಯ ಕಾರಣವೇನು ?

ಎರಡನೆಯ ಪ್ರಕಾರದ ಡೈಯಬಿಟಿಸ್ ಒಂದು ರೋಗವೆಂದು ಹೇಳಲು ಕೆಲವು ತೊಡಕುಗಳನ್ನು ವೈಭವೀಕರಿಸುತ್ತಾರೆ:

೧. ಮೂತ್ರಪಿಂಡದ ತೊಡಕುಗಳು; ೨. ಕಣ್ಣಿನ ತೊಡಕುಗಳು; ೩. ಕಾಲು ಹಾಗೂ ಕಾಲ್ಬೆರಳುಗಳ ತೊಡಕುಗಳು; ೪. ಹೃದಯದ ತೊಂದರೆಗಳು; ೫. ಮಿದುಳಿನ ತೊಂದರೆ, ಇತ್ಯಾದಿ.

**ಮೂತ್ರಪಿಂಡದ ತೊಡಕುಗಳು**

ಮೂತ್ರಪಿಂಡದಲ್ಲಿ ಹಲವಾರು ಗಾಯಗಳು ತಲೆದೋರುತ್ತವೆ. ಅದರಿಂದ ರಕ್ತದಲ್ಲಿಯ ಪ್ರೋಟೀನ್ ಪದಾರ್ಥ ಮೂತ್ರದಲ್ಲಿ ಸೋರಿ ಹೋಗುವುದು. ಕ್ರಮೇಣ ದೇಹದ ಪ್ರೋಟೀನ್ ಪದಾರ್ಥ ಹೆಚ್ಚು ಹೆಚ್ಚಾಗಿ ಸೋರಿ ವ್ಯಕ್ತಿಯಲ್ಲಿ ಪ್ರೋಟೀನ್ ಪದಾರ್ಥದ ಅಭಾವ ತೋರಿ ದೇಹದ ತುಂಬ ಬಾವು ಬರುತ್ತದೆ. ಕೊನೆಗೆ ಬೇರೆ ತೊಡಕುಗಳು ತಲೆಯೆತ್ತಿ ವ್ಯಕ್ತಿ ಮರಣಹೊಂದುವನು. ಇಂಥ ತೊಡಕಿಗೆ ಡೈಯಬಿಟಿಸ್ ಮೂತ್ರಪಿಂಡ ತೊಡಕು ಎಂದು ಹೆಸರು. ಇದರಲ್ಲಿ ಕೆಲವು ಪ್ರಶ್ನೆಗಳು ಬರುತ್ತವೆ. ಮೊದಲನೆಯದೆಂದರೆ ಅ) ಇಂಥ ತೊಡಕು ಎಲ್ಲ ಡೈಯಬಿಟಿಸ್ ವ್ಯಕ್ತಿಗಳಲ್ಲಿ ಯಾಕೆ ಬರುವುದಿಲ್ಲ? ಡೈಯಬಿಟಿಸ್ ನಿರ್ಲಕ್ಷ್ಯ ಮಾಡಿದವರೆಲ್ಲರಲ್ಲಿ ಇದು ಬರುತ್ತಿದ್ದರೆ, ಒಂದು ಮಾತು. ನಿಜ ಸ್ಥಿತಿ ಹಾಗಿಲ್ಲ. ಈ ತೊಂದರೆ ಕೇವಲ ಕೆಲವರಲ್ಲಿ ಮಾತ್ರ ಬರುತ್ತದೆ. ಅನೇಕರು ಇದರಿಂದ ತಪ್ಪಿಸಿಕೊಳ್ಳುವರು. ಆ) ಎರಡನೆಯ ಪ್ರಶ್ನೆ ಎಂದರೆ ಈ ತೊಂದರೆ ಡೈಯಬಿಟಿಸ್ ಇಲ್ಲದವ ರಲ್ಲಿಯೂ ಕಾಣುತ್ತದೆ. ಅಂದರೆ ಈ ತರದ ಮೂತ್ರ ಪಿಂಡದ ತೊಂದರೆ ಬರಬೇಕಾದರೆ ಡೈಯಬಿಟಿಸ್ ಇರುವುದು ಅವಶ್ಯವಿಲ್ಲ. ಹಾಗಾದರೆ ಡೈಯಬಿಟಿಸ್‌ಗೂ ಈ ತೊಂದರೆಗೂ ಸಂಬಂಧವಿಲ್ಲ. ಈ ಕೆಡಕನ್ನು ಡೈಯಬಿಟಿಸ್ ಮೂತ್ರಪಿಂಡ ರೋಗ ಎನ್ನುವುದೇ ತಪ್ಪು. ಇದು ಸ್ವತಂತ್ರ ರೋಗ. ಡೈಯಬಿಟಿಸ್ ಇರಲಿ ಬಿಡಲಿ ಜನರಲ್ಲಿ ಕಾಣುವುದು. ಇದರ ಕಾರಣವನ್ನು ಇನ್ನೂ ಪತ್ತೆ ಹಚ್ಚಬೇಕಾಗಿದೆ.

**ಕಣ್ಣಿನ ತೊಂದರೆಗಳು**

ಕೆಲವು ತೊಂದರೆಗಳು ಕಣ್ಣಿನಲ್ಲಿ ಕಾಣುತ್ತವೆ. ಇಂದು ಈ ತೊಂದರೆಗಳನ್ನು ಡೈಯಬಿಟಿಸ್ ತೊಂದರೆಗಳು ಎನ್ನುತ್ತಾರೆ. ಮೂತ್ರಪಿಂಡದ ತೊಡಕುಗಳನ್ನು ಅಭ್ಯಸಿಸು ವಾಗ ಎದ್ದ ಪ್ರಶ್ನೆಗಳು ಇಲ್ಲಿಯೂ ಎದುರಾಗುತ್ತವೆ. ಅ) ಅಂದರೆ ಕಣ್ಣಿನಲ್ಲಿ ಕಾಣುವ ದೋಷಗಳು ಎಲ್ಲ ಡಯ ಬಿಟಿಕ್ ವ್ಯಕ್ತಿಗಳಲ್ಲಿ ಕಾಣುವುವೇ ? ಇಲ್ಲ, ಕೆಲವೇ ಜನರಲ್ಲಿ ಮಾತ್ರ ಕಾಣುವುವು; ಉಳಿದ ಡೈಯಬಿಟಿಕ್ ವ್ಯಕ್ತಿಗಳು ಇದರಿಂದ ಮುಕ್ತರಾಗಿರುವರು. ಆ) ಎರಡನೆಯ ಪ್ರಶ್ನೆ ಯೆಂದರೆ ಇಂಥ ತೊಂದರೆಗಳು ಅನೇಕ ಸಲ ಡೈಯ ಬಿಟಿಸ್ ಇಲ್ಲದವರಲ್ಲಿಯೂ ಕಾಣುತ್ತವೆ. ಅಂದರೆ, ಈ ತೊಂದರೆಯೂ ಒಂದು ಸ್ವತಂತ್ರ ತೊಂದರೆ. ಇದಕ್ಕೂ ಡೈಯಬಿಟಿಸ್ ತೊಂದರೆಗೂ ಸಂಬಂಧವಿಲ್ಲ ಎನಿಸುತ್ತದೆ.

ಇನ್ನುಳಿದ ತೊಂದರೆಗಳಾದ ಕಾಲು ಕೊಳೆತು ಹೋಗು ವಿಕೆ, ಹೃದಯಾಘಾತ, ಮಿದುಳು ಆಘಾತಗಳ ಕಥೆಯೂ ಇದೇ ತೆರನಾಗಿದೆ. ಇವು ಯಾವ ತೊಂದರೆಯ ನೆರವೂ ಇಲ್ಲದೇ ವ್ಯಕ್ತಿಗಳಲ್ಲಿ ಕಾಣುತ್ತವೆ, ಬಲಿಯುತ್ತವೆ, ಪೀಡಿಸಿ ಪೀಡಿಸಿ ವ್ಯಕ್ತಿಗಳನ್ನು ಸಾಯಿಸುತ್ತವೆ.

ಅದು ಏಕೋ ಹೇಗೋ ಗೊತ್ತಿಲ್ಲ, ಇವೆಲ್ಲ ಡೈಯಬಿಟಿಸ್‌ದಿಂದಲೇ ಕಾಣುತ್ತವೆ ಎಂಬ ಪ್ರಚಾರ ಮಾಡಿದ್ದೇವೆ. ಇದೇನೋ ಪ್ರಸ್ತುತ ಲೇಖಕನಿಗೆ ಸರಿ ಎನಿಸುತ್ತಿಲ್ಲ. ಡೈಯಬಿಟಿಸ್ ತೊಂದರೆ ಯಾಕೆ ಬಂದಿದೆ ಎಂಬ ಪ್ರಶ್ನೆಯನ್ನೇ ನಾವು ಸಮರ್ಪಕವಾಗಿ ಉತ್ತರಿಸಿಲ್ಲ. ಇದರ ಲಾಭವನ್ನು ಪಡೆದು ವ್ಯಕ್ತಿಯಲ್ಲಿ ಏನೇ ತೊಂದರೆ ಬಂದರೂ ಅದು ಡೈಯಬಿಟಿಸ್‌ದಿಂದಲೇ ಬಂದಿದೆ ಎನ್ನುವ ಧೈರ್ಯ ಪಡೆದಿರುವೆವು. ಒಂದು ವಿಚಾರದಲ್ಲಿ ಡೈಯಬಿಟಿಸ್ ಕಸದ ಪುಟ್ಟಿಯಂತೆ ಆಗಿದೆ; ಶೀತ ವಾದರೂ, ಗಂಟಲು ಕೆರೆದರೂ, ಕಿವಿ ಮಂದವಾದರೂ, ಅದು ಡೈಯಬಿಟಿಸದಿಂದ ಎನ್ನುವ ಮಟ್ಟಕ್ಕೆ ಬಂದಿರುವೆವು. ಹೊಸದಾಗಿ ಕಂಡ ಪೀಡೆ ಬರಲು ಬೇರೆ ಯಾವುದೋ ಕಾರಣವಿರಬೇಕು ಎನ್ನುವ ಗೋಜಿಗೆ ಹೋಗುವುದಿಲ್ಲ. ಆ ವ್ಯಕ್ತಿಯಲ್ಲಿ ಡೈಯಬಿಟಿಸ್ ಇದೆಯೋ ಮುಗಿಯಿತು. ಎಲ್ಲದ್ದಕ್ಕೂ ಅದೇ ಕಾರಣವೆಂದು ಕಣ್ಣುಮುಚ್ಚಿಬಿಡುತ್ತೇವೆ. ಇದು ಸರಿಯಲ್ಲ ಎಂದೇ ನನ್ನ ಅನಿಸಿಕೆ.

ಇದೇ ಸಂಗತಿಯನ್ನು ಮತ್ತೊಂದು ವಿಧದಿಂದ ವಿಚಾರಿಸೋಣ : ಮೊದಲನೆಯ ಪ್ರಶ್ನೆಯೆಂದರೆ ಡೈಯಬಿಟಿಸ್ ತೊಂದರೆಯಲ್ಲಿ ರಕ್ತದ ಗ್ಲುಕೋಸ್ ಯಾಕೆ ಹೆಚ್ಚುತ್ತದೆ ? ಮೊದಲನೆಯ ತಪ್ಪು ತಿಳುವಳಿಕೆ ಎಂದರೆ ಜಾಸ್ತಿ ಸಕ್ಕರೆ ತಿನ್ನುವುದರಿಂದ ಡೈಯಬಿಟಿಸ್ ಬರುತ್ತದೆ ಎನ್ನುವುದು. ಸಕ್ಕರೆ ತಿಂದರೆ ರಕ್ತದ ಗ್ಲುಕೋಸ್ ಹೆಚ್ಚುವುದು. ಆದರೆ ಈ ಹೆಚ್ಚಳ ಕೇವಲ ತಾತ್ಕಾಲಿಕವಾದದ್ದು. ಕೆಲ ಸಮಯದಲ್ಲಿ ಹೀಗೆ ಹೆಚ್ಚಾದ ಗ್ಲುಕೋಸ್ ತಾನೇ ಇಳಿಯುತ್ತದೆ. ದೇಹದಲ್ಲಿ ಅದಕ್ಕೆ ಒಂದು ನಿಯಂತ್ರಣ ಇದೆ. ಕಾರಣ, ಸಿಹಿ ಪದಾರ್ಥಗಳನ್ನು ತಿಂದರೆ ಡೈಯಬಿಟಿಸ್ ಹೆಚ್ಚಾಗುತ್ತದೆ ಎಂಬ ಸಂಗತಿ ಹುರುಳಿಲ್ಲದ್ದು. ಅನೇಕ ಸಲ ರಕ್ತದ ಗ್ಲುಕೋಸ್ ಮಟ್ಟ ಅತಿ ಹೆಚ್ಚಾಗುತ್ತದೆ. ಆಗ ವ್ಯಕ್ತಿ ಏನನ್ನೂ ಸೇವಿಸಿರುವುದಿಲ್ಲ. ಹಾಗಾದರೆ ಎಲ್ಲಿಂದ ಬಂತು ಈ ಗ್ಲುಕೋಸ್ ? ರಕ್ತದ ಗ್ಲುಕೋಸ್ ಹೆಚ್ಚಾಗಲು ಒಂದು ಕಾರಣ ಎದ್ದು ಕಾಣುತ್ತದೆ. ಅದೆಂದರೆ ಮಾನಸಿಕ ಒತ್ತಡ. ಯಾವುದೇ ಕಾರಣದಿಂದ ಮನಸ್ಸಿನ ಒತ್ತಡ ಹೆಚ್ಚಾದರೆ ರಕ್ತದ ಗ್ಲುಕೋಸ್ ಹೆಚ್ಚಾಗುತ್ತದೆ. ವ್ಯಕ್ತಿ ಉಂಡಿರಲಿ, ಉಪವಾಸ ಇರಲಿ ರಕ್ತದ ಗ್ಲುಕೋಸ್ ಹೆಚ್ಚಾಗುವುದಂತೂ ಖಂಡಿತ. ರಕ್ತದ ಗ್ಲುಕೋಸ್ ಹೆಚ್ಚಾಗಲು ಊಟ ಅವಶ್ಯವಿದೆ. ಇಲ್ಲದೆ ಹೋದರೆ ದೇಹದ ಅಂಗಾಂಶಗಳು ಕರಗಿ ಬೇಕಾದಷ್ಟು ಗ್ಲುಕೋಸ್ ತಯಾರಾಗುತ್ತದೆ. ಲೇಖಕನಿಗೆ ಅನಿಸುವಂತೆ ಹೆಚ್ಚಿನ ಗ್ಲುಕೋಸ್ ಬೇಕಾದದ್ದು ಮೆದುಳಿಗೆ. ಅದರ ಜೀವ ಕೋಶಗಳು ಮಾನಸಿಕ ಒತ್ತಡದಿಂದ ಜಾಸ್ತಿ ಕಾರ್ಯ ಮಾಡಬೇಕಾಗಿರುತ್ತವೆ. ಮಾನಸಿಕ ಒತ್ತಡದಿಂದ ಜಾಸ್ತಿ ಕಾರ್ಯವೆಂದರೆ ಜಾಸ್ತಿ ಗ್ಲುಕೋಸ್ ಬೇಕು. ಮೊದಲಿದ್ದ ಗ್ಲುಕೋಸ್ ಪ್ರಮಾಣ ಮಿದುಳಿಗೆ ಕಡಿಮೆ ಆಗಿರಲು ಸಾಕು. ಕಾರಣ ಮಿದುಳು ತನ್ನದೇ ಆದ ವಿಧಾನದಿಂದ ರಕ್ತದ ಗ್ಲುಕೋಸ್ ಪ್ರಮಾಣವನ್ನು ಹೆಚ್ಚಿಸುತ್ತದೆ. ತನಗೆ ಬೇಕಾದ ಪ್ರಮಾಣದಷ್ಟು ಹೆಚ್ಚಿಸುತ್ತದೆ. ನೀವು ಏನೇ ಮಾಡಿದರೂ ಅದು ಕಡಿಮೆಯಾಗದು. ಅದು ಕಡಿಮೆ ಯಾಗಬೇಕಾದರೆ ಮಿದುಳಿನ ಮೇಲಿನ ಮಾನಸಿಕ ಒತ್ತಡ ಕಡಿಮೆಯಾಗಬೇಕು. ಇದನ್ನು ಧ್ಯಾನ ಹಾಗೂ ಯೋಗ ದಿಂದ ಸಾಧಿಸಲು ಸಾಧ್ಯ. ಈ ಸಂಗತಿಯನ್ನು ಎಲ್ಲರೂ ಬಲ್ಲರು. ಅನೇಕ ಸಲ ಮನಸ್ಸಿನ ತಳಮಳ ಕಡಿಮೆ ಯಾಗುತ್ತಿದ್ದಂತೆ ಡೈಯಬಿಟಿಸ್ ತೊಂದರೆ ಕಡಿಮೆ ಯಾಗುವುದು ಹಲವು ವೈದ್ಯರ ಅನುಭವ. ತಳಮಳ ಕಡಿಮೆಯಾಗದೇ ಹೋದರೆ ಇನ್ಸುಲಿನ್ ಎಷ್ಟೇ ಪ್ರಮಾಣದಲ್ಲಿ ಕೊಟ್ಟರೂ ರಕ್ತದ ಗ್ಲುಕೋಸ್ ಮಟ್ಟ ಕೆಳಗೆ ಇಳಿಯುವುದಿಲ್ಲ. ಎರಡನೇ ಪ್ರಕಾರದ ಡೈಯಬಿಟಿಸ್‌ದಲ್ಲಿ ಇನ್ಸುಲಿನ್ ಸ್ರವಿಕೆಯ, ಮೇದೋಜೀರಕ ಗ್ರಂಥಿಯ, ಪಾತ್ರ ಬಹಳ ಕಡಿಮೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಇನ್ನು ಕೆಲವು ಮಾತು ಡೈಯಬಿಟಿಸ್ ತೊಂದರೆಯಲ್ಲಿ ಪ್ರಚಲಿತವಾಗಿ ಬಳಸುತ್ತಿರುವ ಆಹಾರದ ಬಗ್ಗೆ: ಡೈಯಬಿಟಿಸ್ ತೊಂದರೆಯಲ್ಲಿ ವ್ಯಕ್ತಿಗೆ ಸಕ್ಕರೆ ನಿಷಿದ್ಧ. ಚಹದಲ್ಲಿ ಹಾಕುವ ಅರ್ಧ ಚಮಚೆ ಸಕ್ಕರೆಗೂ ಕತ್ತರಿ. ಇನ್ನು ಸಿಹಿ ತಿಂಡಿ-ತಿನಿಸುಗಳು ಸಮೀಪಕ್ಕೆ ಸಹ ಬರಬಾರದು. ಸಕ್ಕರೆಯನ್ನು ಕೆಲವು ಜನ ವೈದ್ಯರು ಬಿಳಿ ವಿಷ ಎಂದೇ ಸಂಬೋಧಿಸುತ್ತಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವೈದ್ಯರು ಹಣ್ಣುಗಳನ್ನು ಸೇವಿಸಬಾರದೆಂದು ವಿಧಿಸುವರು. ಸೇವಿಸಿದರೂ ಕೇವಲ ರುಚಿ ನೋಡಲು ಮಾತ್ರ ಎನ್ನುವಂತೆ ಸೇವಿಸಲು ಹೇಳುವರು. ಪ್ರತಿ ಎರಡು ತಾಸಿಗೊಮ್ಮೆ ಸ್ವಲ್ಪ ಸ್ವಲ್ಪ ಸೇವಿಸಲು ಉಪದೇಶಿಸುವರು. ಇವುಗಳಲ್ಲಿ ಏನಾದರೂ ಅರ್ಥವಿದೆಯೇ ಎಂಬುದನ್ನು ಪರಿಶೀಲಿಸೋಣ.

ಮೊದಲನೆಯದು ಸಕ್ಕರೆ, ಬೆಲ್ಲ, ಜೇನು ಇತ್ಯಾದಿ ಸೇವಿಸಬಾರದು ಎಂಬ ವಿಷಯ. ಲೇಖಕನಿಗೆ ಇದು ಸರಿ ಅನಿಸಿಲ್ಲ. ಹಿಂದೆ ಒಂದು ಕಾಲವಿತ್ತು. ಆಗ ಡೈಯಬಿಟಿಸ್ ಆದವರು ಅಕ್ಕಿಯಿಂದಾದ ತಿನಿಸುಗಳನ್ನು ಸೇವಿಸ ಬಾರದೆಂದು ಉಪದೇಶಿಸುತ್ತಿದ್ದರು. ಜಗತ್ತಿನಲ್ಲೆಲ್ಲ ಇದೇ ವಿಚಾರ ಬೋಧಿಸಲ್ಪಡುತ್ತಿತ್ತು. ಚೆನ್ನೈ ಶಹರದ ವಿಶ್ವನಾಥ ಹಾಗೂ ಸಂಗಡಿಗರು ಕೂಡಿ ಅನ್ನದ ಮೇಲೆ ಸಂಶೋಧನೆ ನಡೆಸಿದರು. ಅವರ ಫಲಿತಾಂಶದಂತೆ ಅಕ್ಕಿಯಿಂದಾದ ಪದಾರ್ಥಗಳಿಗೂ ಉಳಿದ ಕಾಳುಗಳಿಂದ ಆದ ಪದಾರ್ಥ ಗಳಿಗೂ ಜಾಸ್ತಿ ಭೇದವಿಲ್ಲ. ಡೈಯಬಿಟಿಸ್ ತೊಂದರೆ

ಯುಳ್ಳವರು ಅಕ್ಕಿಯನ್ನು ಧಾರಾಳವಾಗಿ ಸೇವಿಸಬಹುದು ಎಂದರು. ಪ್ರಾರಂಭದಲ್ಲಿ ಅನೇಕರು ಎಚ್ಚರಿಕೆ ಕೊಟ್ಟರು. ಅನಂತರ ಎಲ್ಲ ವಾದಗಳೂ ಶಾಂತವಾದುವು. ಇಂದು ಜಗತ್ತಿನಲ್ಲೆಲ್ಲ ಡೈಯಬಿಟಿಸ್ ಕಾಯಿಲೆಯವರು ಅಕ್ಕಿಯನ್ನು ಉಪಯೋಗಿಸುತ್ತಾರೆ. ಅದೇ ಪರಿಸ್ಥಿತಿ ಸಕ್ಕರೆಗೂ ಬರುವುದು ಎಂಬ ವಾದ ನನ್ನದು. ಸಕ್ಕರೆ ತಿನ್ನುವುದನ್ನು ಯಾಕೆ ಬೇಡವೆನ್ನುತ್ತಾರೆ ಎಂಬುದು ನನ್ನ ಪ್ರಶ್ನೆ. ವ್ಯಕ್ತಿ ಏನೇ ತಿನ್ನಲಿ, ಅಂತಿಮವಾಗಿ ಅದು ಗ್ಲುಕೋಸ್ ರೂಪದಲ್ಲಿ ರಕ್ತ ಸೇರಬೇಕು. ಮತ್ತಾವ ರೂಪದಲ್ಲೂ ಅದು ರಕ್ತ ಸೇರಲು ಸಾಧ್ಯವಿಲ್ಲ. ಸೇರಿದರೂ ದೇಹದ ಜೀವಕಣಗಳಿಗೆ ಅದು ನಿರುಪಯುಕ್ತ. ಇದು ಅರ್ಥವಾದ ಮೇಲೆ ಸಕ್ಕರೆಯನ್ನು ಯಾಕೆ ತಿನ್ನಬಾರದು ಎನಿಸುತ್ತದೆ. ಸಮಾಜದಲ್ಲಿ ಎರಡನೇ ಪ್ರಕಾರದ ಡೈಯಬಿಟಿಸ್ ಜನ ಸಾಕಷ್ಟು ಇದ್ದಾರೆ. ಇವರಿಗೆ ರೋಗದ ಯಾವ ಯಾವ ಲಕ್ಷಣಗಳೂ ಇಲ್ಲ. ಅವರು ತಮ್ಮ ಸಾಮಾನ್ಯ ಜೀವನವನ್ನು ನಡೆಸಿದ್ದಾರೆ. ಯಾವುದೇ ಪ್ರಕಾರದ ಮದ್ದನ್ನು ಅವರು ತೆಗೆದುಕೊಳ್ಳುವುದಿಲ್ಲ. ಇಂಥ ವ್ಯಕ್ತಿಗಳು ತಮಗೆ ಬೇಕೆನಿಸುವಷ್ಟು ಸವಿ ಪದಾರ್ಥಗಳನ್ನು ತಿನ್ನುತ್ತಾರೆ. ಅವರು ಎಲ್ಲ ವಿಧದಿಂದಲೂ ಆರೋಗ್ಯವಾಗಿರುವವರು. ನನ್ನ ಅನಿಸಿಕೆಯಂತೆ ಸಕ್ಕರೆ ತಿನ್ನುವುದನ್ನು ನಿಷೇಧಿಸುವುದು ಸರಿ ಎನಿಸದು.

**ಎರಡನೆಯದಾಗಿ ಊಟದ ಅಥವಾ ತಿನ್ನುವ ನಿಯಮಗಳು** : ಇಂದಿನ ತಜ್ಞರು ಸೂಚಿಸುವಂತೆ ಪ್ರತಿ ಎರಡು ತಾಸಿಗೆ ಸ್ವಲ್ಪ ಸ್ವಲ್ಪ ತಿನ್ನಬೇಕು. ಅವರಂತೆ ಈ ವಿಧಾನದಿಂದ ರಕ್ತದ ಗ್ಲುಕೋಸ್ ಪ್ರಮಾಣ ಜಾಸ್ತಿ ಆಗುವುದಿಲ್ಲ. ಲೇಖಕನ ವಾದ ಎಂದರೆ ಡೈಯಬಿಟಿಸ್ ತೊಂದರೆಯಲ್ಲಿ ರಕ್ತದ ಗ್ಲುಕೋಸ್ ಸದಾಕಾಲ ಹೆಚ್ಚಿಗೆ ಇರುತ್ತದೆ. ವ್ಯಕ್ತಿ ಎರಡು ತಾಸಿಗೊಮ್ಮೆ ತಿನ್ನಲಿ, ದಿನಕ್ಕೆ ಒಂದೇ ಬಾರಿ ತಿನ್ನಲಿ, ಕೊನೆಗೆ ಉಪವಾಸವಿದ್ದರೂ ಗ್ಲುಕೋಸ್ ಪ್ರಮಾಣ ಹೆಚ್ಚಿಗಿರುವುದು. ಎರಡನೆಯದಾಗಿ ಇಂದಿನ ತಜ್ಞರಂತೆ ಆಹಾರ ಸ್ವೀಕರಿಸತೊಡಗಿದರೆ ಕೆಲಸ ಮಾಡಲು ವೇಳೆ ಎಲ್ಲಿ ಉಳಿಯುವುದು ? ಇದು ಎಲ್ಲರಿಗೂ ಸಾಧ್ಯವೇ ? ಸರಿಯೇ ?

ಮೇಲೆ ವಿವರಿಸಿದ ಎಲ್ಲ ಸಂಗತಿಗಳನ್ನು ಪರಿಶೀಲಿಸಿದರೆ ಎರಡನೇ ಪ್ರಕಾರದ ಡೈಯಬಿಟಿಸ್ ಒಂದು ರೋಗವಾಗಿರದೆ ಅದೊಂದು ದೇಹಕ್ಕೆ ಅವಶ್ಯವಿದ್ದ ದೇಹ ಕ್ರಿಯಾಶಾಸ್ತ್ರದ ಬದಲಾವಣೆ ಎನಿಸುತ್ತದೆ. ನೇರವಾಗಿ ಈ ವಾದವನ್ನು ಯಾವ ವೈದ್ಯರೂ ಒಪ್ಪಲಿಕ್ಕಿಲ್ಲ. ಆದರೂ ಅಂಥವರು ವಿಚಾರಿಸಬೇಕು. ಲೇಖಕನ ವಾದವನ್ನು ಅವರು ಒಪ್ಪಿದರೆ, ಎರಡನೆ ಪ್ರಕಾರದ ಡೈಯ ಬಿಟಿಸ್ ವ್ಯಕ್ತಿಗಳು ಹಲವಾರು ಮದ್ದು ಸೇವಿಸುವುದರಿಂದ ಮುಕ್ತರಾಗುತ್ತಾರೆ. ಮದ್ದು ಸೇವಿಸಿ ಅವುಗಳ ದುಷ್ಪರಿಣಾಮ ಗಳನ್ನು ಎದುರಿಸಬೇಕಿಲ್ಲ. ವಿನಾಕಾರಣ ಹೆದರಿ ಹೆದರಿ ಸಾಯಬೇಕಿಲ್ಲ. ಸಿಹಿ ಸೇವಿಸುವುದನ್ನು ನಿಲ್ಲಿಸಬೇಕಿಲ್ಲ.

ಸ. ಜ. ನಾಗಲೋಟಿಮಠ
ವೈದ್ಯಕೀಯ ನಿರ್ದೇಶಕರು, ಬ.ವಿ.ವ. ಸಂಘ
ಬಾಗಲಕೋಟ-೫೮೭ ೧೦೧

# ಲೋಕಾಯುಕ್ತರು

**ಲೋ**ಕಾಯುಕ್ತ ಸಂಸ್ಥೆಯ ಪ್ರಭಾವ ಮತ್ತು ಅದರ ವ್ಯಾಪ್ತಿಯು ಇತ್ತೀಚಿನ ದಿನಗಳಲ್ಲಿ ನಮಗೆ ಅಚ್ಚರಿಯನ್ನುಂಟು ಮಾಡುತ್ತಿದೆ. ದಿನಪತ್ರಿಕೆಗಳಲ್ಲಿ ಲೋಕಾಯುಕ್ತರು ನಡೆಸುತ್ತಿರುವ ಹಠಾತ್ ದಾಳಿ, ಸ್ಥಳದಲ್ಲಿಯೇ ಭ್ರಷ್ಟ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವಿಕೆ ಇವೇ ಮೊದಲಾದವನ್ನು ನೋಡಿದರೆ ನಿಜಕ್ಕೂ ಪ್ರಶಂಸನೀಯ. ಯಾಕೆಂದರೆ ಶ್ರೀ ವೆಂಕಟಾಚಲರವರು ಅಧಿಕಾರ ಸ್ವೀಕರಿಸುವುದಕ್ಕೆ ಮುಂಚೆ ಈ ಸಂಸ್ಥೆ ಎಲ್ಲಿತ್ತು, ಇದ್ದರೂ ಯಾಕೆ ಕೆಲಸ ಮಾಡುತ್ತಿರಲಿಲ್ಲ ಎಂಬುದು ಯಕ್ಷಪ್ರಶ್ನೆಯಾಗಿದೆ.



ಮಾನ್ಯ ಲೋಕಾಯುಕ್ತರಾದ ಶ್ರೀ ವೆಂಕಟಾಚಲರಂಥ ಒಬ್ಬ ವ್ಯಕ್ತಿ ಇಡೀ ರಾಜ್ಯದ ಭ್ರಷ್ಟರಿಗೆ ಸಿಂಹಸ್ವಪ್ನರಾಗಿದ್ದಾರೆ. ಇವರಿಗೆ ಪ್ರತಿಯೊಬ್ಬರೂ ಬೆಂಬಲ ಸೂಚಿಸುವುದಲ್ಲದೆ ಅವರ ಪ್ರಯತ್ನಗಳನ್ನು ಇನ್ನೂ ತೀವ್ರಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಮೇಲೆ ಒತ್ತಡ ತರಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ.

ಬಹುದೊಡ್ಡ ಪ್ರಜಾಪ್ರಭುತ್ವವೆಂಬ ಹೆಗ್ಗಳಿಕೆ ನಮ್ಮದಾದರೂ ಸ್ವಾತಂತ್ರ್ಯ ಹೋರಾಟದ ಮಹತ್ವ ಹಾಗೂ ಸಾವಿರಾರು ಜನರ ತ್ಯಾಗ ಬಲಿದಾನಗಳ ಬಗ್ಗೆ ಅರಿವು ಇಲ್ಲ. ಈ ಬಗ್ಗೆ ನಮ್ಮ ಜನತೆಗೆ ತಿಳುವಳಿಕೆ ನೀಡಬೇಕಾದುದು ಬಹಳ ಅಗತ್ಯ. ನಮ್ಮಲ್ಲಿ ಶಿಸ್ತು ಇಲ್ಲದಾಗ ಬೇರೊಬ್ಬರು ನಮ್ಮ ಮೇಲೆ ಶಿಸ್ತನ್ನು ಹೇರಲೇಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಲೋಕಾಯುಕ್ತರ ಪಾತ್ರ ಬಹಳ ಪ್ರಾಮುಖ್ಯವಾದುದು. ಏಕೆಂದರೆ, ಸ್ವಾತಂತ್ರ್ಯವೆಂದರೆ ತಾವು ಏನು ಮಾಡಲೂ ಸ್ವಾತಂತ್ರ್ಯವಿದೆಯೆಂದು ಕೆಲವರು ಭಾವಿಸಿದಂತಿದೆ. ಆತ್ಮಸಾಕ್ಷಿಯ ಭಯವಿಲ್ಲದಂತಹವರಿಗೆ, ಲೋಕಾಯುಕ್ತರು ಶಿಸ್ತನ್ನು, ಪ್ರಾಮಾಣಿಕತೆಯನ್ನು ತಿಳಿಸಿಕೊಡಲೇಬೇಕಾಗುತ್ತದೆ. ತಪ್ಪಿತಸ್ಥರನ್ನು ನಿರ್ದಾಕ್ಷಿಣ್ಯವಾಗಿ ಶಿಕ್ಷಿಸಲೇಬೇಕು.

ರಾಜಕಾರಣಿಗಳಿಂದ ಹಿಡಿದು ಒಬ್ಬ ಕೆಪಿಟಿಸಿಎಲ್ ಲೈನ್‌ಮನ್‌ವರೆಗೆ, ವಿವಿಧ ಇಲಾಖೆಗಳ ಅಧಿಕಾರಿಗಳಿಂದ ಹಿಡಿದು ಅಲ್ಲಿನ ಅಟೆಂಡರ್‌ವರೆಗೆ ಮಾಹಿತಿಯನ್ನು ಸಂಗ್ರಹಿಸಿ ನೋಡಿದರೆ ಬಹಳಷ್ಟು ಮಂದಿ ಲಂಚಕೋರರೇ. ಕಡೆಗೆ ಎಲ್ಲಿಯವರೆಗೆ ಈ ಲಂಚದ ಹಾವಳಿಯಿದೆಯೆಂದರೆ ಸ್ಮಶಾನದಲ್ಲಿ ಅಲ್ಲಿಯ ಮೇಲ್ವಿಚಾರಕನಿಗೆ ಲಂಚ ಕೊಡದಿದ್ದರೆ ಹೆಣ ಸುಡಲೂ ಸಹ ತೊಂದರೆಗಳನ್ನೊಡ್ಡುತ್ತಾನೆ. ಹಾಗೆಂದ ಮಾತ್ರಕ್ಕೆ ಎಲ್ಲರೂ ಲಂಚಕೋರರಲ್ಲ, ಪ್ರಾಮಾಣಿಕ ಅಧಿಕಾರಿಗಳಿದ್ದಾರೆ, ನಿಜ. ಆದರೆ ಅಂಥವರು ಎಲ್ಲಿಯೋ ಕೊಚ್ಚಿಹೋಗಿರುತ್ತಾರೆ.

ಲಂಚದ ಪ್ರಭಾವವೆಷ್ಟಾಗಿದೆಯೆಂದರೆ ಭಾವಿ ಅಳಿಯ ಸರ್ಕಾರಿ ನೌಕರನಾಗಿದ್ದರೆ ಅವನ ಪೂರ್ವಾಪರ ವಿಚಾರಿಸುವಾಗ ಆತನ ಸಂಬಳವೆಷ್ಟು, ಗಿಂಬಳವೆಷ್ಟು ಮತ್ತು ಯಾವ ಇಲಾಖೆಯಲ್ಲಿದ್ದರೆ ಗಿಂಬಳಕ್ಕೆ ಅನುಕೂಲವೆಂದು ಹೇಳುವ ಮಟ್ಟಕ್ಕೆ ಲಂಚದ ಖ್ಯಾತಿ ಬೆಳೆದು ನಿಂತಿದೆ.

ಇತ್ತೀಚೆಗೆ ಲೋಕಾಯುಕ್ತರು ಹಲವಾರು ಇಲಾಖೆಗಳ ಕಛೇರಿಗಳಿಗೆ ಹಠಾತ್ ಭೇಟಿ ನೀಡಿ ಲಂಚದ ವ್ಯಾಪ್ತಿಯನ್ನು ಬಯಲಿಗೆಳೆದಿದ್ದಾರೆ. (ಉದಾ: ಆರ್.ಟಿ.ಓ., ಸಬ್ ರಿಜಿಸ್ಟ್ರಾರ್ ಆಫೀಸ್, ಆಸ್ಪತ್ರೆಗಳು, ಕಂದಾಯ ಇಲಾಖೆ - ಇವುಗಳಲ್ಲದೆ ಇತ್ತೀಚೆಗೆ ನಡೆದ ನಗರಸಭೆಗಳ ಮೇಲಿನ ಧಾಳಿ). ಅವರು ಪತ್ತೆ ಮಾಡಿರುವ ಲಂಚದ ಪ್ರಕರಣಗಳನ್ನು ಹಾಗೂ ರೆಡ್‌ಹ್ಯಾಂಡಾಗಿ ಹಿಡಿದಿರುವ ಭ್ರಷ್ಟ ಅಧಿಕಾರಿಗಳನ್ನು ಯಾವುದೇ ರಾಜಕೀಯ ಅಥವಾ ಹಣದ ಪ್ರಭಾವಕ್ಕೆ ಮಣಿಯದೆ ಕಠಿಣ ಶಿಕ್ಷೆ ನೀಡಿದಲ್ಲಿ ನಿಜಕ್ಕೂ ಲೋಕಾಯುಕ್ತರ ಶ್ರಮ ಸಾರ್ಥಕವಾಗುತ್ತದೆ.

ಒಟ್ಟಾರೆ ಹೇಳುವುದಾದರೆ, ರಾಜ್ಯದ ಮುಖ್ಯ ಲೋಕಾಯುಕ್ತರ ನೇತೃತ್ವದಲ್ಲಿ ಅವರಷ್ಟೇ ಪ್ರಾಮಾಣಿಕರಾಗಿರುವ ಇಲಾಖಾವಾರು ಲೋಕಾಯುಕ್ತರನ್ನು ಲಂಚದ ಆಗರಗಳಾಗಿರುವ ಇಲಾಖೆಗಳಲ್ಲಿ ನೇಮಿಸಿ ಕರ್ನಾಟಕ ಜನತೆಯನ್ನು ಲಂಚದ ಹಾವಳಿಯಿಂದ ತಪ್ಪಿಸಿ, ಅಂದಿನ ಮಾದರಿ ಸಂಸ್ಥಾನ ಮೈಸೂರು ಎಂದು ಖ್ಯಾತವಾಗಿದ್ದ ನಮ್ಮ ರಾಜ್ಯ ಈಗ ಮಾದರಿ ಕರ್ನಾಟಕವೆಂಬ ಖ್ಯಾತಿಗಳಿಸುವ ನಿಟ್ಟಿನಲ್ಲಿ ರಾಜ್ಯ ಸರಕಾರ ಶ್ರಮಿಸಬೇಕಾಗಿದೆ. ಈ ಖ್ಯಾತಿಯನ್ನು ಗಳಿಸಬೇಕಾದರೆ ಸರ್ಕಾರವೊಂದೇ ಅಲ್ಲದೆ ಜನತೆಯೂ ಪ್ರಾಮಾಣಿಕವಾಗಿ ದುಡಿದರೆ ಮಾತ್ರ ಸಾಧ್ಯವೆಂಬುದನ್ನು ನಾವೆಲ್ಲರೂ ಮನಗಾಣಬೇಕು.

ನಮ್ಮಲ್ಲಿರುವ ಕಾನೂನು ಬಿಗಿಯಿಲ್ಲದಿರುವ ಕಾರಣ ಭ್ರಷ್ಟರು ಬೆಳಗುತ್ತಿದ್ದರೆ, ನಿಷ್ಠರು, ಪ್ರಾಮಾಣಿಕರು ಕ್ಷೀಣಿಸುತ್ತಿದ್ದಾರೆ. ಆದ್ದರಿಂದ ಕಾನೂನಿನ ಚೌಕಟ್ಟನ್ನು ಬಿಗಿಗೊಳಿಸಿ ಆಧಾರಸಹಿತ ಹಿಡಿದ ಭ್ರಷ್ಟರನ್ನು ಯಾವುದೇ ಒತ್ತಾಯಕ್ಕೆ ಮಣಿಯದೆ ಶಿಕ್ಷಿಸಿದರೆ ಪರಿಸ್ಥಿತಿ ಸುಧಾರಿಸಬಹುದೆಂಬುದು ನನ್ನ ಅನಿಸಿಕೆ.

- *ಕೆ. ಶ್ರೀನಿವಾಸಮೂರ್ತಿ*

# ಅಗ್ನಿಪರ್ವತಗಳಿಂದಾಗುವ ಅನಾಹುತಗಳು

**ನ**ಮ್ಮ ಭೂಮಿಯ ವಿಸ್ತೀರ್ಣ ಇದ್ದಷ್ಟೇ ಇದ್ದರೂ ವಿಶ್ವದ ಜನಸಂಖ್ಯೆ ಮಾತ್ರ ದಿನೇ ದಿನೇ ಭೂತಾಕಾರವಾಗಿ ಬೆಳೆಯುತ್ತಿದೆ. ಇಂದು ವಿಶ್ವದ ಜನಸಂಖ್ಯೆ ೬೦೦ ಕೋಟಿಗೂ ಮೀರಿ ಬೆಳೆದಿದೆ. ಜನಸಂಖ್ಯಾ ಸ್ಫೋಟದಿಂದಾಗಿ ನಾನಾ ರೀತಿಯ ಸಮಸ್ಯೆಗಳು ತಲೆಯೆತ್ತುತ್ತಿವೆ.

ಸತತವಾಗಿ ಬೇಸಾಯ ಮಾಡುವುದರಿಂದ ಭೂಮಿಯ ಫಲವತ್ತತೆ ಕಡಿಮೆಯಾಗುವುದು; ಈ ಕಾರಣದಿಂದಾಗಿ ಜನ ಫಲವತ್ತಾದ ಪ್ರದೇಶವಿರುವ ಅಗ್ನಿಪರ್ವತ ಸುತ್ತಮುತ್ತ ವಾಸಿಸಲು ಇಷ್ಟಪಡುತ್ತಾರೆ.

ಅಮೆರಿಕದ ಭೂಗರ್ಭ ಶಾಸ್ತ್ರಜ್ಞನಾದ ಡಾ॥ ಟಾಮ್ ಕಸ್ರೆಡೆವಲ್‌ರವರ ಪ್ರಕಾರ ವಿಶ್ವದಲ್ಲಿಂದು ೧೫೦೦ ಜೀವಂತ ಅಗ್ನಿಪರ್ವತಗಳಿವೆ. ಅವುಗಳಲ್ಲಿ ಸುಮಾರು ಒಂದು ನೂರಕ್ಕಿಂತಲೂ ಮೇಲ್ಪಟ್ಟ ಅಗ್ನಿ ಪರ್ವತಗಳು ಸಾಗರದ ತಳಭಾಗದಲ್ಲಿವೆ.

ಪ್ರಪಂಚದಲ್ಲಿಂದು ವೇಗವಾಗಿ ಬೆಳೆಯುತ್ತಿರುವ 'ಮೆಕ್ಸಿಕೊ' ನಗರದ ಸಮೀಪದಲ್ಲಿ ಇರುವ 'ಪೋಪೊಕ್ಯಾಟೇಪಾಲ್' ಎನ್ನುವ ಅಗ್ನಿಪರ್ವತ ಯಾವಾಗಲೂ ಬಿಸಿ ಬೂದಿ, ವಿಷಪೂರಿತ ಅನಿಲವನ್ನು ೨೦ ದಶಲಕ್ಷ ಮನೆಗಳತ್ತ ಉಗುಳುತ್ತಿದೆ.

ಅಮೆರಿಕ ಸಂಯುಕ್ತ ಸಂಸ್ಥಾನದ 'ಸೀಟಲ್' ಮತ್ತು 'ಟಕೋಮ'ದ ಜನ 'ಮೌಂಟ್ ರೈನೀಯರ್' ನೆರಳಿನಲ್ಲಿ ವಾಸಿಸುತ್ತಿದ್ದಾರೆ. ಅದೊಂದು ೧೪,೦೦೦ ಅಡಿ ಎತ್ತರವಿರುವ ಅಗ್ನಿ ಪರ್ವತ. ಅದರಿಂದ ಹೊರಹೊಮ್ಮುತ್ತಿರುವ ಕೆಸರು ಆ ನಗರಗಳ ಅನೇಕ ಭಾಗಗಳನ್ನು ನಾಶಪಡಿಸುತ್ತಿದೆ.

ಅಗ್ನಿಪರ್ವತಗಳ ಸುತ್ತಮುತ್ತಲಿನ ಪ್ರದೇಶಗಳ ಮಣ್ಣು ಹೆಚ್ಚು ಫಲವತ್ತತೆಯಿಂದಾಗಿ ಶತಶತಮಾನಗಳಿಂದ ಬಹಳಷ್ಟು ಜನರನ್ನು ಆಕರ್ಷಿಸುತ್ತಿದೆ; ಅಲ್ಲದೆ ಹಳೆಯ ಅಗ್ನಿ ಪರ್ವತಗಳಿಂದ ಹರಿದುಬಂದ ಮಣ್ಣು ಜನರು ನೆಲೆಸಲು ಅನುಕೂಲವಾಗುವಂತೆ ಸುತ್ತಮುತ್ತಲಿನ ಪ್ರದೇಶವನ್ನು ನುಣುಪಾಗಿಯೂ, ಗಟ್ಟಿಯಾಗಿಯೂ ಮಾಡಿದೆ. ಅಗ್ನಿ ಪರ್ವತ ತಜ್ಞ ಡಾ॥ ಗ್ರ್ಯಾಂಟ್ ಹಕೀನ್‌ರವರ ಪ್ರಕಾರ ೧೯೮೫, ನವೆಂಬರ್ ೧೩ರಂದು ಹಿಮದ ಹೊದಿಕೆ ಹೊತ್ತ 'ಕೊಲಂಬಿಯಾ ಪರ್ವತ' ಬಿಸಿ ಬೂದಿ ಮತ್ತು ಲಾವಾರಸವನ್ನು ನವಾಡ ಡೆಲ್‌ರೋಜ್ ಪಟ್ಟಣದ ಮೇಲೆ ಉಗುಳುವುದೆಂದು ವಿಜ್ಞಾನಿಗಳು 'ಎಚ್ಚರಿಕೆಯ ಗಂಟೆ' ಬಾರಿಸಿದರು. ಅದರಂತೆ ಲಾವಾರಸ ೩೦ರಿಂದ ೪೦ ಮೈಲುಗಳ ದೂರವಿರುವ ಹಳ್ಳಿಗಳತ್ತ ಹರಿಯತೊಡಗಿತು. ಆ ಹಳ್ಳಿಗಳ ನಿವಾಸಿಗಳಿಗೆ ಅದರ ಬಗ್ಗೆ ಮತ್ತೊಮ್ಮೆ ಎಚ್ಚರಿಕೆ ನೀಡಲಾಯಿತು. ಆದರೆ ಉದಾಸೀನತೆಯಿಂದ ಜನ 'ಅಪಾಯ ಬಂದಾಗ, ೧೫೦ ಅಡಿ ದೂರದಲ್ಲಿರುವ ಬೆಟ್ಟದ ತಪ್ಪಲಿಗೆ ಹೋದರಾಯಿತು' ಎಂದು ರಾಗ ಎಳೆದರು. ಪರಿಣಾಮವೇನಾಯಿತು ಗೊತ್ತೆ? ಅದೇ ದಿನ ರಾತ್ರಿ ಅಗ್ನಿಪರ್ವತದ ದಾಳಿಗೆ ೨೬,೦೦೦ ಜನ ಬಲಿಯಾದರು. ಆದಕಾರಣ ಅಗ್ನಿಪರ್ವತಗಳು ಸ್ಫೋಟಿಸಲು ಪ್ರಾರಂಭವಾದಾಗ, ಆ ಪ್ರದೇಶದ ಸುತ್ತಮುತ್ತಲಿನ ಜನ ಸುರಕ್ಷಿತ ಸ್ಥಳಕ್ಕೆ ಹೋಗುವುದನ್ನು ಮರೆಯಬಾರದು.

ಪ್ರಪಂಚದಲ್ಲಿ ಮುಖ್ಯವಾಗಿ ಹದಿನೈದು ಅಗ್ನಿಪರ್ವತಗಳನ್ನು ಕೂಲಂಕಶವಾಗಿ ಅಧ್ಯಯನ ಮಾಡಲು ವಿಜ್ಞಾನಿಗಳು ನಿರ್ಧರಿಸಿದ್ದಾರೆ. ಆ ಪರ್ವತ ಪ್ರದೇಶಗಳಲ್ಲಿ ಹೆಚ್ಚು ಜನಸಂಖ್ಯೆಯಿದೆ. ಅವು ಯಾವಾಗ ಬೇಕಾದರೂ ಸ್ಫೋಟಿಸಬಹುದು. ಆ ಸ್ಥಳಗಳಲ್ಲಿ ಅನೇಕ ಕಾರ್ಯಾಗಾರಗಳನ್ನು ನಡೆಸಲಾಗಿದೆ, ಅಪಾಯ ಕಂಡುಬಂದಾಗ ಜನರಿಗೆ ರಕ್ಷಣೆಯೊದಗಿಸುವ ಅನುಕೂಲವನ್ನೂ ಸಹ ಏರ್ಪಡಿಸಲಾಗಿದೆ.



*ಹೊಗೆಯುಗುಳುತ್ತಿರುವ ಹವಾಯಿ ದ್ವೀಪದ ಕಿಲೌಯಿಯ ಜ್ವಾಲಾಮುಖಿ*

ಈಗ ಹೊಸ ಸಾಧನ ಸಲಕರಣೆಗಳ ಮೂಲಕ ಯಾವಾಗ ಒಂದು ಅಗ್ನಿಪರ್ವತ ಸ್ಫೋಟಿಸುವುದು ಎನ್ನುವುದನ್ನು ಪತ್ತೆಹಚ್ಚಲು ಸಾಧ್ಯ.

ತಟ್ಟೆಯಾಕಾರದ ಚಪ್ಪಡಿಗಳ ಬಲದಿಂದಾಗಿ ಅಗ್ನಿ ಪರ್ವತಗಳುಂಟಾಗುವುವು. ಅಂದರೆ ಭೂಮಿಯ ಪದರುಗಳ ದೊಡ್ಡ ಚಪ್ಪಡಿಗಳು ಆಳವಾಗಿ ಒಳಭಾಗಕ್ಕೆ ನೂಕಲ್ಪಟ್ಟು ಕರಗತೊಡಗುವುವು. ಆ ರೀತಿ ಕರಗಿದ ಬಂಡೆ ಹಗುರವಾಗಿ ಮೇಲಕ್ಕೆ ದೂಡಲ್ಪಟ್ಟು ದುರ್ಬಲವಾದ ಸ್ಥಳದ ಮೂಲಕ ಹೊರಕ್ಕೆ ಚಿಮ್ಮುವುದು. ಅದನ್ನೇ ನಾವು 'ಜ್ವಾಲಾಮುಖಿ' ಎನ್ನುತ್ತೇವೆ.

ಬಹಳಷ್ಟು ಜ್ವಾಲಾಮುಖಿಗಳು ಸಾವಿರಾರು ವರ್ಷಗಳಿಂದ ಶಾಂತವಾಗಿದ್ದು, ಕೆಲವೊಮ್ಮೆ ಮಾತ್ರ ಸ್ಫೋಟಿಸಿ, ಮತ್ತೆ ನಿದ್ರೆಹೋಗುವವು.

ಜ್ವಾಲಾಮುಖಿಗಳು ಸ್ಫೋಟಿಸಿದಾಗ, ಹೊರಹಾಕುವ ಬೂದಿ, ಲಾವಾರಸ ಮತ್ತು ಇತರೇ ವಸ್ತುಗಳ ಪ್ರಮಾಣವನ್ನು ಕ್ಯೂಬಿಕ್ ಮೀಟರ್‌ನಲ್ಲಿ ಲೆಕ್ಕ ಹಾಕುತ್ತಾರೆ.

೧೯೮೦ರಲ್ಲಿ ವಾಷಿಂಗ್‌ಟನ್ ಸ್ಟೇಟ್‌ನ 'ಮೌಂಟ್ ಹೆಲೆನ್' ಅಗ್ನಿಪರ್ವತವು ಸ್ಫೋಟಿಸಿದಾಗ, ಅದರ ಗ್ರಾಮಾಂತರ ಪ್ರದೇಶವು ನಾಶವಾಯಿತು.

ವ್ಯೋಮಿಂಗಿನ ಎಲ್ಲೋ ಸ್ಟೋನ್‌ನಲ್ಲಿರುವ ಅಗ್ನಿ ಪರ್ವತ ಎರಡು ದಶಲಕ್ಷ ವರ್ಷಗಳಿಂದ ಸುಮಾರು ೩,೮೦೦ ಕ್ಯೂಬಿಕ್ ಕಿ. ಮೀ.ನಷ್ಟು ಬೂದಿ ಮತ್ತು ಕಲ್ಲುಗಳನ್ನು ಹೊರಹಾಕಿದೆ.

ಸುಮಾರು ಹದಿನೈದು ದಶಕಗಳ ಅಗ್ನಿಪರ್ವತಗಳನ್ನು ಅಭ್ಯಸಿಸಿದ ಡಾ॥ ನ್ಯೂಹಾಲ್‌ರವರು ಅಗ್ನಿ ಪರ್ವತಗಳ ಬಗ್ಗೆ ಸಾರ ಸಂಗ್ರಹವನ್ನು ನಮ್ಮ ಮುಂದಿಟ್ಟಿದ್ದಾರೆ.

ಅಮೆರಿಕ ಸಂಯುಕ್ತ ಸಂಸ್ಥಾನದ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಭೂಗರ್ಭ ಶಾಸ್ತ್ರದ ಪ್ರೊಫೆಸರ್ ಆದ ಡಾ॥ ರಿಚರ್ಡ್ ಫಿಶರ್‌ರವರ ಪ್ರಕಾರ, ಒಂದು ಅಗ್ನಿ ಪರ್ವತ ಅತ್ಯಂತ ನಷ್ಟವನ್ನುಂಟುಮಾಡಿದರೆ, ಅದು ಮತ್ತೊಮ್ಮೆ ಅಂತಹ ನಷ್ಟವನ್ನುಂಟು ಮಾಡುವುದು.

ಅನೇಕ ವಿಜ್ಞಾನಿಗಳು ಅಗ್ನಿ ಪರ್ವತಗಳು ಆಗಾಗ ಉಂಟು ಮಾಡುವ ಭೂಕಂಪಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ; ಅಂತಹ ಭೂಕಂಪಗಳು ಹೆಚ್ಚು ಶಬ್ದ ಮಾಡುವುದಲ್ಲದೆ, ಕರಗಲ್ಪಟ್ಟ ಕಲ್ಲುಗಳು ಹೊರಕ್ಕೆ ಚಿಮ್ಮತೊಡಗುವವು.

ಇನ್ನು ಅಗ್ನಿಪರ್ವತಗಳ ಸ್ಫೋಟದಿಂದಾಗಿ ಉಂಟಾಗುವ ಸಾವು ನೋವುಗಳು, ಲಾವಾರಸ ಅಥವಾ ನದಿಗಳು ಹೊತ್ತು ತರುವ ಕೆಸರಿನಿಂದಾಗಿ ಅಲ್ಲ ; ಬಿಸಿ ಅನಿಲದಿಂದ ಉಂಟಾದ ಮೋಡಗಳು ಮತ್ತು ಬಿಸಿ ಬೂದಿಯು ಸುಮಾರು ೬೦ ಮೈಲುಗಳವರೆಗಿನ ಪ್ರದೇಶಗಳನ್ನು ಸಂಪೂರ್ಣವಾಗಿ ನಾಶಪಡಿಸುತ್ತವೆ. ಇಂತಹ ಅಗ್ನಿಯುತವಾದ ವಸ್ತುಗಳು ಹತ್ತು ಅಡಿ ದಪ್ಪದ ಕಲ್ಲಿನ ಗೋಡೆಗಳನ್ನೂ ಸಹ ಉರುಳಿಸಿ ಎರಡೇ ನಿಮಿಷದಲ್ಲಿ ಸಾವಿರಾರು ಜನರನ್ನು ಬಲಿತೆಗೆದುಕೊಳ್ಳುತ್ತವೆ.

ಆದಕಾರಣ ಅಗ್ನಿಪರ್ವತಗಳ ಬಗ್ಗೆ ವಿಶೇಷವಾದ ಮಾಹಿತಿ ಮತ್ತು ಶಿಕ್ಷಣವನ್ನು ಜನರಿಗೆ ನೀಡುವುದರ ಮೂಲಕ ಅನೇಕ ರೀತಿಯ ಅನಾಹುತಗಳಿಂದ ಅವರನ್ನು ಕಾಪಾಡಬಹುದು.

(ವಿವಿಧ ಮೂಲಗಳಿಂದ)

**ಎಚ್. ಗವಿಸಿದ್ದಯ್ಯ**
ಅಧ್ಯಾಪಕರು, ಗ್ರಾಮಾಂತರ ಪ್ರೌಢಶಾಲೆ, ಆವತಿ,
ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

# ವಿಕೇಂದ್ರೀಕರಣದಲ್ಲಿ ಗ್ರಾಮಸಭೆ

ಸಂವಿಧಾನದ ೭೩ನೇ ತಿದ್ದುಪಡಿಯು ಪಂಚಾಯತ್ ರಾಜ್ ಸಂಸ್ಥೆಗಳನ್ನು ಸಂವಿಧಾನಿಕಗೊಳಿಸಿದೆ. ಆಯಾ ರಾಜ್ಯಗಳು ಈ ಕಾಯ್ದೆಯನ್ನು ಅನುಸರಿಸಿ ತಮ್ಮ ತಮ್ಮ ರಾಜ್ಯಗಳಲ್ಲಿ ಪ್ರಜಾಪ್ರಭುತ್ವ ವಿಕೇಂದ್ರೀಕರಣಕ್ಕೆ ಹಾದಿಯನ್ನು ಸುಗಮಗೊಳಿಸಿವೆ. ಗ್ರಾಮ ಪಂಚಾಯತ್‌ಗಳು ಸ್ಥಳೀಯ ಜನಸಮುದಾಯಗಳ ಪ್ರತಿನಿಧಿ ಸಂಸ್ಥೆಗಳಾಗಿದ್ದು ಜನರಿಗೆ ಸ್ಥಳೀಯ ಪ್ರಜಾಪ್ರಭುತ್ವ ಪ್ರಕ್ರಿಯೆಯ ವಿಸ್ತರಣೆಯನ್ನು ಒದಗಿಸುತ್ತವೆ. ಹೀಗಾಗಿ ವಿಕೇಂದ್ರೀಕರಣವು ಪ್ರಸ್ತುತ ಸಮಾಜದ ಸಂದರ್ಭದಲ್ಲಿ ಹೆಚ್ಚಿನ ಮಹತ್ವ ಪಡೆದುಕೊಂಡಿದೆ. ನಮ್ಮ ಸಾಮಾಜಿಕ ವ್ಯವಸ್ಥೆಯ ಸಮರ್ಥ ಮತ್ತು ದಕ್ಷ ನಿರ್ವಹಣೆಗೆ ವಿಕೇಂದ್ರೀಕರಣ ಅವಶ್ಯಕವಾಗಿದೆ. ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಕುರಿತಂತೆ ಅನೇಕ ಬದಲಾವಣೆಗಳಾಗುತ್ತಿವೆ. ಇಂದು 'ಗ್ಲೋಬಲ್ ವಿಲೇಜ್' ಬಗ್ಗೆ ಚರ್ಚೆ ನಡೆಯುತ್ತಿದೆ. ದೇಶವು ಜಾಗತೀಕರಣದ ಪ್ರಕ್ರಿಯೆಗೆ ಒಳಗಾಗಿದೆ. ಈ ಸಂದರ್ಭದೊಳಗೆ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಗ್ರಾಮಸಭೆಯ ಮಹತ್ವ ಕುರಿತು ಪ್ರಸ್ತುತ ಲೇಖನ ಬೆಳಕು ಚೆಲ್ಲಲಿದೆ.

೧೯೯೦ರಿಂದ ಈಚೆಗೆ ನಮ್ಮ ದೇಶವು ತೀವ್ರವಾಗಿ ನಡೆದಿರುವ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಪ್ರಕ್ರಿಯೆಗೆ ಒಳಗಾಗಿದೆ. ಇಡೀ ದೇಶವು ಇಂದು ವಿಶ್ವಗ್ರಾಮದಲ್ಲಿ ಸೇರಿಕೊಳ್ಳುವ ಕಾಲ ಬಂದೊದಗಿದೆ. ಈ ದಿಶೆಯಲ್ಲಿ ಜನತಂತ್ರ ವಿಕೇಂದ್ರೀಕರಣ ವ್ಯಾಪಕವಾಗಿ ರೂಪಗೊಂಡಿದೆಯೇ, ಇದನ್ನು ರೂಪಿಸುವಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ಅದರಲ್ಲೂ ಮುಖ್ಯವಾಗಿ ಗ್ರಾಮಸಭೆಗಳು ಎಷ್ಟರ ಮಟ್ಟಿಗೆ ಕಾರ್ಯೋನ್ಮುಖವಾಗಿವೆ ಎಂದು ತಿಳಿಯುವುದು ಮುಖ್ಯವಾಗಿದೆ. ಏಕೆಂದರೆ ಗ್ರಾಮಸಭೆಗಳ ಮೂಲಕ ಅಭಿವೃದ್ಧಿಯ ಫಲಗಳು ಜನತೆಗೆ ನೇರವಾಗಿ ತಲುಪುವುದರಿಂದ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಗ್ರಾಮಸಭೆಯು ಅತ್ಯಂತ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಇದು ತಳಮಟ್ಟದಲ್ಲಿ ನೇರ ಪ್ರಜಾಪ್ರಭುತ್ವದ ಚೌಕಟ್ಟನ್ನು ಹೊಂದಿದೆ. ಆದುದರಿಂದ ವಿಕೇಂದ್ರೀಕರಣದ ಗುಣಮಟ್ಟವು ಗ್ರಾಮಸಭೆಯ ಗುಣಮಟ್ಟವನ್ನು ಅವಲಂಬಿಸಿರುತ್ತದೆ.

ಪ್ರಾಚೀನ ಕಾಲದಿಂದಲೂ ಗ್ರಾಮಪಂಚಾಯತ್ ವ್ಯವಸ್ಥೆಯು ಸಾಂಪ್ರದಾಯಿಕವಾಗಿ ಬೆಳೆದುಕೊಂಡು ಬಂದಿದೆ. ಈ ಹಿಂದೆಯೆ ಮನು ತನ್ನ ಮನುಸ್ಮೃತಿಯಲ್ಲಿ ಸ್ಥಾನಿಕ ಸರಕಾರಗಳ ಮೂಲ ಘಟಕ ಗ್ರಾಮವೇ ಆಗಿತ್ತೆಂದೂ, ಕೆ. ಪಿ. ಜಯಸ್ವಾಲ್‌ರವರು ತಮ್ಮ ''ಹಿಂದು ಪಾಲಿಟಿ'' ಎಂಬ ಗ್ರಂಥದಲ್ಲಿ ಸಭೆ-ಸಮಿತಿಗಳು ಗ್ರಾಮ ಮಟ್ಟದಲ್ಲಿ ಇದ್ದವೆಂದೂ ಮತ್ತು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಮತ್ತು ಡಿ. ಡಿ. ಕೊಸಾಂಬಿಯವರು ತಮ್ಮ ಕೃತಿಗಳಲ್ಲಿ ಸಭಾ, ಸಮಿತಿ ಮತ್ತು ಜನಪದ ಈ ವ್ಯವಸ್ಥೆಗಳು ಪ್ರಾಚೀನ ಭಾರತದಲ್ಲಿದ್ದವೆಂದೂ ಹೇಳಿದ್ದಾರೆ. ಸ್ವದೇಶಿ ಚಳುವಳಿಯಲ್ಲಿ ಗ್ರಾಮೀಣ ಸಂಸ್ಥೆಗಳು ಅಭ್ಯುದಯದ ಒಂದು ಭಾಗವಾಗಿತ್ತು. ೧೯೧೬ರಲ್ಲಿ ಗಾಂಧೀಜಿಯವರು ಸ್ವದೇಶಿ ಬಗ್ಗೆ ಪ್ರಸ್ತಾಪಿಸುತ್ತ ಗ್ರಾಮ ಪಂಚಾಯತಿಯು ತಳಮಟ್ಟದ ವ್ಯವಸ್ಥೆಯಲ್ಲಿ ಜೀವಂತ ಘಟಕವಾಗಿದ್ದು ಸ್ಥಳೀಯ ಸಂಸ್ಥೆಗಳು ಅವಶ್ಯಕವಾದ ಅಧಿಕಾರವನ್ನು ಹೊಂದಿರಬೇಕು ಎಂದು ಹೇಳಿದ್ದಾರೆ. ಸ್ವಾತಂತ್ರ್ಯ ನಂತರದ ಭಾರತವು ಸಾಂಪ್ರದಾಯಕ ಸಮಾಜದ ಹಲವಾರು ದೋಷಗಳನ್ನು ನಿವಾರಿಸಿ ನವಸಮಾಜ ನಿರ್ಮಾಣಕ್ಕಾಗಿ ಆಧುನೀಕರಣ ಪ್ರಕ್ರಿಯೆಯನ್ನು ಕೆಳಮಟ್ಟದ ಸಂಸ್ಥೆಗಳಲ್ಲಿ ಪ್ರಾರಂಭಿಸಿತು. ಆಧುನೀಕರಣ ಬಲಗೊಳ್ಳುತ್ತಿರುವಂತೆ ಈ ಸಂಸ್ಥೆಗಳನ್ನು ಪುನರ್ ಸ್ಥಾಪಿಸುವ ಮತ್ತು ಪರೀಶಿಲಿಸುವ ಅಗತ್ಯ ಕಂಡುಬಂದಿತು.

೧೯೫೨ರಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದಿಂದ ತಾಲ್ಲೂಕ್ ಅಭಿವೃದ್ಧಿ ಆಡಳಿತದ ಕೇಂದ್ರ

**ಎಂ. ಯರಿಸ್ವಾಮಿ**

ವಾಯಿತು. ನೆಹರೂ ಅವರ ಪ್ರಕಾರ ಸ್ಥಳೀಯ ಸಂಸ್ಥೆಗಳು ನೈಜ ಪ್ರಜಾಪ್ರಭುತ್ವದ ವ್ಯವಸ್ಥೆಯ ತಳಹದಿಯಾಗಿವೆ. ಜನರು ಪ್ರಜಾಪ್ರಭುತ್ವವನ್ನು ಮೇಲಿನ ಸ್ತರದಲ್ಲಿ ಯೋಚಿಸಿದಷ್ಟು ತಳಮಟ್ಟದಲ್ಲಿ ಚಿಂತಿಸುವುದಿಲ್ಲ. ತಳಮಟ್ಟದಲ್ಲಿ ಪ್ರಜಾಪ್ರಭುತ್ವ ನೆಲೆ ಭದ್ರವಾಗದ ಹೊರತು ಮೇಲಿನ ಸ್ತರವು ಯಶಸ್ವಿಯಾಗದು ಎಂದು ಹೇಳುತ್ತಾರೆ.

ಜಯಪ್ರಕಾಶ್ ನಾರಾಯಣ್‌ರವರ ಪ್ರಕಾರ, ಹಳ್ಳಿಯಿಂದ ಡೆಲ್ಲಿಯವರೆಗೆ ಪ್ರತಿನಿಧಿ ಸರ್ಕಾರವಿದ್ದರೇ ಸಾಲದು; ಒಂದು ಹಂತದಲ್ಲಾದರೂ ನೇರ ಸರಕಾರ, ನೇರ ಪ್ರಜಾಪ್ರಭುತ್ವ ಇರಬೇಕು; ಪಂಚಾಯತ್ ಮತ್ತು ಗ್ರಾಮಸಭೆಗಳ ನಡುವಿನ ಸಂಬಂಧವು ಮಂತ್ರಿಮಂಡಲ ಮತ್ತು ಸದನದಂತಿರಬೇಕು.

ಸ್ವಿಟ್ಜರ್‌ಲ್ಯಾಂಡ್‌ನ ಕೆಲವು ಪುಟ್ಟ ಕ್ಯಾಂಟನ್‌ಗಳಲ್ಲಿ ನೇರ ಪ್ರಜಾಪ್ರಭುತ್ವ ವ್ಯವಸ್ಥೆಯು ಜನಾಭಿಪ್ರಾಯ ಮತ್ತು ಜನಮತಗಣನೆಯ ಆಧಾರದಂತೆ ನಡೆಯುತ್ತದೆ.




ಹಾಗೆಯೇ ನಮ್ಮ ದೇಶದಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಇರುವ ಗ್ರಾಮಸಭೆಯು ನೇರ ಪ್ರಜಾಪ್ರಭುತ್ವದ ಸಾಧನವಾಗಿದ್ದು ಗ್ರಾಮಪಂಚಾಯತಿ ಮಾದರಿ ಕಾರ್ಯಾಂಗವಾದರೆ, ಗ್ರಾಮಸಭೆಯು ಮಾದರಿ ಶಾಸಂಕಾಗವಾಗಿದೆ. ೧೯೮೩ರ ಕಾಯ್ದೆಯು ಗ್ರಾಮಸಭೆಯ ಪರಿಕಲ್ಪನೆಯನ್ನು ಮೊದಲು ಪರಿಚಯಿಸಿತು. ಅದು ಗ್ರಾಮಸಭೆಗಳಿಗೆ ನಿಗದಿತ ಕಾರ್ಯಸೂಚಿ ಯನ್ನು ವಿಧಿಸಿತು. ಹಳ್ಳಿಗಾಗಿ ಅಭಿವೃದ್ಧಿ ಯೋಜನೆಗಳ ತಯಾರಿ ಹಾಗೂ ಕೂಲಿಕಾರರಿಗೆ ಕೆಲಸ ಕಾರ್ಯಕ್ರಮಗಳು ಇದರಲ್ಲಿ ಸೇರಿದವು. ತದನಂತರ ಕೇಂದ್ರದಲ್ಲಿ ಬಂದ ಜನತಾಪಕ್ಷ ಸರ್ಕಾರದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಪುನರ್‌ಸ್ಥಾಪಿಸಿ, ಅಶೋಕ್ ಮೆಹ್ತಾರವರ ಅಧ್ಯಕ್ಷತೆಯಲ್ಲಿ ಎರಡು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೊಳಿಸಿತು. ನಂತರ ಭಾರತ ಸಂವಿಧಾನದ ೭೩ನೇ ತಿದ್ದುಪಡಿಯಿಂದ ಪಂಚಾಯತ್ ರಾಜ್ ಸಂಸ್ಥೆಗಳು ತನ್ನದೇ ಆದ ಸಂವಿಧಾನಿಕ ಮನ್ನಣೆಯನ್ನು ಪಡೆದಿವೆ. ಇದರ ಪ್ರಕಾರ ಪ್ರತಿಯೊಂದು ಗ್ರಾಮ ಪಂಚಾಯತ್ ಸಹ ಗ್ರಾಮಸಭೆಗಳನ್ನು ಕಡ್ಡಾಯವಾಗಿ ನಡೆಸಬೇಕೆಂದು ಶಿಫಾರಸ್ಸು ಮಾಡಿತು. ಹೀಗಾಗಿ ಗ್ರಾಮ ಸಭೆಯು ಶಾಸನಬದ್ಧವಾಗಿದೆ. ಇದರಂತೆ ಪ್ರತಿ ರಾಜ್ಯ ಸರ್ಕಾರವೂ ಪಂಚಾಯತ್ ರಾಜ್ ಕಾಯ್ದೆಯನ್ನು ರೂಪಿಸಿ ಜಾರಿಗೊಳಿಸಿತು.

### ಸೈದ್ಧಾಂತಿಕವಾಗಿ

ಸಂವಿಧಾನದ ೭೩ನೇ ತಿದ್ದುಪಡಿಯಿಂದ ಗ್ರಾಮಸಭೆಯು ಶಾಸನಬದ್ಧವಾಯಿತು. ೧೯೯೩ರ ಅಧಿನಿಯಮದ ೩ನೇ ಪ್ರಕರಣವು ಗ್ರಾಮಸಭೆಯ ವ್ಯಾಪ್ತಿಯನ್ನು ಸೂಕ್ತವಾಗಿ ಸೂಚಿಸಿ ಅದರ ಕಾರ್ಯವೈಖರಿಯನ್ನು ಖಚಿತವಾಗಿ ನಿಗದಿಪಡಿಸಿದೆ. ಕಾಲಕಾಲಕ್ಕೆ ಗ್ರಾಮಸಭೆಗಳು ಸೇರಬೇಕು. ಎರಡು ಸಭೆಗಳ ನಡುವೆ ೬ ತಿಂಗಳ ಅಂತರವಿರಬೇಕು. ಹೀಗೆ ಗ್ರಾಮಸಭೆಗೆ ಆ ಗ್ರಾಮದ ಎಲ್ಲಾ ಮತದಾರರು ಸದಸ್ಯರಾಗಿರುತ್ತಾರೆ. ಗ್ರಾಮೀಣ ಜನತೆಗೆ ಗ್ರಾಮಸಭೆಯ ಮೂಲಕ ಸರ್ಕಾರದ ಅಭಿವೃದ್ಧಿ ಯೋಜನೆಗಳು ನೇರವಾಗಿ ತಲುಪುವ ಕೊಂಡಿಯಂತಿದ್ದು ಈ ವ್ಯವಸ್ಥೆ ತಳಮಟ್ಟದ ಪ್ರಜಾಪ್ರಭುತ್ವ ವ್ಯವಸ್ಥೆಗೆ ದಾರಿಮಾಡಿಕೊಡುತ್ತದೆ. ಗ್ರಾಮಸಭೆಯು ವಿಕೇಂದ್ರೀಕರಣದ ವ್ಯವಸ್ಥೆಯ ಜೀವಾತ್ಮಕವಾಗಿದೆ. ಸರ್ಕಾರದ ನೀತಿ ನಿರೂಪಣೆಗಳನ್ನು ರೂಪಿಸುವ, ತಿದ್ದುಪಡಿ ಮಾಡುವ ಮತ್ತು ಪೂರಕವಾಗಿ ಪರಿಹಾರ ಕ್ರಮಗಳನ್ನು ತಿಳಿ ಹೇಳುವಲ್ಲಿ ವ್ಯಾಪಕವಾಗಿ ಪ್ರಭಾವ ಬೀರುವ ಘಟಕವಾಗಿದೆ. ಆದಕಾರಣ ಅಭಿವೃದ್ಧಿ ಫಲಗಳು ನಿಜವಾಗಿ ಅನುಷ್ಠಾನಗೊಳ್ಳಬೇಕಾಗಿರುವುದು ಗ್ರಾಮದಲ್ಲಿ. ಆದ್ದರಿಂದ ಗ್ರಾಮೀಣಮಟ್ಟದಲ್ಲಿ ಯೋಜನೆಗಳು ಸಿದ್ಧವಾಗಬೇಕು. ಒಂದು ಹಣಕಾಸು ವರ್ಷದಲ್ಲಿ ಕನಿಷ್ಠ ಎರಡು ಗ್ರಾಮಸಭೆಗಳನ್ನು ಪ್ರತಿಯೊಂದು ಗ್ರಾಮ ಪಂಚಾಯಿತಿಯ ಚುನಾಯಿತ ಪ್ರತಿನಿಧಿಗಳು ನಡೆಸಬೇಕು. ತಾನು ಪ್ರತಿನಿಧಿಸುವ ಪ್ರತಿಯೊಂದು ಪಂಚಾಯಿತಿಯ ಅಭಿವೃದ್ಧಿ ಕಾರ್ಯಯೋಜನೆಯನ್ನು ರೂಪಿಸುವ ಹಾಗೂ

ಅನುಮೋದಿಸುವ ಹಕ್ಕು ಗ್ರಾಮ ಸಭೆಗಿರುತ್ತದೆ. ಒಂದು ಹಣಕಾಸಿನ ವರ್ಷದಲ್ಲಿ ಮೊದಲ ಸಭೆಯಲ್ಲಿ ಆ ವರ್ಷದಲ್ಲಿ ಗ್ರಾಮಪಂಚಾಯಿತಿಯು ಕೈಗೊಳ್ಳಬಹುದಾದ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಸ್ತಾಪ ಮಂಡಿಸಬೇಕು. ಎರಡನೇ ಸಭೆಯಲ್ಲಿ ಗ್ರಾಮಸಭೆಯು ವರ್ಷದಲ್ಲಿ ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಸವಿವರವಾಗಿ ಜನತೆಗೆ ತಿಳಿಯ ಪಡಿಸಬೇಕು. ಈ ರೀತಿ ಗ್ರಾಮಸಭೆಯು ತನ್ನದೇ ಆದ ಸೈದ್ಧಾಂತಿಕ ಚೌಕಟ್ಟನ್ನು ಹೊಂದಿದೆ.

**ಆಚರಣೆಯಲ್ಲಿ ಗ್ರಾಮಸಭೆ**

ಸೈದ್ಧಾಂತಿಕವಾಗಿ ಇಷ್ಟೊಂದು ಮಹತ್ವವನ್ನು ಹೊಂದಿದ ಈ ಗ್ರಾಮಸಭೆಗಳು ಆಚರಣೆಯಲ್ಲಿ ಸರಿಯಾಗಿ ನಡೆಯುವುದಿಲ್ಲ. ಜಾಗತಿಕ ಪ್ರಕ್ರಿಯೆಗಳು ಬೆಳೆದಂತೆ ಅಭಿವೃದ್ಧಿ ಚಟುವಟಿಕೆಗಳಲ್ಲಿ ಜನರ ಸಹಭಾಗಿತ್ವ ಹೇಗಿದೆ ಎಂಬುದು ಬಹಳ ಮುಖ್ಯ. ಅಭಿವೃದ್ಧಿಯ ಫಲಗಳು ಗ್ರಾಮಸಭೆಯ ಮೂಲಕ ಗ್ರಾಮೀಣ ಜನತೆಗೆ ಪರಿಣಾಮಕಾರಿಯಾಗಿ ತಲುಪುತ್ತವೆಯೋ ಇಲ್ಲವೋ ಎಂಬುದನ್ನು ಹಲವಾರು ಅಧ್ಯಯನಗಳು ಸ್ಪಷ್ಟಪಡಿಸಿವೆ. ಹೆಚ್ಚಿನ ಗ್ರಾಮಸಭೆಗಳನ್ನು ಗ್ರಾಮಪಂಚಾಯಿತಿಯ ಬದಲು ಮೇಲಿನ ಸ್ತರಗಳು, ಪಂಚಾಯತ್ ಸಮಿತಿಯ ನಿರ್ದೇಶನದ ಮೇರೆಗೆ ಅಧ್ಯಕ್ಷರು ಆಡಳಿತಾಂಗದ ಒತ್ತಡದ ಮೇರೆಗೆ ಗ್ರಾಮಸಭೆಗಳನ್ನು ಕರೆಯುತ್ತಿದ್ದರು. ಸಭೆಗೆ ಪೂರ್ವಭಾವಿಯಾಗಿ ಸರಿಯಾದ ನೋಟೀಸು ಮತ್ತಿತರ ಮಾಹಿತಿಗಳನ್ನು ಗ್ರಾಮೀಣ ಜನರಿಗೆ ನೀಡುತ್ತಿರಲಿಲ್ಲ. ರಾಜ್ಯದ ಬಹುತೇಕ ಭಾಗಗಳಲ್ಲಿ ಗ್ರಾಮಸಭೆಗಳು ನಡೆಯುತ್ತಿರಲಿಲ್ಲ. ನಮ್ಮ ಕೆಲವು ಗ್ರಾಮಸಭೆಗಳ ಅಧ್ಯಯನಗಳ ಪ್ರಕಾರ ಗ್ರಾಮಸಭೆಗಳನ್ನು ನಡೆಸಿದ ಬಗ್ಗೆ ದಾಖಲೆಗಳನ್ನು ಸೃಷ್ಟಿಸಲಾಗಿದೆ ಹಾಗೂ ಹಾಜರಿದ್ದವರ ಗಮನಕ್ಕೆ ತರದೆ ಸಭೆಯ ನಡಾವಳಿಗಳನ್ನು ದಾಖಲಿಸಲಾಗಿದೆ. ಅಸ್ತಿತ್ವದಲ್ಲಿದ್ದ ಗ್ರಾಮಸಭೆಗಳಲ್ಲಿ ಮಹಿಳೆ ಮತ್ತು ಕೆಳವರ್ಗದ ಸದಸ್ಯರ ಭಾಗವಹಿಸುವಿಕೆ ಪ್ರಮಾಣ ಕಡಿಮೆಯಾಗಿದ್ದು, ಗ್ರಾಮದವರಿಗೆ ಸರಿಯಾದ ಮಾಹಿತಿ ಇಲ್ಲ, ಮುಖ್ಯವಾದ ಗ್ರಾಮದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಯುವುದಿಲ್ಲ. ಮತ್ತು ಜನರನ್ನು ಎದುರಿಸುವ ಹಿಂಜರಿತದಿಂದ ಪಂಚಾಯಿತಿಯ ಸದಸ್ಯರ ನಿರಾಸಕ್ತಿಗಳು. ಇವುಗಳೆಲ್ಲ ಗ್ರಾಮಸಭೆಗಳು ಸರಿಯಾಗಿ ನಡೆಯಲಿಲ್ಲದಕ್ಕೆ ಕಾರಣಗಳಾಗಿವೆ. ಈ ರೀತಿ ಆಚರಣಾತ್ಮಕವಾಗಿ ಗ್ರಾಮ ಸಭೆಗಳು ನಡೆಯುತ್ತಿವೆ ಎಂಬುದನ್ನು ಹಲವಾರು ಅಧ್ಯಯನಗಳು ಸ್ಪಷ್ಟಪಡಿಸಿವೆ. ಆದುದರಿಂದ ಕಾನೂನಿನಲ್ಲಿರುವ ಗ್ರಾಮಸಭೆಗಳನ್ನು ನಿಯಮಾನುಸಾರ ನಡೆಸಲು ಪೂರಕವಾದ ಪರಿಸರವನ್ನು ನಿರ್ಮಿಸಬೇಕು. ಆಗ ಮಾತ್ರ ವಿಕೇಂದ್ರೀಕರಣ ಅರ್ಥಪೂರ್ಣವಾಗುತ್ತದೆ.

**ಪರಿಹಾರಗಳು**

ಇಲ್ಲಿ ಮೂಡಿಬರುವ ಪ್ರಶ್ನೆಯೆಂದರೆ ನಿಗದಿತವಾಗಿ ಗ್ರಾಮಸಭೆಗಳ ಏರ್ಪಾಡು, ಅದರಲ್ಲಿ ಜನರ ಭಾಗವಹಿಸುವಿಕೆ ಹಾಗೂ ಸಭೆಗಳ ಕಾರ್ಯಕಲಾಪ ಸರಿಯಾಗಿ ನಡೆಯುವಂತಾಗಲು ಎಂತಹ ಕ್ರಮಗಳು ಅಗತ್ಯ ಎಂಬುದು ಬಹಳ ಮುಖ್ಯವಾಗಿದೆ.

ಮೊದಲನೆಯ ಅಂಶವೆಂದರೆ ಗ್ರಾಮಸಭೆಗಳಲ್ಲಿ ಜನರು ಭಾಗವಹಿಸಬೇಕಾದರೆ ಸಭೆಯ ಸ್ಥಳ, ದಿನಾಂಕಗಳು ಜನರಿಗೆ ಅನುಕೂಲಕರವಾಗಿರಬೇಕು. ಎರಡನೆಯದಾಗಿ ಸ್ಥಳೀಯ ಪ್ರಚಾರ ಮತ್ತು ಸಂಪರ್ಕ ಸಾಧನಗಳ ಮೂಲಕ ಹೆಚ್ಚು ಪ್ರಚಾರ ಮಾಡಬೇಕು. ಮೂರನೇ ಅಂಶ ಭಾಗವಹಿಸಿದ ಜನರಿಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಮುಕ್ತ ಅವಕಾಶ ಕಲ್ಪಿಸಬೇಕು. ನಾಲ್ಕನೆಯದಾಗಿ ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿರುವ ಸ್ವಯಂ ಸೇವಾ ಸಂಸ್ಥೆಗಳಿಗೆ ಉತ್ತೇಜನ ನೀಡಬೇಕು. ಅವು ಜನರಿಗೆ ತಿಳಿವಳಿಕೆ ನೀಡಿ ಗ್ರಾಮಸಭೆಗಳಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಳ್ಳುವಂತೆ ಮಾಡಬೇಕು. ಐದನೆಯ ಅಂಶ ಗ್ರಾಮಸಭೆಗಳು ಯಶಸ್ವಿಯಾಗಿ ನಡೆಯಬೇಕಾದರೆ ಆ ಗ್ರಾಮದ ಜನರ ಉದಾತ್ತ ಮನೋಭಾವವು ಒಂದು ಪರಿಣಾಮಕಾರಿ ಅಂಶವಾಗಬಲ್ಲದು. ಕೊನೆಯದಾಗಿ ಗ್ರಾಮದ ಎಲ್ಲಾ ವರ್ಗಗಳ ಸಕ್ರಿಯ ಸಹಭಾಗಿತ್ವವೇ ಉತ್ತಮ ಗ್ರಾಮಸಭೆಯ ತಿರುಳಾಗಿದೆ.

ಮುಖ್ಯವಾಗಿ ರಾಜಕೀಯ ಮೀಸಲಾತಿಯಿಂದ ಆಯ್ಕೆಗೊಂಡ ಚುನಾಯಿತ ಪ್ರತಿನಿಧಿಗಳ ಅನಕ್ಷರತೆ ಹಾಗೂ ರಾಜಕೀಯ ತಿಳಿವಳಿಕೆಯನ್ನು ತರಬೇತಿಗಳ ಮೂಲಕ ಸರಿಪಡಿಸುವುದು ಅಗತ್ಯ. ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಗ್ರಾಮಸಭೆಗಳ ಪಾತ್ರ ಬಹುಮುಖ್ಯವಾಗಿರುವುದರಿಂದ ಹಾಗೂ ಮಾನವಮುಖಿ ಅಭಿವೃದ್ಧಿ ಪ್ರಣಾಳಿಕೆ ಮತ್ತು ಅಮರ್ತ್ಯ ಸೆನ್‌ರವರ ಪ್ರಮುಖ ಪ್ರಜಾತಂತ್ರ ಸಾಧನವಾದ ಜನಾಂದೋಲನವು ನೇರವಾಗಿ ಗ್ರಾಮಸಭೆಯ ಮೂಲಕ ಜನತೆಗೆ ಮುಟ್ಟಿಸುವಲ್ಲಿ ಸಹಾಯ ಮಾಡುತ್ತದೆ. ಸರ್ಕಾರ ಮತ್ತು ಮೇಲಿನ ಸ್ತರಗಳು ಗ್ರಾಮಸಭೆಗಳಿಗೆ ನೀಡಿರುವ ಅಧಿಕಾರ ಕಾರ್ಯಗಳನ್ನು ಸಮರ್ಪಕವಾಗಿ ಜಾರಿಗೊಳಿಸುವಂತೆ ಅನುವು ಮಾಡಿಕೊಡಬೇಕು. ಆಗ ಮಾತ್ರ ನಿಜವಾದ ವಿಕೇಂದ್ರೀಕರಣಕ್ಕೆ ದಾರಿಮಾಡಿಕೊಟ್ಟಂತಾಗುತ್ತದೆ.

**ಎಂ. ಯರಿಸ್ವಾಮಿ**
ಸಂಶೋಧನಾ ವಿದ್ಯಾರ್ಥಿ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ-೫೮೩೨೭೬

## ಒಬ್ಬಳು ಇನ್ನೊಬ್ಬಳು

ಚಿಂದಿಯಲ್ಲಿ ಮರ್ಯಾದೆ ಮುಚ್ಚಲು
ಪ್ರಯತ್ನಿಸುವವಳು ಒಬ್ಬಳು
ರೇಶ್ಮೆ ಸೀರೆಯಲಿ ಮರ್ಯಾದೆ ಮಾರಲು
ಬತ್ತಲಾಗುವವಳು ಇನ್ನೊಬ್ಬಳು

ಹಸಿದ ಹೊಟ್ಟೆ ತಣಿಸಲೆಂದು
ಭಿಕ್ಷೆ ಬೇಡುವವಳು ಒಬ್ಬಳು
ಹಸಿದ ಕಾಮುಕ ಎಸೆದ ಹಣವನ್ನು
ಬಾಚಿ ದಣಿವವಳು ಇನ್ನೊಬ್ಬಳು

ನೋಡಿದ ಜನ ತಿರಸ್ಕಾರದಿಂದ
ಹೊರಹಾಕಿದರು ಒಬ್ಬಳನ್ನು
ಅದೇ ಜನ ಪ್ರೀತಿ ತೋರಿ
ಹಾಸಿಗೆಗೆ ಜಗ್ಗಿದರು ಇನ್ನೊಬ್ಬಳನ್ನು

ರಸ್ತೆ ಬದಿಯ ಅಂಗಡಿ ಪಾಪಟಣಿಗೆ
ಮೇಲೆ ಅಳುತ್ತ ಕೂತಿದ್ದಾಳೆ ಒಬ್ಬಳು
ಕೆಲಸವಾದ ಮೇಲೆ ರಸ್ತೆಗೆ
ಬೀಸಿ ಒಗೆಯಲ್ಪಟ್ಟಿದ್ದಾಳೆ ಇನ್ನೊಬ್ಬಳು



ಭರ್ತಿ ಕತ್ತಲೆಯಲಿ ಎದುರು
ಬದುರಾದರು ಒಬ್ಬಳು ಇನ್ನೊಬ್ಬಳು
ಕೆಟ್ಟ ಹಸಿವೆಯಿಂದ ಒದ್ದಾಡುತ್ತಿದ್ದಾರೆ
ಒಬ್ಬಳು ಇನ್ನೊಬ್ಬಳು
ಒಬ್ಬಳಲ್ಲಿ ರೊಟ್ಟಿ ಇತ್ತು
ಇನ್ನೊಬ್ಬಳಲ್ಲಿ ರೊಕ್ಕ ಇತ್ತು
ಒಬ್ಬಳಿಗೆ ರೊಕ್ಕ ಬೇಕಾಗಿತ್ತು
ಇನ್ನೊಬ್ಬಳಿಗೆ ರೊಟ್ಟಿ ಬೇಕಾಗಿತ್ತು

'ರೊಕ್ಕ ಕೊಡ್ತೇನೆ ರೊಟ್ಟಿ ಕೊಡ್ತೀಯಾ'
ಕೇಳಿದಳು ಇನ್ನೊಬ್ಬಳು
'ನಿನ್ನ ರೊಕ್ಕ ನಿನಗೇ ಇರಲಿ
ತಗೋ ಈ ರೊಟ್ಟಿ' ಅಂದಳು ಒಬ್ಬಳು

'ರೊಕ್ಕ ಇರದಿದ್ದರೂ ನನ್ನ ಕಡೆ
ರೊಟ್ಟಿ ಇದೆ; ಅದೇ ದೊಡ್ಡದು' ಎಂದಳು ಒಬ್ಬಳು
'ರೊಕ್ಕ ಇದ್ದರೂ ಬೇಕಾದಷ್ಟು ಕೊನೆಗೆ
ಮನುಷ್ಯ ತಿನ್ನುವುದು ರೊಟ್ಟಿ' ಎಂದಳು ಇನ್ನೊಬ್ಬಳು.

**ಡಾ. ಸರಜೂ ಕಾಟ್ಕರ್**
'ಕಾವ್ಯ', ಬೆಳಗಾವಿ-೧೬

# ಶ್ರೀಲಂಕಾ ಭೇಟಿ: ಕೆಲವು ಅನುಭವಗಳು

**ಡಾ॥ ಸಿ. ಆರ್. ಚಂದ್ರಶೇಖರ್**

ಶ್ರೀಲಂಕಾ ಎಂದಾಕ್ಷಣ ನಮ್ಮೆಲ್ಲರ ಮನಸ್ಸಿಗೆ ಬರುವುದು-ಎಲ್‌ಟಿಟಿಇ ಪ್ರಭಾಕರನ್, ರಾಜೀವ್ ಗಾಂಧಿಯ ಭೀಕರ ಕೊಲೆ, ಕಳೆದ ಹನ್ನೆರಡು ವರ್ಷಗಳಿಗೂ ಮಿಕ್ಕಿದ ಅವಧಿಯಲ್ಲಿ ಶ್ರೀಲಂಕೆಯ ತಮಿಳರಿಗೂ ಸಿಂಹಳೀಯರಿಗೂ ನಡೆದಿರುವ ಆಂತರಿಕ ಯುದ್ಧ, ಇತ್ಯಾದಿ. ೧೯೪೮ರ ಫೆಬ್ರವರಿ ೪ರಂದು ಸ್ವತಂತ್ರ ರಾಷ್ಟ್ರವಾದ, ಹಿಂದೂ ಮಹಾಸಾಗರದ 'ಪಚ್ಚೆ' ಎಂದೇ ಹೆಸರಾದ, ಈ ಪುಟ್ಟ ದ್ವೀಪ ಈಗ ಜನಾಂಗೀಯ ಕದನದಿಂದಾಗಿ ಸೊರಗುತ್ತಿದೆ. ಅಪಾರ ಪ್ರಾಕೃತಿಕ ಸಂಪತ್ತಿದ್ದರೂ, ಬಹುಪಾಲು ಶ್ರೀಲಂಕನ್ನರು ಬಡತನ, ನಿರುದ್ಯೋಗಗಳ ಬವಣೆಯಿಂದ ಬಳಲುತ್ತಿದ್ದಾರೆ. ಪ್ರವಾಸಿಗರ ಸ್ವರ್ಗವಾಗಿರುವ ಈ ನಾಡಿಗೆ ಕಾಲಿಡಲು ಪ್ರವಾಸಿಗರು ಹೆದರುತ್ತಾರೆ.

''ಏಪ್ರಿಲ್ ೪ರಿಂದ ೭ರವರೆಗೆ ಕೊಲಂಬೋದಲ್ಲಿ ''ಮಾನಸಿಕ ಆರೋಗ್ಯ ಮತ್ತು ಮನೋವೈದ್ಯಕೀಯದ ಬಗ್ಗೆ ನಡೆಯಲಿರುವ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ 'ಮಾನಸಿಕ ಆರೋಗ್ಯ ಶಿಕ್ಷಣ'ದ ಬಗ್ಗೆ ಕಾರ್ಯಾಗಾರವನ್ನು ನಡೆಸಿಕೊಡಬೇಕೆಂದು'' ಸಮ್ಮೇಳನದ ವ್ಯವಸ್ಥಾಪಕ ಡಾ॥ ನಲಕಾ ಮೆಂಡಿಸ್‌ರಿಂದ ಪತ್ರ ಬಂದಾಗ, ನನ್ನ ಮನಸ್ಸಿನಲ್ಲೂ ಭಯ ಹಾದುಹೋಯಿತು. ಆಹ್ವಾನ ನನಗಷ್ಟೇ ಅಲ್ಲ; ನನ್ನ ಇನ್ನಿಬ್ಬರು ಸಹೋದ್ಯೋಗಿಗಳಿಗೂ ಬಂದಿತ್ತು. 'ಕೊಲೊಂಬೋಗೆ ಹೋಗೋಣವೇ. ಅಪಾಯವಿಲ್ಲವಷ್ಟೇ' ಎಂದು ಡಾ॥ ಮೋಹನ್ ಐಸಾಕರನ್ನು ಕೇಳಿದೆ. 'ಕೊಲಂಬೋ ಪ್ರಕ್ಷುಬ್ಧ ಪ್ರದೇಶವಾಗಿಲ್ಲ. ಅಲ್ಲಿಗೆ ಹೋಗಲು ಅಡ್ಡಿ ಇಲ್ಲ' ಎಂದರು. ಸರಿ ಪ್ರವಾಸಕ್ಕೆ ಸಿದ್ಧ. ಬರುತ್ತೇನೆ ಎಂದು ಡಾ॥ ಮೆಂಡಿಸ್‌ಗೆ ಇ-ಮೇಲ್ ಕಳುಹಿಸಿದೆ.



*ಕ್ಯಾಂಡಿ ಬುದ್ಧ ದೇವಾಲಯ*

**ಹನುಮಂತನ ಬಾಲದಂತಹ ಕ್ಯೂ**

ಏಪ್ರಿಲ್ ೪ರಂದು ಬೆಳಿಗ್ಗೆ ೮ ಗಂಟೆಗೆ ಚೆನ್ನೈನ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ನನ್ನನ್ನು ನನ್ನ ಬಂಧು ಶ್ರೀ ಸತೀಶ್ ತಲುಪಿಸಿದರು. ಶ್ರೀಲಂಕಾ ಏರ್‌ಲೈನ್ಸ್‌ನ ವಿಮಾನ ಹೊರಡುವ ವೇಳೆ ೧೦-೪೫. ನಿಲ್ದಾಣದೊಳಕ್ಕೆ ಹೋಗಲು ಸರತಿಯಲ್ಲಿ ನಿಂತಿದ್ದ ಜನರ ಸಂಖ್ಯೆಯನ್ನು ಕಂಡು ದಂಗಾದೆ. ವೈಕುಂಠ ಏಕಾದಶಿಯ ದಿವಸ ವೆಂಕಟೇಶ್ವರನ ದೇವಸ್ಥಾನದೊಳಕ್ಕೆ ಹೋಗಲು ನಿಲ್ಲುವ ಜನರ ದೃಶ್ಯ ನೆನಪಿಗೆ ಬಂತು. ಅವರಲ್ಲಿ ಬಹುತೇಕ ಜನ ಗಲ್ಫ್ ರಾಷ್ಟ್ರಗಳಿಗೆ ಹೋಗುವವರು ಎಂದು ತಿಳಿಯಿತು. ಅರೆ ಕೌಶಲ ಅಥವಾ ಕೌಶಲ ಬೇಕಿಲ್ಲದ ಉದ್ಯೋಗಗಳಲ್ಲಿರುವ ಇವರು, ತಾಯಿನಾಡನ್ನು ಬಿಟ್ಟು, ಹೊಟ್ಟೆಪಾಡಿಗೆ ಅಥವಾ ಹೆಚ್ಚು ಹಣವನ್ನು ಗಳಿಸಿ ಸುಖ ಜೀವನದ ಆಸೆ ಹೊತ್ತು ನಡೆಯುವವರು. ಕೌಂಟರ್‌ನಲ್ಲಿ ಬೋರ್ಡಿಂಗ್ ಪಾಸು ಪಡೆದು, ಕಸ್ಟಮ್ಸ್, ಸೆಕ್ಯುರಿಟಿ ಚೆಕ್ ಎಲ್ಲವನ್ನೂ ಮುಗಿಸುವ ವೇಳೆಗೆ ೯-೩೦ ಆಯಿತು. ನಿಗದಿತ ವೇಳೆಗೆ ವಿಮಾನದೊಳಕ್ಕೆ ಹೋಗಿ ನನ್ನ ಸೀಟಿನಲ್ಲಿ ಕುಳಿತೆ. ನನ್ನ ಪಕ್ಕದಲ್ಲಿ ಸುಮಾರು ೨೫ ವರ್ಷ ವಯಸ್ಸಿನ ಕೆಳವರ್ಗದವಳೆಂದು ಸುಲಭವಾಗಿ ಹೇಳಬಹುದಾದ ವೇಷಭೂಷಣವುಳ್ಳ ಮಹಿಳೆ ನನ್ನನ್ನು ನೋಡಿ ಮುಗುಳ್ನಕ್ಕಳು. ಕಸ್ಟಮ್ಸ್ ಅಧಿಕಾರಿಯೊಂದಿಗೆ ತೆಲುಗಿನಲ್ಲಿ ಮಾತನಾಡುತ್ತಾ, ಭಾಷೆ ತಿಳಿಯದ ಅವನೊಂದಿಗೆ ವ್ಯವಹರಿಸಲು ಕಷ್ಟಪಟ್ಟಿದ್ದ ಅವಳನ್ನು ಗುರುತಿಸಿ, ತೆಲುಗಿನಲ್ಲಿ ಅವಳೊಂದಿಗೆ ಸಂಭಾಷಿಸಿದೆ. ಆಂಧ್ರದ ನೆಲ್ಲೂರು ಸಮೀಪದ ಹಳ್ಳಿಯೊಂದರಿಂದ ಬಂದವಳು. ಮಸ್ಕತ್‌ನಲ್ಲಿ ಅರಬ್ ಶ್ರೀಮಂತನೊಬ್ಬನ ಮನೆಯಲ್ಲಿ ಆತನ ಮಕ್ಕಳನ್ನು ನೋಡಿಕೊಳ್ಳುವ ಕೆಲಸ ಅವಳದು. ಆಕೆಯ ಚಿಕ್ಕಮ್ಮನೂ ಇದೇ ರೀತಿಯ ಕೆಲಸ ಮಾಡುತ್ತಿದ್ದಾಳಂತೆ. ಸರಳ ಹರಕು, ಮುರುಕು ಅರಾಬಿಕ್ ಕಲಿತಿದ್ದಾಳೆ. ೨ ವರ್ಷಕ್ಕೊಮ್ಮೆ ತಂದೆ ತಾಯಿ ತಂಗಿಯರನ್ನು ನೋಡಲು ಭಾರತಕ್ಕೆ ಬರುತ್ತಾಳೆ. ''ಭಾಷೆ ಗೊತ್ತಿಲ್ಲದೆ ವಿವಿಧ ವಿಮಾನಗಳಲ್ಲಿ ಹೇಗೆ ನಿಭಾಯಿಸತ್ತೀಯಾ'' ಎಂದು ಕೇಳಿದೆ. ''ಹೇಗೋ... ಕಷ್ಟವಾಗುತ್ತದೆ. ಏನು ಮಾಡುವುದು'' ಎಂದು ನಕ್ಕಳು. ತನ್ನ ವಯಸ್ಸಾದ ತಂದೆ ತಾಯಿಗಳಿಗೆ ಹೊರೆಯಾಗಿ ಬದುಕದೆ ಅವರಿಗೆ ನೆರವಾಗುತ್ತಿದ್ದೇನೆ; ಅದೇ ತನಗೆ ಸಂತೋಷವೆಂದಳು.

*ಗಾಲ್ ಬೀಚ್‌ನಲ್ಲಿ ಲೇಖಕರು*



''ಮದುವೆಯಾಗುವುದಿಲ್ಲವೇ'' ಎಂದೆ. ''ಮದುವೆಯಾ ದರೆ ಕಷ್ಟಗಳ ಸರಮಾಲೆ. ಗಂಡನ ಮನೆಯವರ ದುಡ್ಡಿನ ದಾಹವನ್ನು ತೀರಿಸುವುದು ಹೇಗೆ ?'' ಎಂದಳು. ''ಮಸ್ಕತ್‌ನಲ್ಲಿ ಆ ಶ್ರೀಮಂತನ ಮನೆಯಲ್ಲಿ ನಿನಗೆ ಯಾವ ತೊಂದರೆಯೂ ಇಲ್ಲವೇ'' ಎಂದೆ. ''ಇಲ್ಲ. ಆತ ಮತ್ತು ಆತನ ಹೆಂಡತಿ ಒಳ್ಳೆಯ ಜನ. ಕಷ್ಟವಿಲ್ಲ, ದೇವರ ದಯೆ'' ಎಂದಳು. ಹುಟ್ಟಿದ ದೇಶಕ್ಕಿಂತ, ಪರದೇಶ ಒಂದರಲ್ಲಿ ಕಷ್ಟವಿಲ್ಲದೆ ಬದುಕುತ್ತಿರುವ ಆಕೆಗೆ ಶುಭ ಹಾರೈಸಿದೆ. ನಾಲ್ಕು ವರ್ಷ ಮಾತ್ರ ಶಾಲೆಗೆ ಹೋಗಿದ್ದ ಆಕೆ, ಜೀವನ ಶಾಲೆಯಲ್ಲಿ ಕಲಿತ ಪಾಠಗಳು, ಕೌಶಲಗಳು ಯಾವ ಡಿಗ್ರಿಗೂ ಕಡಿಮೆ ಇಲ್ಲ ಎಂದುಕೊಂಡೆ.

ಚೆನ್ನೈಗೂ ಕೊಲಂಬೋಗೂ ೬೫೦ ಕಿ.ಮೀ. ದೂರ. ಒಂದು ಗಂಟೆಯ ಪ್ರಯಾಣದ ನಂತರ ಕೊಲಂಬೋ ವಿಮಾನ ನಿಲ್ದಾಣದಲ್ಲಿ ಇಳಿದಾಗ ಹೊರಗಿನ ತಾಪಮಾನ ೩೬ ಡಿಗ್ರಿ ಸೆಲ್ಸಿಯಸ್. ಜೆಟ್‌ವಿಂಗ್ ಸಂಸ್ಥೆಯ ಡ್ರೈವರ್ 'ಚಂದ್ರಶೇಖರನ್' ಎನ್ನುವ ಬೋರ್ಡ್ ಹಿಡಿದು ನಿಂತಿದ್ದ. ಅವನಲ್ಲಿಗೆ ಹೋಗಿ ನನ್ನ ಪರಿಚಯ ಮಾಡಿಕೊಂಡು, ಟ್ಯಾಕ್ಸಿಯಲ್ಲಿ ಕುಳಿತೆ. ನಿಲ್ದಾಣದಿಂದ ಕೊಲಂಬೋ ನಗರ ೩೫ ಕಿ.ಮೀ. ದೂರದಲ್ಲಿದೆ. ಮುಕ್ಕಾಲು ಗಂಟೆಯ

ಪ್ರಯಾಣದ ನಂತರ ತಾಜ್ ಸಮುದ್ರ ಹೋಟೆಲ್‌ನ್ನು ತಲುಪಿದೆ. ಸುಂದರವಾದ ಗಾಲ್ ಬೀಚ್‌ನ ಎದುರೇ ಇರುವ ಈ ಹೋಟೆಲಿನಲ್ಲಿ ಸಮ್ಮೇಳನ ಹಾಗೂ ನಮ್ಮ ವಸತಿಯ ಏರ್ಪಾಟು ಆಗಿತ್ತು.

**ಶ್ರೀಲಂಕಾದಲ್ಲಿ ಮಾನಸಿಕ ಆರೋಗ್ಯ ವ್ಯವಸ್ಥೆ**

ಶ್ರೀಲಂಕಾದ ೧.೯ ಕೋಟಿ ಜನಸಂಖ್ಯೆಗೆ ಲಭ್ಯವಿರುವ ಮನೋವೈದ್ಯರ ಸಂಖ್ಯೆ ಕೇವಲ ೨೫. ಮಾನಸಿಕ ಆಸ್ಪತ್ರೆಗಳ ಸಂಖ್ಯೆ ಎರಡು. ಬಹುತೇಕ ಮನೋವೈದ್ಯರು ಕೊಲಂಬೋದಲ್ಲಿಯೇ ಠಿಕಾಣಿ ಹೂಡಿದ್ದಾರೆ. ಉತ್ತರ, ಪೂರ್ವ, ದಕ್ಷಿಣ ಪ್ರಾಂತಗಳಲ್ಲಿ ಮನೋವೈದ್ಯಕೀಯ ಸೌಲಭ್ಯ ಅಲಭ್ಯ. ಪ್ರಾರ್ಥನೆ, ಭೂತೋಚ್ಚಾಟನೆ, ದಿಗ್ಬಂಧನ, ನಾಟಿ ಚಿಕಿತ್ಸೆಗಳೇ ಮನೋರೋಗಿಗಳಿಗೆ ಸಿಗುವ ಪರಿಹಾರ. ಆತ್ಮಹತ್ಯೆ ಅತಿ ಹೆಚ್ಚಿನ ಪ್ರಮಾಣದಲ್ಲಿ ನಡೆಯುವ ದೇಶಗಳ ಪೈಕಿ ಶ್ರೀಲಂಕಾ ಪ್ರಮುಖ ಸ್ಥಾನದಲ್ಲಿದೆ. ಮನೋರೋಗಿಗಳು, ಅವರ ಮನೆಯವರು ಹಾಗೂ ಮಾನಸಿಕ ರೋಗ ತಜ್ಞರ ಬಗ್ಗೆ ಸಾಮಾಜಿಕ ಕಳಂಕ ತೀವ್ರಮಟ್ಟದಲ್ಲಿದೆ. ಬಹಿರಂಗವಾಗಿ ತಮ್ಮ ಮಾನಸಿಕ ಕಾಯಿಲೆಗಳ ಬಗ್ಗೆ ಹೇಳಿಕೊಳ್ಳಲು ಹಾಗೂ ಮನೋವೈದ್ಯರಲ್ಲಿಗೆ ಹೋಗಲು ಯಾರೂ ಇಷ್ಟಪಡುವುದಿಲ್ಲ.

ಅಂತರರಾಷ್ಟ್ರೀಯ ಸಮ್ಮೇಳನವು ಅಂದು ಸಂಜೆ ೬ ಗಂಟೆಗೆ ಉದ್ಘಾಟಿಸಲ್ಪಟ್ಟಿತು. ಶ್ರೀಲಂಕಾ ಸರ್ಕಾರದ ಆರೋಗ್ಯ ಮಂತ್ರಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮಂತ್ರಿ ಹಾಗೂ ಸಮಾಜ ಕಲ್ಯಾಣ ಮಂತ್ರಿ ಸಕಾಲಕ್ಕೆ ಆಗಮಿಸಿ, ಚಿಕ್ಕ ಚೊಕ್ಕ ಭಾಷಣಗಳನ್ನು ಮಾಡಿದರು, ಪ್ರತಿನಿಧಿಗಳ ಮೆಚ್ಚುಗೆಯನ್ನು ಪಡೆದರು. ಭಾರತದಿಂದ ಎಂಟು ತಜ್ಞರು, ಪಾಕಿಸ್ತಾನ, ಬಾಂಗ್ಲಾ, ಬರ್ಮಾ, ನೇಪಾಳ, ಆಸ್ಟ್ರೇಲಿಯಾ, ಇಂಗ್ಲೆಂಡ್, ಹಾಲೆಂಡ್, ನಾರ್ವೆ ಇತ್ಯಾದಿ ದೇಶಗಳಿಂದ ಹಾಗೂ ವಿಶ್ವ ಆರೋಗ್ಯ ಸಂಸ್ಥೆಯ ಪ್ರತಿನಿಧಿಗಳು ಮತ್ತು ಸ್ಥಳೀಯರೂ ಸೇರಿದಂತೆ ಮುನ್ನೂರೈವತ್ತು ಮಂದಿ ಸಮ್ಮೇಳನದಲ್ಲಿ ಪಾಲ್ಗೊಂಡರು.

ಹಲವು ವರ್ಷಗಳ ಕಾಲ ನಡೆದಿರುವ ಆಂತರಿಕ ಯುದ್ಧದ ದುಷ್ಪರಿಣಾಮಗಳಿಂದ ಉಂಟಾಗಿರುವ ಮಾನಸಿಕ-ಸಾಮಾಜಿಕ-ಆರ್ಥಿಕ ಕ್ಷೋಭೆಗಳಿಂದ ಜನ ಜರ್ಝರಿತರಾಗಿದ್ದಾರೆ. ತತ್ಫಲವಾಗಿ, ಭಯ-ದುಃಖದ ಕಾಯಿಲೆಗಳು, ಆತ್ಮಹತ್ಯೆ, ಮದ್ಯ-ಮಾದಕ ವಸ್ತುಗಳ ಚಟ, ಹೊಂದಾಣಿಕೆಯ ಕಾಯಿಲೆಗಳು, ಮಕ್ಕಳಲ್ಲಿ ಗುಣ-ದೋಷದ ನಡೆವಳಿಕೆಗಳು ಎಲ್ಲೆಡೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿವೆ. ಆದರೆ ಈ ಜನಕ್ಕೆ ಯಾವುದೇ ಮನೋವೈದ್ಯ ಸೌಲಭ್ಯವಿಲ್ಲದಿರುವುದನ್ನು ಚರ್ಚಿಸಲಾಯಿತು. ವಿಶ್ವದ ಎಲ್ಲ ರಾಷ್ಟ್ರಗಳ ಮಾನಸಿಕ ಆರೋಗ್ಯ ಸಮಸ್ಯೆಗಳ ಬಗ್ಗೆ ವಿಶ್ವ ಆರೋಗ್ಯ ಸಂಸ್ಥೆಯು ಹೊರತಂದಿರುವ ೨೦೦೧ರ ವರದಿಯ ಬಗ್ಗೆ ಹಾಗೂ ತಮ್ಮ ಸೀಮಿತ ಸೌಲಭ್ಯಗಳ ಚೌಕಟ್ಟಿನಲ್ಲಿ ಪರಿಹಾರ ಕಾರ್ಯಗಳನ್ನು ಕೈಗೊಳ್ಳುವ ಬಗ್ಗೆ ವಿವಿಧ ದೇಶಗಳ ಪ್ರತಿನಿಧಿಗಳು ಮಾತನಾಡಿದರು. ೬ನೆಯ ತಾರೀಖಿನಂದು ಮಧ್ಯಾಹ್ನ ೨-೩೦ರಿಂದ ೫-೩೦ರವರೆಗೆ, ಸುಮಾರು ಮೂವತ್ತೈದು ನರ್ಸ್‌ಗಳು, ಆಪ್ತಸಮಾಲೋಚಕರು, ವೈದ್ಯರುಗಳಿಗೆ 'ಮಾನಸಿಕ ಆರೋಗ್ಯ ಶಿಕ್ಷಣ'ದ ಬಗ್ಗೆ ಕಾರ್ಯಾಗಾರವನ್ನು ಪರಿಣಾಮಕಾರಿಯಾಗಿ ನಡೆಸಿಕೊಟ್ಟೆ. ವಿವಿಧ ಮಾನಸಿಕ ಕಾಯಿಲೆಗಳಿಂದ ಬಳಲುವವರನ್ನು ರೋಗದ ಪ್ರಾರಂಭದ ಹಂತದಲ್ಲಿಯೇ ಗುರುತಿಸುವುದು ಹೇಗೆ; ಅವರಲ್ಲಿ ಹಾಗೂ ಅವರ ಮನೆಯಲ್ಲಿ ಕಂಡುಬರುವ ತಪ್ಪು ನಂಬಿಕೆಗಳು, ಆಚರಣೆಗಳು ಯಾವುವು, ಅವನ್ನು ನಿವಾರಿಸುವ ಬಗೆ ಹೇಗೆ, ಆಧುನಿಕ ಚಿಕಿತ್ಸಾ ಸೌಲಭ್ಯಗಳನ್ನು ಅವರು ಒಪ್ಪಿಕೊಳ್ಳುವಂತೆ ಮಾಡುವುದು ಹೇಗೆ, ಮಾನಸಿಕ ಆರೋಗ್ಯ ವರ್ಧನೆಗೆ ಸರಳ ಸೂತ್ರಗಳಾವುವು ಎಂಬುದರ ಬಗ್ಗೆ ಮಾಹಿತಿ-ಕೌಶಲಗಳನ್ನು ನೀಡಲಾಯಿತು. ರೋಗಿಗಳಿಗೆ ಅವರ ಮನೆಯ ಸಮೀಪದಲ್ಲೇ ಯುಕ್ತ ಚಿಕಿತ್ಸೆ ನೀಡುವುದು ಮತ್ತು ಅವರು ಆದಷ್ಟು ಸಹಜ ಜೀವನಕ್ಕೆ ವಾಪಸಾಗುವುದು, ಹಾಗೂ ಎಲ್ಲ ಜನ ತಮ್ಮ ಮಾನಸಿಕ ಆರೋಗ್ಯವರ್ಧನೆಗೆ ಅನುಸರಿಸಬೇಕಾದ ಸರಳ ಸೂತ್ರಗಳಾವುವು ಎಂಬುದು ಕಾರ್ಯಾಗಾರದ ಹೂರಣವಾಗಿತ್ತು.



ಕ್ಯಾಂಡಿಯ ಬುದ್ಧ

**ಕೊಲಂಬೋ ನಗರ**

ನಮ್ಮ ಬೆಂಗಳೂರೂ ಸೇರಿದಂತೆ, ನಮ್ಮ ದೇಶದ ಇತರ ನಗರಗಳಿಗೆ ಹೋಲಿಸಿದರೆ, ಕೊಲಂಬೋ ಸ್ವಚ್ಛವಾಗಿದೆ. ತುಂಬಿ ತುಳುಕಾಡುವ ಕಸದ ತೊಟ್ಟಿಗಳಾಗಲಿ, ಅವನ್ನು ಕೆದಕುವ ಬೀದಿ ನಾಯಿಗಳಾಗಲಿ, ಎಲ್ಲೆಂದರೆ ಅಲ್ಲಿ ಮಲ ಮೂತ್ರ ಮಾಡುವ ಜನರಾಗಲಿ ಕಾಣಲಿಲ್ಲ! ಗಗನಚುಂಬಿ ಕಟ್ಟಡಗಳೂ ಕಡಿಮೆಯೇ. ಕೊಲಂಬೋದ ಜನಸಂಖ್ಯೆ ೬ ಲಕ್ಷ. ಹಲವಾರು ಸುಂದರ ಬೀಚ್‌ಗಳಿವೆ. ನಾವಿದ್ದ ಹೋಟೆಲಿನ ಎದುರೇ ಇದ್ದ ಗಾಲ್ ಬೀಚ್‌ನ ವೈಶಿಷ್ಟ್ಯವೆಂದರೆ, ಬೀಚ್‌ನ ಉದ್ದಕ್ಕೂ ಬೆಳೆಸಿರುವ ವಿಶಾಲವಾದ ಹಸಿರು ಹುಲ್ಲಿನ ಲಾನ್. ಸಂಜೆಯಾಗುತ್ತಿದ್ದಂತೆ ಅಲ್ಲಿ ಜನಸಾಗರವೇ ನೆರೆಯುತ್ತದೆ. ಆಟವಾಡುವ ಮಕ್ಕಳು, ಗಾಳಿಪಟ ಹಾರಿಸುವ ಹರೆಯದವರು, ತಂದ ತಿಂಡಿಯನ್ನು ಮೆಲ್ಲುವ ಕುಟುಂಬಗಳು, ಸಂಗೀತದ ಅಲೆ ಎಬ್ಬಿಸುವ ಕಲಾಕಾರರು, ತಿಂಡಿ ತಿನಿಸು ಮಾರುವ ಅಂಗಡಿಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಈ ಬೀಚಿನಲ್ಲಿ ನಾನು ಬೆಳಗಿನ ವಾಕಿಂಗ್ ಮಾಡುವಾಗ ಹಿಮಾಚಲ ಪ್ರದೇಶದ ಪ್ರವಾಸೋದ್ಯಮ ಇಲಾಖೆಯ ಅಧಿಕಾರಿಯೊಬ್ಬನ ಭೇಟಿಯಾಯಿತು. ಆಕರ್ಷಕ ಟೂರ್ ಪ್ಯಾಕೇಜುಗಳಿಂದಾಗಿ ಉತ್ತರ ಭಾರತದ ಜನ ಈಗ ಶ್ರೀಲಂಕಾ ದ್ವೀಪಕ್ಕೆ ಹಿಂಡು ಹಿಂಡಾಗಿ ಬರುತ್ತಿದ್ದಾರೆ. ಕೊಲಂಬೋ, ಕ್ಯಾಂಡಿ, ಅನುರಾಧಪುರ, ರತ್ನಪುರ, ಬೊಂಬೋಟಾ, ಪಿನ್ನಾವಲ, ಉದವಲವೆ, ಯಾಲ-ವಾಸ್ಗೊಮುವಾ ರಾಷ್ಟ್ರೀಯ ಉದ್ಯಾನಗಳು ಭಾರತೀಯರ ಪರಿಚಯದ ಸ್ಥಳಗಳಾಗಲಿವೆ ಎಂದು ಹೇಳಿದ.

**ಸ್ವಾತಂತ್ರ್ಯ ಸ್ಮಾರಕ ಮಂಟಪದ ಚೌಕ**

ಕೊಲಂಬೋದ ಅತ್ಯಂತ ಸುಂದರ ಹಾಗೂ ಪ್ರಮುಖ ಪ್ರೇಕ್ಷಣೀಯ ಸ್ಥಳವೆಂದರೆ, ಸ್ವಾತಂತ್ರ್ಯಸ್ಮಾರಕ ಮಂಟಪ ಇರುವ ಚೌಕ. ಶ್ರೀಲಂಕಾದ ಸಾಂಪ್ರದಾಯಿಕ ವಾಸ್ತುಶೈಲಿಯ ಮಂಟಪ, ಅದರ ಪಕ್ಕದಲ್ಲಿ ಶ್ರೀಲಂಕಾದ ಪ್ರಥಮ ಪ್ರಧಾನಿ ಡಾನ್ ಸ್ಟೀಫನ್ ಸೇನಾನಾಯ್ಕೆಯ (ಪ್ರಧಾನಿಯಾಗಿದ್ದ ಅವಧಿ ೧೯೪೮-೫೨) ಬೃಹತ್‌ಪ್ರತಿಮೆ, ಪಾರ್ಕ್ ಇವೆ. ಸಂಜೆಯಲ್ಲಿ ವಾಕ್ ಮಾಡುವವರು, ಆಟವಾಡುವ ಮಕ್ಕಳು, ಬದುಕಿನತ್ತ ಹಿನ್ನೋಟ ಬೀರುವ ವೃದ್ಧರುಗಳಿಂದ ಈ ಚೌಕ ನನಗೆ ಜೀವಂತವಾಗಿ ಕಂಡಿತು. ಅರ್ಧ ಗಂಟೆ ಕಾಲ ಕುಳಿತು ಸಂತೋಷಪಟ್ಟೆ.

**ಕೊಲಂಬೋದಲ್ಲಿ ವೈಟ್ ಹೌಸ್ !**

ಅಮೆರಿಕಾ ಅಧ್ಯಕ್ಷರ ನಿವಾಸ ವೈಟ್ ಹೌಸ್‌ನ್ನು ಹೋಲುವ ಕಟ್ಟಡವನ್ನು ಕೊಲಂಬೋದಲ್ಲಿ ಕಂಡಾಗ ಚಕಿತನಾದೆ. ಅದು ಪುರಸಭಾ ಕಟ್ಟಡ ಎಂದು ತಿಳಿದಾಗ ಮತ್ತಷ್ಟು ಆಶ್ಚರ್ಯವಾಯಿತು. ಎದುರಿನಲ್ಲೇ ದೊಡ್ಡ ಪಾರ್ಕ್, ಪಾರ್ಕ್‌ನಲ್ಲಿ ಸುಂದರ ಬುದ್ಧನ ಮೂರ್ತಿ. ಕಾಲು ದಣಿಯುವಷ್ಟು ಸುತ್ತಾಡಿದೆ.

**ಪ್ರಕೃತಿ ರಮ್ಯ ಕ್ಯಾಂಡಿ**

ಕ್ಯಾಂಡಿ ಪ್ರವಾಸಿಗರ ಪ್ರಕೃತಿಪ್ರಿಯರ ಮೆಚ್ಚಿನ ತಾಣ. ಬೌದ್ಧರಿಗೆ ಅದು ಪವಿತ್ರ ಯಾತ್ರಾಸ್ಥಳ. ಕೊಲಂಬೋದಿಂದ ೧೧೦ ಕಿಲೋಮೀಟರ್ ದೂರವಿರುವ ಈ ಗಿರಿಧಾಮಕ್ಕೆ ಟ್ರೈನ್ ಇದೆ. ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ಮನೋವೈದ್ಯರಾಗಿ ಕೆಲಸ ಮಾಡುತ್ತಿರುವ ಡಾ॥ ಸುಬ್ಬಾಸಿಂಗ್, ಅವರ ಹೆಂಡತಿ ಮತ್ತು ನಾನು ಕಾರ್‌ನಲ್ಲಿ ಹೊರಟೆವು. ನಮ್ಮ ಕೊಡಗನ್ನು ನೆನಪಿಸುವ ಲ್ಯಾಂಡ್‌ಸ್ಕೇಪ್, ಹಿತಕರವಾದ ಪ್ರಯಾಣ, ಮಾರ್ಗ ಮಧ್ಯೆ ಪಿನ್ನಾವಲದ ಆನೆಗಳ ಅನಾಥಾಶ್ರಮ ಹಾಗೂ ಔಷಧ ಸಸ್ಯಗಳ ವನವನ್ನು ನೋಡಿಕೊಂಡು ಮಧ್ಯಾಹ್ನ ೧೨ ಗಂಟೆಗೆ ಕ್ಯಾಂಡಿ ತಲುಪಿದೆವು. ನಾಲ್ಕನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಬೌದ್ಧ ದೇವಾಲಯ ಇಲ್ಲಿಯ ಆಕರ್ಷಣೆಯ ಕೇಂದ್ರ. ಈ ದೇವಾಲಯದ ವೈಶಿಷ್ಟ್ಯವೆಂದರೆ ಭಗವಾನ್ ಬುದ್ಧನ ಎಡದವಡೆಯ ಹಲ್ಲು ಇಲ್ಲಿ ಪೂಜೆಗೊಳ್ಳುತ್ತಿರುವ ಪವಿತ್ರ

ವಸ್ತು. ಭಾರತದ ಗೋರಖ್‌ಪುರದ (ಉತ್ತರ ಪ್ರದೇಶ) ಹತ್ತಿರವಿರುವ ಖುಷಿನಾರಾದಲ್ಲಿ ಬುದ್ಧನ ಅವಸಾನವಾಯಿತು. ಎರಡು ವರ್ಷಗಳ ಹಿಂದೆ ಅಲ್ಲಿಗೆ ಹೋಗಿ, ಬುದ್ಧನ ಸಮಾಧಿ ಸ್ಥಳವನ್ನೂ, ಆತ ಕೊನೆಯುಸಿರೆಳೆದ ಜಾಗದಲ್ಲಿ ಒಂಭತ್ತು ಅಡಿ ಉದ್ದದ, ಪವಡಿಸಿರುವ ಬುದ್ಧನ ಮೂರ್ತಿಯನ್ನೂ ನೋಡಿದ ನೆನಪು ಮರುಕಳಿಸಿತು. ಅಗ್ನಿಯಲ್ಲಿ ಆತನ ದೇಹ ಸುಟ್ಟು ಬೂದಿಯಾದಾಗ ಆತನ ಹಲ್ಲೊಂದನ್ನು ಹೆಕ್ಕಿ, ಶ್ರೀಲಂಕಾಕ್ಕೆ ತರಲಾಯಿತಂತೆ. ಅನುರಾಧಪುರ ಅನಂತರ ಬೇರೊಂದು ಸ್ಥಳದಲ್ಲಿದ್ದ ಈ ಹಲ್ಲನ್ನು ಕೊನೆಗೆ ಕ್ಯಾಂಡಿಗೆ ತಂದು ರಕ್ಷಿಸಿಡಲಾಯಿತು. ಬೌದ್ಧಧರ್ಮದ ವೈರಿಗಳು ಇದನ್ನು ನಾಶಪಡಿಸಲು ಬಹಳ ಪ್ರಯತ್ನಗಳನ್ನು ಮಾಡಿದರಂತೆ. ಆದರೆ ಈ ಹಲ್ಲು ಪವಾಡ ಸದೃಶ ರೀತಿಯಲ್ಲಿ ನಾಶವಾಗದೆ ಉಳಿದು, ಬೌದ್ಧ ಅನುಯಾಯಿಗಳ ಆರಾಧನೆಯ ವಸ್ತುವಾಗಿ ಉಳಿದಿಕೊಂಡಿದೆ. ಚಿನ್ನದ ಕರಂಡಕದಲ್ಲಿರುವ ಹಲ್ಲನ್ನು ವರ್ಷಕ್ಕೊಮ್ಮೆ ಹೊರತೆಗೆದು, ಆನೆಯ ಅಂಬಾರಿಯಲ್ಲಿಟ್ಟು ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ. ಅದನ್ನು ಸುಮಾರು ೫೦ ವರ್ಷಗಳು ನಿರಂತರವಾಗಿ ಪ್ರತಿವರ್ಷ ಹೊತ್ತ ಗಜರಾಜ 'ರಾಜ' ವೃದ್ಧಾಪ್ಯದಿಂದ ಸತ್ತಾಗ, ಅದರ ಸೇವೆಯನ್ನು ನೆನೆದು, ಅದರ ಚರ್ಮದಿಂದಲೇ ನಿಜಗಾತ್ರದ ಬೊಂಬೆ ಮಾಡಿ ದೇವಾಲಯದ ಆವರಣದಲ್ಲಿ ನಿಲ್ಲಿಸಿದ್ದಾರೆ. ಅದು ಜೀವಂತ ಆನೆಯೋ ಎನ್ನುವಷ್ಟು ಸುಂದರವಾಗಿದೆ. ೧೯೯೮ರಲ್ಲಿ ಎಲ್‌ಟಿಟಿಇಗಳ ದಾಳಿಗೆ ಸಿಕ್ಕಿ ದೇವಸ್ಥಾನದ ಬಹುಭಾಗ ನಾಶವಾಯಿತು. ಮತ್ತೆ ಅದನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಈ ದೇವಾಲಯದ ಆವರಣದಲ್ಲಿ ವಿಷ್ಣುವಿನ ದೇವಾಲಯವೂ ಇದೆ.

ಕ್ಯಾಂಡಿಯ ಬೊಟಾನಿಕಲ್ ಗಾರ್ಡನ್ ನೋಡುಗರ ಮನಸ್ಸನ್ನು ಅಯಸ್ಕಾಂತದಂತೆ ಸೆಳೆಯುತ್ತದೆ. ನಮ್ಮ ನಾಡಿನ ಆಲದ ಮರದಂತೆ ವಿಶಾಲವಾಗಿ ಹರಡಿಕೊಂಡಿರುವ ಜಾವಾ ಮರ, ತೆಂಗಿನಕಾಯಿಯ ಎರಡರಷ್ಟು ಗಾತ್ರದ ಅದೇ ರೀತಿಯ ಕಾಯಿಬಿಡುವ ಡಬಲ್ ಕೋಕೋನಟ್ ಮರ, ವಿವಿಧ ಅಪರೂಪದ ಆರ್ಕಿಡ್ ಹೂಗಳು, ಕಣ್ಣಿಗೆ ಹಬ್ಬವೆನಿಸುವ ಸಸ್ಯ ರಾಶಿಯನ್ನು ಸ್ವಲ್ಪ ಕಾಲದಲ್ಲಿಯೇ ನೋಡಿ ಆನಂದಪಟ್ಟೆವು.

**'ಡೂರಿಯಾ' ರುಚಿ**

ಅನಾನಸ್ ಹಣ್ಣಿನ ಗಾತ್ರದ, ಹಲಸಿನ ಹಣ್ಣಿನಂತೆ ದಪ್ಪ ದಪ್ಪ ಮುಳ್ಳಿನ ಕವಚವುಳ್ಳ, ಒಳಗಡೆ ಹಲಸಿನ ತೊಳೆ- ವಾಲೆ ತೊಳೆಗಳ ಸಮ್ಮಿಶ್ರ ರುಚಿಯುಳ್ಳ ವಿಚಿತ್ರ ಹಣ್ಣು 'ಡೂರಿಯಾ'. ಇದು ಮಲೇಶಿಯಾದಲ್ಲಿ, ಆಸ್ಟ್ರೇಲಿಯಾದಲ್ಲಿ ಬೆಳೆಯುವ ಹಣ್ಣು. 'ನನಗೆ ತುಂಬಾ ಇಷ್ಟ. ಇಲ್ಲಿ ಈ ಹಣ್ಣು ಸಿಗುವಂತಿದ್ದರೆ ಕಾರನ್ನು ನಿಲ್ಲಿಸು ಮಾರಾಯ' ಎಂದು ಡ್ರೈವರ್ ಜೋಸೆಫ್‌ನ್ನು ಕೇಳಿಕೊಂಡರು, ಡಾ॥ ಸುಬ್ಬಾಸಿಂಗ್. ''ಅಂ... ಡೂರಿಯಾ ಹಣ್ಣೇ, ಆ ಗಬ್ಬು ವಾಸನೆಯ ಹಣ್ಣೇ. ನೀವು ಅದನ್ನು ಕಾರಿನೊಳಗೆ ತಿನ್ನುವಿರಾದರೆ ತಿನ್ನಿ, ನಾನು ಮಾತ್ರ ಕಾರನ್ನು ಬಿಟ್ಟು ಬಸ್ ಹಿಡಿದು ಕೊಲಂಬೋಗೆ ಹೋಗಿಬಿಡುತ್ತೇನೆ'' ಎಂದ ಜೋಸೆಫ್ ! ಕೆಲವು ಪಂಚತಾರಾ ಹೋಟೆಲ್‌ಗಳಲ್ಲಿ ಈ ಹಣ್ಣಿನ ಪ್ರವೇಶವನ್ನು ನಿಷೇಧಿಸಲಾಗಿದೆ, ನಿಮಗೆ ಗೊತ್ತೇ ಎಂದ ! ಡೂರಿಯಾ ಹಣ್ಣನ್ನು ತಿನ್ನಲು ಬಾಯಲ್ಲಿ ನೀರೂರಿಸಿಕೊಂಡು ಕಾದಿರುವ ಡಾ॥ ಸುಬ್ಬಾಸಿಂಗ್ ದಂಪತಿಗಳು ಒಂದು ಕಡೆ, ಆ ಹಣ್ಣಿನ ವಾಸನೆಗೆ ಹೆದರುವ ಜೋಸೆಫ್ ಇನ್ನೊಂದು ಕಡೆ. ಕ್ಯಾಂಡಿಯಿಂದ ವಾಪಸ್ ಬರುವಾಗ, ಡೂರಿಯಾ ಹಣ್ಣುಗಳನ್ನು ಮಾರುವ ರಸ್ತೆ ಬದಿಯ ಅಂಗಡಿಯ ಬಳಿ ಕಾರ್ ನಿಂತೇಬಿಟ್ಟಿತು. ಡಾ॥ ಸುಬ್ಬಾಸಿಂಗ್ ಓಡಿಹೋಗಿ, ಹಣ್ಣುಗಳನ್ನು ಕತ್ತರಿಸಲು ಹೇಳಿ, ತಿನ್ನಲು ನನ್ನನ್ನೂ ಆಹ್ವಾನಿಸಿದರು. ಅಳುಕುತ್ತಲೇ ಹೋಗಿ ಹಣ್ಣು ತಿಂದೆ. ಜೋಸೆಫ್ ಹೇಳಿದಷ್ಟು ಕೆಟ್ಟದಾಗಿಯೂ ಇರಲಿಲ್ಲ. ಡಾ॥ ಸಿಂಗ್ ಖುಷಿ ಪಡುವಷ್ಟು ರುಚಿಯೂ ಇರಲಿಲ್ಲ. 'ಊಟ ತಮ್ಮಿಚ್ಛೆ, ನೋಟ ಪರರಿಚ್ಛೆ' ಎಷ್ಟು ಸತ್ಯ ಎನಿಸಿತು.

**ಶ್ರೀಲಂಕಾ ಸಂಕ್ಷಿಪ್ತ ಪರಿಚಯ**

**ವಿಸ್ತೀರ್ಣ** : ೬೫ ಸಾವಿರ ಚದರ ಕಿ.ಮೀ.
**ರಾಜಧಾನಿ** : ಶ್ರೀ ಜಯವರ್ಧನೆಪುರ ಕೊಟ್ಟೆ.
**ವಾಣಿಜ್ಯ ರಾಜಧಾನಿ** : ಕೊಲಂಬೋ.
**ಜನಸಂಖ್ಯೆ** : ೧.೯ ಕೋಟಿ. ಸಿಂಹಳೀಯರು ೭೪%, ತಮಿಳರು ೧೮%, ಮುಸ್ಲಿಮರು ೭%.
**ಧರ್ಮ** : ಬೌದ್ಧ : ೭೦%, ಹಿಂದೂ : ೧೫%, ಇಸ್ಲಾಂ : ೭%, ಕ್ರಿಶ್ಚಿಯನ್ : ೭%
**ಅಕ್ಷರಸ್ಥರ ಸಂಖ್ಯೆ** : ೯೨%.
**ರಫ್ತು** : ಟೀ, ಜೆಮ್ಸ್, ರಬ್ಬರ್, ತೆಂಗು, ಸಿದ್ಧಪಡಿಸಿದ ಬಟ್ಟೆಗಳು.
**ನಾಣ್ಯ** : ರೂಪಾಯಿ (ಭಾರತದ ೧ ರೂಪಾಯಿಗೆ ಶ್ರೀಲಂಕಾದ ೨ ರೂಪಾಯಿ ಸಮ).
**ಸಾರಿಗೆ** : ರಸ್ತೆ, ರೈಲು, (ಆಂತರಿಕ ವಿಮಾನ ಸೌಲಭ್ಯವಿಲ್ಲ).



*ಆನೆಗಳ ಶರಣಾಲಯ*

**ಆನೆಗಳಿಗೊಂದು ಅನಾಥಾಶ್ರಮ**

ಪಿನ್ನಾವಲಯದಲ್ಲಿ 'ಎಲಿಫೆಂಟ್ ಆರ್ಫನೇಜ್' ಇದೆ. ಹಿಂಡಿನಿಂದ, ಕಾಡಿನಿಂದ, ತಾಯಿಯಿಂದ ತಪ್ಪಿಸಿಕೊಂಡುಬಂದ, ಗಾಯಗೊಂಡು ಬಳಲುವ ಪುಟ್ಟ ಆನೆ ಮರಿಗಳನ್ನು ರಕ್ಷಿಸಿ ತಂದು, ಪೋಷಿಸುವ ಈ ಅನಾಥಾಶ್ರಮವನ್ನು ನೀವು ನೋಡಲೇ ಬೇಕು ಎಂದು ಹೇಳಿ ಜೋಸೆಫ್ ನಮ್ಮನ್ನು ಕರೆದೊಯ್ದ. ಒಂದು ತಿಂಗಳ ವಯಸ್ಸಿನ ಮೂರು ಅನಾಥ ಮರಿಗಳಿಗೆ ಬಾಟಲಿಯಲ್ಲಿ ಹಾಲು ಕುಡಿಸುವುದನ್ನು ನೋಡಲು ಜನರ ದೊಡ್ಡ ಹಿಂಡೇ ಅಲ್ಲಿ ನೆರೆದಿತ್ತು. ಈ ಅನಾಥಾಶ್ರಮದಲ್ಲಿ ಐವತ್ತೈದಕ್ಕೂ ಹೆಚ್ಚಿನ ವಿವಿಧ ವಯಸ್ಸಿನ ಆನೆಗಳಿವೆ. ಬೆಳಿಗ್ಗೆ ೧೦-೩೦ಕ್ಕೆ ಅವೆಲ್ಲ ಪಕ್ಕದಲ್ಲೇ ಹರಿಯುವ ಹೊಳೆಗೆ ನೀರು ಕುಡಿಯಲು ಧಾವಿಸಿ ಬಂದವು. ಅದೊಂದು ಅಪೂರ್ವ ನೋಟ. ಶ್ರೀಲಂಕಾದವರಿಗೆ ಆನೆಗಳೆಂದರೆ ಬಹುಪ್ರೀತಿ. ಮೂವತ್ತು ವರ್ಷಗಳ ಹಿಂದೆ ೩೫ ಸಾವಿರದಷ್ಟು ಇದ್ದ ಆನೆಗಳ ಸಂಖ್ಯೆ ಈಗ ಕೇವಲ ಮೂರು ಸಾವಿರವನ್ನು ತಲುಪಿದೆ. ಹೀಗಾಗಿ ಅವನ್ನು ಜೋಪಾನ ಮಾಡಲು ಸರ್ಕಾರ ಮತ್ತು ಜನ ಮುಂದಾಗಿದ್ದಾರೆ. ಗಿಫ್ಟ್‌ಗಳನ್ನು ಮಾರುವ ಅಂಗಡಿಗಳಲ್ಲಿ ವಿವಿಧ ಆಕಾರದ ಆನೆ-ಗೊಂಬೆಗಳೇ ರಾರಾಜಿಸುತ್ತವೆ !

**ಕಡು ಬಡವರ ಕಷ್ಟ**

ಕೊಲಂಬೋದಲ್ಲಿ ಗಾಲ್ ರಸ್ತೆಯಲ್ಲಿ, ದಕ್ಷಿಣ ಭಾರತೀಯ ಸಸ್ಯಾಹಾರಿ ಹೋಟೆಲನ್ನು ಕಂಡು ಒಳಹೋದೆ. ಒಂದು ಮಸಾಲೆ ವಡೆ, ಕಾಫಿ ತೆಗೆದುಕೊಂಡೆ. ಹೋಟೆಲ್ ಮಾಣಿಯ ಜೊತೆ ತಮಿಳಿನಲ್ಲಿ ಅವನ ಕಷ್ಟ ಸುಖ ವಿಚಾರಿಸಿದೆ. ಶ್ರೀಲಂಕಾ ಬಡವರ ಬವಣೆಯನ್ನು ಆತ ವಿವರಿಸಿದ. ''ನೋಡಿ ಸಾರ್, ನೀವು ತಿಂದ ವಡೆ, ಕಾಫಿಗೆ ೨೫ ರೂಪಾಯಿ ಬಿಲ್. ನನ್ನ ಸಂಬಳವೂ ದಿನಕ್ಕೆ ೨೫ ರೂಪಾಯಿ. ಬೆಳಿಗ್ಗೆ ಏಳರಿಂದ ಸಂಜೆ ಎಂಟರವರೆಗೆ ದುಡಿಯಬೇಕು. ನನ್ನ ಹೊಟ್ಟೆಯೇನೋ ತುಂಬುತ್ತಿದೆ. ಆದರೆ ನನ್ನ ಮನೆಯವರ ಹೊಟ್ಟೆ ಪಾಡು ಏನು ಸಾರ್'' ಎಂದ ಅವನಿಗೆ ಉತ್ತರಿಸಲು ನನ್ನಲ್ಲಿ ಮಾತುಗಳಿರಲಿಲ್ಲ. ಹಿಂದಿನ ದಿವಸ ತಾಜ್ ಸಮುದ್ರದಲ್ಲಿ ಒಂದು ನಾನ್‌ರೊಟ್ಟಿ ಮತ್ತು ಬೇಳೆ ತೊವ್ವೆಗೆ ನಾನು ೨೭೦ ರೂ. ಕೊಟ್ಟಿದ್ದನ್ನು ನೆನೆಸಿಕೊಂಡೆ. ಉಳ್ಳವರು ಮತ್ತು ಇಲ್ಲದವರ ಈ ಅಗಾಧ ಅಂತರ ಎಂದು ಕಡಿಮೆಯಾದೀತು ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಪ್ರತಿಧ್ವನಿಸುತ್ತಲೇ ಇದೆ.

ಡಾ॥ ಸಿ. ಆರ್. ಚಂದ್ರಶೇಖರ್
ನಂ. ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರಕೆರೆ. ಬನ್ನೇರುಘಟ್ಟ ರಸ್ತೆ, ಬೆಂಗಳೂರು-೭೬

# ಅರಣ್ಯ ಮತ್ತು ಮಾನವ



ಅರಣ್ಯಗಳು ಲಕ್ಷಾಂತರ ವರ್ಷಗಳಿಂದ ನಿಧಾನವಾಗಿ ವಿಕಾಸಗೊಂಡು ಅನ್ಯೋನ್ಯವಾಗಿ ಬಾಳಿ ಬದುಕುತ್ತಿರುವ ಸಸ್ಯ, ಪ್ರಾಣಿ ಸೂಕ್ಷ್ಮ ಜೀವಿಗಳ ವಿಶಿಷ್ಟ ಸಮುದಾಯ. ಈ ಅರಣ್ಯಗಳು ಪರಿಸರ ಸಮತೋಲನವನ್ನು ಕಾಪಾಡುವಲ್ಲಿ ವಿಶಿಷ್ಟ ಪಾತ್ರವಹಿಸುತ್ತಿವೆ.

ಮನುಷ್ಯ ಮೂಲತಃ ಒಂದು ಪ್ರಾಣಿ. ನಮ್ಮ ಪೂರ್ವಜರು ಪ್ರಾಣಿಗಳಾಗಿದ್ದು ಈಗ ಮಾತನ್ನು ಕಲಿತು ಏನೂ ಅರಿಯದ ಮುಗ್ಧ ಪ್ರಾಣಿ ಪಕ್ಷಿಗಳ ಮೇಲೆ ಯಜಮಾನಿಕೆಯನ್ನು ತೋರಿಸಲು ಹೋಗುತ್ತಿದ್ದಾನೆ.

ಅರಣ್ಯವಿಲ್ಲದೆ ಮನುಷ್ಯ ಈ ಭೂಮಿಯ ಮೇಲೆ ಬದುಕಲಾರ. ಸುಮಾರು ವರ್ಷಗಳಿಂದ ಮನುಷ್ಯ ಅರಣ್ಯಗಳ ಸಸ್ಯ, ಪ್ರಾಣಿ ಪಕ್ಷಿಗಳ ಜೊತೆ ಅವಿನಾಭಾವ ಸಂಬಂಧ ಹೊಂದಿದ್ದಾನೆ.

ವೇದ ಪುರಾಣಗಳ ಕಾಲದಿಂದಲೂ ಭಾರತದ ಚರಿತ್ರೆ, ಧಾರ್ಮಿಕತೆಯಲ್ಲಿ ವನ್ಯ ಪ್ರಾಣಿಗಳಿಗೆ ವಿಶೇಷವಾದ ಸ್ಥಾನಮಾನ. ಈ ಕಾರಣದಿಂದಾಗಿಯೇ ಭಾರತದಲ್ಲಿ ಇನ್ನೂ ಜೀವ ವೈವಿಧ್ಯತೆಯನ್ನು ಕಾಣಬಹುದು.

ಭಾರತ ದೇಶದಲ್ಲಿನ ಪೂರ್ವಜರು ಒಂದು ಪ್ರಾಣಿ, ಪಕ್ಷಿ ಅಥವಾ ಯಾವುದೇ ಸಣ್ಣ ಜೀವಿಯನ್ನು ಕೇವಲ ಮನಸ್ಸಿಗೆ ಬಂದಂತೆ ಉಪಯೋಗಿಸಿಕೊಳ್ಳಬಹುದಾದ ವಸ್ತುವಿನಂತೆ ಎಂದೂ ಕಾಣಲಿಲ್ಲ. ಇದಕ್ಕೆ ಕಾರಣ 'ನಾವು ಬದುಕಬೇಕು – ಬೇರೆಯವರು ಬದುಕಬೇಕು' ಎಂಬ ಅವರ ನಿಯಮ. ನಮ್ಮನ್ನು ನಾವು ಪ್ರೀತಿಸುವಂತೆ ಪ್ರಾಣಿ ಪಕ್ಷಿಗಳನ್ನು ಪ್ರೀತಿಸಿ ಎಂಬುದೇ ಅವರ ನುಡಿಯಾಗಿತ್ತು ಮತ್ತು ಅವರ ಅಭೂತಪೂರ್ವವಾದ ನಂಬಿಕೆ ಎಲ್ಲಾ ಜೀವಜಂತುಗಳಲ್ಲಿಯೂ ಪರಮಾತ್ಮನಿದ್ದಾನೆ ಎಂಬುದು. ಅತಿ ಹೆಚ್ಚು ಅರಣ್ಯ ಜೀವ ವೈವಿಧ್ಯವನ್ನು ಹೊಂದಿರುವ ಕೊಡಗಿನ 'ದೇವರ ಕಾಡುಗಳು' ಇದಕ್ಕೊಂದು ಸ್ಪಷ್ಟ ಉದಾಹರಣೆ. ಇದಕ್ಕೆ ಕಾರಣ ಅಲ್ಲಿನ ಜನರ ಪ್ರಕೃತಿಯೊಂದಿಗಿನ ಸಮ್ಮಿಲನದ ಬದುಕು.

'ಮನುಷ್ಯ ಭೂಮಿ ಎಂಬ ಹಸಿರು ಹಡಗಿನಲ್ಲಿ ಚಲಿಸುತ್ತಿರುವ ಒಬ್ಬ ಪಯಣಿಗ.' ಇಂದಿನ ಹಾಗೂ ಮುಂದಿನ ಪೀಳಿಗೆಯ ಜೀವನಕ್ಕಾಗಿ ಅರಣ್ಯಗಳನ್ನು ಉಳಿಸಿ ಬೆಳೆಸಬೇಕು ಆದರೆ..... ಇಂದಿನ ಭೌತಯುಗದಲ್ಲಿ ಆತ್ಮವಿಲ್ಲದ, ಕಬ್ಬಿಣ ಹೃದಯದ, ಕಲ್ಲಿನ ಮನಸ್ಸಿನ ಮನುಷ್ಯ ಸ್ವಾರ್ಥಿಯಾಗಿ ಅರಣ್ಯದ ಬಗ್ಗೆ ಆಸೆಬುರುಕನಾಗಿದ್ದಾನೆ.

ಇಂದು ಮಾನವ ಅರಣ್ಯವನ್ನು ಕೇವಲ ಆರ್ಥಿಕ ವಸ್ತು, ಇದು ಉಪಯೋಗಕ್ಕೆ ಮಾತ್ರ ಎಂಬಂತೆ ನೋಡುತ್ತಾ..... ಈ ಸುಂದರ ಭೂಮಿಯ ಪರಿಸರ ಸಮತೋಲನವನ್ನು ಕಾಪಾಡುತ್ತಿರುವ ಬೆಲೆಕಟ್ಟಲಾಗದ ಅದರ ಮಹತ್ವವನ್ನು ಮರೆತಿದ್ದಾನೆ. ಉಳುವವನ ನೇಗಿಲು, ದರೋಡೆಕೋರರ ಬಂದೂಕು, ಕಳ್ಳರ ಅತಿ ಆಸೆ, ಇದರ ಜೊತೆಗೆ ಭ್ರಷ್ಟ ರಾಜಕಾರಣಿಗಳ ಸಂಚು ಅರಣ್ಯವನ್ನು ನಾಶಮಾಡಿ, ವನ್ಯಪ್ರಾಣಿ, ಪಕ್ಷಿಗಳ ಅವನತಿಗೆ ಮುಖ್ಯ ಕಾರಣಕರ್ತರಾಗಿದ್ದಾರೆ. ಒಂದು ಬಾರಿ ನಶಿಸಿಹೋದ ಜೀವಜಂತು ಮತ್ತೆ ಮರಳಿ ಬರಲಾರದು, ಅದು ಪ್ರಕೃತಿಯಿಂದಲೂ ಸಾಧ್ಯವಿಲ್ಲ.

ತಮ್ಮ ಜೀವನವನ್ನೆ ಅರಣ್ಯ ರಕ್ಷಣೆಗೆಂದು ಮೀಸಲಾಗಿಟ್ಟ ಅಮೃತದೇವಿ, ಸಾಲುಮರದ ತಿಮ್ಮಕ್ಕ, ಸುಂದರಲಾಲ ಬಹುಗುಣ, ದಕ್ಷ ಅರಣ್ಯ ಅಧಿಕಾರಿಗಳು ಒಂದು ಕಡೆಯಾದರೆ, ಅತಿ ಆಸೆ ತುಂಬಿದ ಹೃದಯವಿಲ್ಲದ ದರೋಡೆಕೋರರು, ಇವರಿಗೆ ಬೆನ್ನೆಲುಬಾಗಿ ನಿಂತ ರಾಜಕಾರಣಿಗಳು ಇನ್ನೊಂದು ಕಡೆ. ಈ ಎರಡು ಗುಂಪುಗಳ ನಡುವೆ ಹಿಂದಿನಿಂದಲೂ ಸಮರ ನಡೆಯುತ್ತ ಬಂದಿದೆ.

ರಾಜಸ್ಥಾನದಲ್ಲಿ ವಾಸಿಸುತ್ತಿರುವ 'ಬಿಶಾನಿ' ಸಮುದಾಯದಿಂದ ನಾವು ಕಲಿಯಬೇಕಿರುವುದು ಬಹಳಷ್ಟು ಇದೆ. ಇವರು ಪ್ರಾಣಿ, ಪಕ್ಷಿಗಳನ್ನು ಬರಿ ರಕ್ಷಣೆ ಮಾಡುವುದಿಲ್ಲ, ಜೊತೆಗೆ ತಮ್ಮಲ್ಲಿ ಇರುವ ನೀರು, ಆಹಾರವನ್ನು ಅವುಗಳ ಜೊತೆ ಹಂಚಿಕೊಂಡು ಬದುಕುತ್ತಿದ್ದಾರೆ.

ಹಿಂದಿಯಲ್ಲಿನ ಒಂದು ಸೂಕ್ತಿ ಈ ರೀತಿ ಹೇಳುತ್ತದೆ –

'ಸರ್ ಸನಾತೆ ರುಕ್ ರಹೆ ತೋ ಭಿ ಸಸ್ತೋ ಜಾನ್' ಅಂದರೆ ಕಡಿಯುತ್ತಿರುವ ಮರವನ್ನು ತಲೆ ಕೊಟ್ಟಾದರೂ ಉಳಿಸಲು ಮುಂದಾಗುವುದು ಹೋಲಿಕೆ ಇಲ್ಲದಂತಹ ಅಭೂತಪೂರ್ವ ಧನ್ಯ ಕಾರ್ಯ.

ರಾಜಸ್ಥಾನದಲ್ಲಿ 'ಕೇಜ್ರಿ' ಮರಗಳನ್ನು ಕಡಿಯುತ್ತಿದ್ದ ಅಲ್ಲಿನ ರಾಜನ ಸೇವಕರ ಕೊಡಲಿಗೆ ತನ್ನ ತಲೆ ನೀಡಿ ಮರ ಕಡಿಯುವುದನ್ನು ತಪ್ಪಿಸಿದ ಧೀರ ಮಹಿಳೆ ಅಮೃತದೇವಿ ಇದಕ್ಕೊಂದು ಸ್ಪಷ್ಟ ಉದಾಹರಣೆ.

ಸಸ್ಯ, ಪ್ರಾಣಿ, ಪಕ್ಷಿ, ಮನುಷ್ಯರೆಲ್ಲರು ಒಂದು ಕುಟುಂಬದ ಸದಸ್ಯರಿದ್ದಂತೆ. ಒಂದು ವೇಳೆ ಆ ಕುಟುಂಬದಲ್ಲಿ ಶಾಂತಿ ಇಲ್ಲವಾದರೆ ಅದರಲ್ಲಿನ ಯಾವ ಸದಸ್ಯನೂ ಸಂತೋಷದಿಂದ ಇರಲು ಸಾಧ್ಯವಿಲ್ಲ. ಅರಣ್ಯ ಮತ್ತು ವನ್ಯಜೀವಿಗಳನ್ನು ಉಳಿಸುವುದು ಮಾನವನ ಹೊಣೆ ಮಾತ್ರವಷ್ಟೇ ಅಲ್ಲ ಅದು ಅವನ ಕರ್ತವ್ಯ ಕೂಡ ಹೌದು. ಒಂದು ಚಿಕ್ಕ ಸೂಕ್ಷ್ಮ ಜೀವಿಯಿಂದ ಹಿಡಿದು ದೊಡ್ಡ ಆನೆಗಾತ್ರದ ಪ್ರಾಣಿಗಳು ತನ್ನದೇ ಆದ ಕೆಲಸವನ್ನು ಪರಿಸರದಲ್ಲಿ ನಡೆಸಿಕೊಂಡು ಬಂದಿವೆ. ಇದು ಪರಿಸರದ ನಿಯಮ ಕೂಡ ಹೌದು. ಒಂದು ವೇಳೆ ಮನುಷ್ಯ ಈ ಸ್ಥಿರ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಿದರೆ ಭವಿಷ್ಯದಲ್ಲಿ ಪಶ್ಚಾತ್ತಾಪ ಪಡಬೇಕಾಗುತ್ತದೆ. ಮಾನವ ಈಗ ನಿಧಾನವಾಗಿ ಅರಣ್ಯ ನಾಶದ ಫಲಿತಾಂಶವನ್ನು ಇಡೀ ಪ್ರಪಂಚ ಎದುರಿಸುತ್ತಿರುವ ಬರಗಾಲದ ಮುಖಾಂತರ ಅರಿಯುತ್ತಿದ್ದಾನೆ.

ನಿಧಾನವಾಗಿ ಅರಣ್ಯ, ವನ್ಯ ಪ್ರಾಣಿಗಳ ಮಹತ್ವವನ್ನು ತಿಳಿಯುತ್ತಿದ್ದಾನೆ. ಆರ್ಥಿಕ ಪ್ರಗತಿಗಾಗಿ ಮತ್ತು ಜನಸಂಖ್ಯೆಯ ನಾಗಾಲೋಟದಿಂದಾಗಿ ಅರಣ್ಯದ ಮೇಲೆ ಹೆಚ್ಚು ಒತ್ತಡ ಹೇರುತ್ತಿದ್ದಾನೆ.

'ಅರಣ್ಯ ರಕ್ಷಿಸಿ ಜೀವಕುಲ ಉಳಿಸಿ' ಎಂಬ ಕೂಗು ಪ್ರಪಂಚದಲ್ಲಿ ಮಾರ್ದನಿಸುತ್ತಿದೆ. ಅರಣ್ಯಗಳ ಉಳಿವು ವನ್ಯಪ್ರಾಣಿಗಳಿಗಾಗಿ ಮಾತ್ರವಲ್ಲ, ಮನುಷ್ಯನ ಉಳಿವು ಕೂಡ ಅದರಲ್ಲಿ ಅಡಗಿದೆ. ಇದರಲ್ಲೂ ಸ್ವಾರ್ಥ ಅಡಗಿದೆಯಲ್ಲವೆ !

ಎಷ್ಟೆಲ್ಲಾ ಕಾನೂನುಗಳು ಇದ್ದರೂ ರಾಷ್ಟ್ರೀಯ ಉದ್ಯಾನವನ, ಸಂರಕ್ಷಿತ ಅರಣ್ಯ ವಲಯ, ಅಭಯಾರಣ್ಯಗಳಲ್ಲಿ ಮರ, ಪ್ರಾಣಿಗಳ ಕಳ್ಳತನ ನಡೆಯುತ್ತಲೇ ಇದೆ. ಇದನ್ನೆಲ್ಲವನ್ನು ನಿಭಾಯಿಸಿ, ಅರಣ್ಯವನ್ನು ರಕ್ಷಿಸಲು ಇರುವ ಮಾರ್ಗ ಜನರ ಅರಿವು ಮತ್ತು ಅವರ ಅರಣ್ಯ ಇಲಾಖೆಯೊಂದಿಗಿನ ಸಹಕಾರ ಅತ್ಯಗತ್ಯ ಅನಿವಾರ್ಯ ಕೂಡ.

'ಯಾವ ಪಕ್ಷಿಯೂ ತಮ್ಮ ಗೂಡನ್ನು ಹೊಲಸು ಮಾಡಿಕೊಳ್ಳಲಾರದು. ಆದರೆ ಮನುಷ್ಯನ ವಿಷಯದಲ್ಲಿ ಇದು ಸತ್ಯವಲ್ಲ.'

ಮನುಷ್ಯ ನೇರವಾಗಿ ಅಥವಾ ಪರೋಕ್ಷವಾಗಿ ತನ್ನಷ್ಟಕ್ಕೆ ತಾನೇ ನಾಶ ಮಾಡಿಕೊಳ್ಳುತ್ತಿದ್ದಾನೆ. ಆದರೆ ಯಾವಾಗಲೂ ನಾವು ಇದನ್ನು ಜ್ಞಾಪಕದಲ್ಲಿ ಇಡಬೇಕು :

*''ಮುಂದಿನ ಪೀಳಿಗೆಗೆ ಕೊಡಬಹುದಾದ*
*ಬೆಲೆ ಕಟ್ಟಲಾಗದ ಕೊಡುಗೆ*
*ಈ ಸುಂದರ ಅರಣ್ಯಗಳು*
*ಇದನ್ನು ಶಾಶ್ವತವಾಗಿಡಲು ಶ್ರಮಿಸು*
*ಅದೇ ನೀನು ದೇವರಿಗೆ ಸಲ್ಲಿಸುವ*
*ನಿಜವಾದ ಪೂಜೆ''*

ಎಂ. ಕೆ. ಪರಶಿವಮೂರ್ತಿ
'ತ್ರಿಮೂರ್ತಿ ನಿಲಯ' ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ - ೫೭೨ ೨೧೪

# ಅವಿವಾಹಿತ ಸಹಜೀವನ ಈಗ ಕಾನೂನುಬದ್ಧ

**ಕೆ**ಲವರು ಇದನ್ನು ಶುದ್ಧ ಅವಿವೇಕ ಎನ್ನುತ್ತಿದ್ದಾರೆ. ಕೆಲವರು ಈ ಕಾನೂನು ೨೦ ವರ್ಷಗಳ ಹಿಂದೆ ಬರಬೇಕಾಗಿತ್ತು, ತುಂಬಾ ತಡವಾಯಿತು ಎನ್ನುತ್ತಿದ್ದಾರೆ.

ನಮ್ಮ ದೇಶದ ಸಂಪ್ರದಾಯವೇ ಮೈವೆತ್ತುಕೊಂಡಿರುವ ಉತ್ತರ ಪ್ರದೇಶದ ಅಲಹಾಬಾದ್ ಹೈಕೋರ್ಟು ಗಂಡು ಮತ್ತು ಹೆಣ್ಣು ಮದುವೆಯಾಗದೆ ಜೊತೆಯಾಗಿ ಜೀವಿಸುವುದನ್ನು ಕಾನೂನಿನ ಪ್ರಕಾರ ಮಾನ್ಯಮಾಡಿದೆ.

ಉಮಾ ಓರ್ವ ವಿವಾಹ ವಿಚ್ಛೇದನ ಪಡೆದಾಕೆ. ಈಗಾಗಲೇ ಎರಡು ಮಕ್ಕಳಿದ್ದಾರೆ. ಮದುವೆಯಿಂದ ಆಕೆ ಬರೀ ಕಹಿಯನ್ನೇ ಅನುಭವಿಸಿದಳು. ಮದುವೆಯಾದ ದಿನದಿಂದ ಹತ್ತು ವರ್ಷಗಳ ಕಾಲ ಆಕೆಯ ಬದುಕು ಸಾವು ಬದುಕಿನ ಸುಳಿಯಲ್ಲೇ ಒದ್ದಾಡುತ್ತಿತ್ತು. ಎರಡು ಮಕ್ಕಳೊಂದಿಗೆ ಮನೆ ಬಿಟ್ಟ ದಿನ ತುಂಬಾ ಅನಿಶ್ಚಿತತೆ ಕಾಡಿದರೂ, ಆಕೆಯ ಕಲೆ ಆಕೆಯನ್ನು ಬದುಕಿಸಿತು. ಇಂದು ಆಕೆ ಓರ್ವ ಸಹೃದಯನೊಂದಿಗೆ ವಾಸಿಸುತ್ತಿದ್ದಾಳೆ. ಆಕೆಯ ಎರಡು ಮಕ್ಕಳು ವಿದ್ಯಾವಂತರಾಗಿದ್ದಾರೆ. ಮದುವೆಯಾಗದೆ ಜೊತೆಯಾಗಿದ್ದ ಈ ೨೦ ವರ್ಷಗಳಲ್ಲಿ ಆಕೆಗೆ ಎಂದೂ ಮಾನಸಿಕ-ದೈಹಿಕ- ಹಿಂಸೆಯಾಗಿಲ್ಲ. ಮದುವೆಯ ಬಗ್ಗೆ ಕೇಳಿದರೆ 'ನಾನೀಗ ಹೀಗೇ ಸುಖವಾಗಿದ್ದೇನೆ' ಎನ್ನುತ್ತಾಳೆ.

ದೆಹಲಿಯಲ್ಲಿರುವ ಸೂರ್ಯನಾರಾಯಣ ಒಂದು ಬ್ಯಾಂಕಿನಲ್ಲಿ ಉದ್ಯೋಗಿ. ಸಂಬಳ ೧೦,೦೦೦. ಮದುವೆಯಾಗಲು ಸಿದ್ಧವಿಲ್ಲ. ಆಸ್ತಿಪಾಸ್ತಿ ಇಲ್ಲದ ನಾನು, ಉದ್ಯೋಗಸ್ಥೆಯನ್ನು ಮದುವೆಯಾದರೂ ನಮ್ಮಿಬ್ಬರ ಸಂಬಳದಲ್ಲಿ ಸುಖವಾಗಿರಲು ಸಾಧ್ಯವಿಲ್ಲ ಎನ್ನುತ್ತಾನೆ. ಜೊತೆಯಲ್ಲಿರುವ ಆತನ ಗೆಳತಿ ರೋಜ ಕೂಡ ಇದಕ್ಕೆ ಒಪ್ಪಿಗೆ ಎನ್ನುವಂತೆಯೇ ಮಾತನಾಡುತ್ತಾಳೆ. ಇಬ್ಬರೂ ವೈಮನಸ್ಯ ಉಂಟಾಗುವವರೆಗೆ ಒಟ್ಟಿಗೆ ಇರುತ್ತೇವೆಂದು ನಗುತ್ತಾ ಹೇಳುತ್ತಾರೆ.

ಮಹಿಳಾ ಸಬಲೀಕರಣದ ಈಚಿನ ದಿನಗಳಲ್ಲಿ ಇದೊಂದು ಮಹತ್ವದ ಬೆಳವಣಿಗೆ ಎನ್ನಬಹುದು. ಸ್ತ್ರೀ ತನ್ನ ಜೊತೆಗಾರನನ್ನು ಆರಿಸಿಕೊಳ್ಳುವುದು, ಸ್ವತಂತ್ರ ಜೀವನ ಶೈಲಿ. ಆಕೆಯ ದೇಹದ ಮೇಲಿನ ಹಕ್ಕು ಆಕೆಯದೇ ಆಗಿರುತ್ತದೆ. ಮದುವೆಯಾದರೆ ಈ ರೀತಿ ಪ್ರತಿಪಾದಿಸಲು ಕಷ್ಟವಾಗುತ್ತದೆ. ಹಾಗಂತ ಇದು ಮದುವೆಗೆ ಪರ್ಯಾಯವೇನಲ್ಲ. ಜೊತೆಯಲ್ಲಿರುವವರೆಗೂ ಪರಸ್ಪರ ಗೌರವ, ಜವಾಬ್ದಾರಿ, ಬದ್ಧತೆ ಬೇಕಾಗುತ್ತದೆ. ಇದೊಂದು ಕಾನೂನಬದ್ಧ ಅನೈತಿಕ ಲೈಂಗಿಕತೆಯಾಗಬಾರದು. ಇದರಲ್ಲೂ ಒಂದು ನೈತಿಕತೆ, ಬದುಕಿನ ಮೌಲ್ಯವಿರಬೇಕು.

ಉಚ್ಚ ನ್ಯಾಯಾಲಯದ ಈ ತೀರ್ಮಾನ ಜನರಲ್ಲಿ ಗೊಂದಲವನ್ನುಂಟುಮಾಡಿದೆ. ಒಂದೆಡೆ ಸೌಂದರ್ಯ ಸ್ಪರ್ಧೆಗಳಿಗೆ ತಡೆಯೊಡ್ಡುವ ಕಾನೂನು, ಮತ್ತೊಂದೆಡೆ ಅತಿಯಾದ ಸ್ವಾತಂತ್ರ್ಯ ನೀಡುವಂತಹ ತೀರ್ಪು ನೋಡಿದರೆ ನ್ಯಾಯಾಲಯವೇ ಗೊಂದಲದಲ್ಲಿರ ಬಹುದೇ ಅನ್ನಿಸುತ್ತದೆ. ಆದರೆ ಈ ನಿಟ್ಟಿನಲ್ಲಿ ಮದುವೆಯಾಗದೇ ಜೊತೆಯಲ್ಲಿರುವಾಗ ಇಂದಿನ ಯುವಕ ಯುವತಿಯರು ಹೆಚ್ಚು ಯೋಚಿಸಬೇಕಾದ ಅಗತ್ಯ ಕಾಣುತ್ತದೆ. ಮಹಿಳಾ ಸ್ವಾತಂತ್ರ್ಯದ ದೃಷ್ಟಿಯಿಂದ ಇದು ಅಂತಹ ಪೂರಕ ಕಾನೂನಲ್ಲ, ಆದರೆ ಮಹಿಳೆ ತನ್ನ ಹಕ್ಕುಗಳನ್ನು ಅರಿಯಲು, ಚಲಾಯಿಸಲು ಇದು ಸಹಾಯಕವಾಗಬಹುದು. ಮದುವೆ ಯಾದರೂ ಅನಿಶ್ಚಿತ ಬದುಕನ್ನೆದುರಿಸುತ್ತಿರುವ ಅನೇಕ ಮಹಿಳೆಯರನ್ನು ನೋಡಿ ಮದುವೆ ಯಾಗದ ಸ್ತ್ರೀಯರಿಗೊಂದಿಷ್ಟು ಧೈರ್ಯ ಈ ಕಾನೂನಿನಿಂದ ಬರಲು ಸಾಧ್ಯವಿದೆ. ಇಂದು ವಯಸ್ಕರ ಸಂಬಂಧಗಳಲ್ಲೂ ಬಿರುಕು, ಹಿಂಸೆಯ ಪರಮಾವಧಿ ಇದೆ. ವಿವಾಹ ವಿಚ್ಛೇದನಗಳ ಸಂಖ್ಯೆ ಹೆಚ್ಚಿದೆ. ಹೀಗಿರುವಾಗ ಗಂಡು ಮತ್ತು ಹೆಣ್ಣಿನ ಸಮಾನತೆಗಾಗಿ ಬಂದ ಈ ನಿರ್ಣಯ ಗಂಡಿನಷ್ಟೇ ಹೆಣ್ಣಿಗೂ ಸ್ವತಂತ್ರ ಜೀವನ ನಡೆಸುವ ಹಕ್ಕಿದೆ ಎಂಬುದನ್ನು ಮಾನ್ಯಮಾಡುತ್ತದೆ. ಅದನ್ನು ಹೆಣ್ಣು ಸ್ವಚ್ಛಂದತೆಗಾಗಲಿ, ಬೇಜವಾಬ್ದಾರಿಯುತ ಜೀವನಕ್ಕಾಗಲಿ ಬಳಸದೆ ತಮಗನುಕೂಲ ಮಾಡಿಕೊಳ್ಳಬೇಕಾಗಿದೆ.

ಆದರೆ ಈ ಕಾನೂನು ಹಿರಿಯ ಪ್ರಜೆಗಳಿಗೆ ಸಂತೋಷ ತಂದಿಲ್ಲ. ಹಾಗಂತ ವಿರೋಧ ತೋರಿಸುತ್ತಿಲ್ಲ. ನಮ್ಮ ಕಾಲದಲ್ಲಿ ಶೀಲಕ್ಕೆ ಭಾರಿ ಪ್ರಾಮುಖ್ಯತೆ ಇತ್ತು, ಆದರೆ ಇಂದು ಆತ್ಮವಿಶ್ವಾಸಕ್ಕೆ ಹೆಚ್ಚು ಬೆಲೆ ಬಂದಿದೆ. ವರದಕ್ಷಿಣೆ, ರೂಪ, ಬಡತನ ಮೊದಲಾದ ಕಾರಣಗಳಿಂದ ಮದುವೆಯಾಗದೆ ಮನೆಯಲ್ಲುಳಿದ ಹೆಣ್ಣು ಮತ್ತು ಗಂಡುಗಳು ಯಾವುದೇ ಒತ್ತಡಗಳಿಲ್ಲದೆ ಜೊತೆಯಾಗಿರಬಹುದಾಗಿದೆ ಎನ್ನುವ ಹಿರಿಯರೂ ಇದ್ದಾರೆ.

ಮದುವೆ ಅನೇಕ ಸಮಸ್ಯೆ ಹಾಗೂ ಜಂಜಾಟಗಳನ್ನು ತರುತ್ತದೆ. ಆದರೆ ಇಲ್ಲಿ ಒಬ್ಬರಿಂದ ಒಬ್ಬರು ಯಾವುದೇ ನಿರೀಕ್ಷೆಗಳನ್ನು ಮಾಡದಿರುವುದಕ್ಕೆ ಇರುವಷ್ಟು ದಿನ ಸುಖವಾಗಿರಬಹುದು ಎನ್ನುವ ಯುವಕರೊಂದಿಗೆ ಈ ತೀರ್ಮಾನ ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತದೆ. ಹೆಂಗಸರು ಅದೇ ದಾರಿಯಲ್ಲಿ ಹೋಗಲು ಪ್ರೇರೇಪಿಸುತ್ತದೆ ಎನ್ನುವ ಯುವಕ-ಯುವತಿಯರೂ ಇದ್ದಾರೆ.

ಲಿಂಗ ಸಮಾನತೆಯ ಸೂಕ್ಷ್ಮ ತೀರ್ಪು ನೀಡುವಲ್ಲಿ ಅಲಹಾಬಾದ್ ಹೈಕೋರ್ಟ್ ಸದಾ ಮುಂದಿದೆ. ಊಟದ ಸಮಯದ ಬಿಡುವಿನಲ್ಲಿ ತನ್ನ ಪತಿಯೊಂದಿಗೆ ಲೈಂಗಿಕ ಚಟುವಟಿಕೆಯಲ್ಲಿದ್ದಳು ಎನ್ನುವ ಕಾರಣಕ್ಕಾಗಿ ಮಹಿಳಾ ಪೊಲೀಸ್ ಆಫೀಸರ್ ಒಬ್ಬರನ್ನು ಹಿರಿಯ ಅಧಿಕಾರಿಗಳು ಅಮಾನತ್ತಿನಲ್ಲಿಟ್ಟಿದ್ದರು. ಆದರೆ ಅಲಹಾಬಾದ್ ಹೈಕೋರ್ಟ್ ಅದನ್ನು ತಳ್ಳಿ ಹಾಕಿ ಮಹಿಳೆಯಾಗಲಿ, ಪುರುಷನಾಗಲಿ ಬಿಡುವಿನ ವೇಳೆ ಊಟ, ನಿದ್ದೆ, ಮೈಥುನಗಳಲ್ಲಿರುವುದು ಅಪರಾಧವಲ್ಲ ಎನ್ನುವ ತೀರ್ಪು ನೀಡಿ ಮಹಿಳಾ ಪೊಲೀಸ್ ಅಧಿಕಾರಿಣಿಯನ್ನು ಬಿಡುಗಡೆ ಮಾಡಿತು.

ಸ್ಕಾಂಡಿನೇವಿಯಾ ದೇಶಗಳಲ್ಲಿ ಮಹಿಳೆಯರು ಈ ರೀತಿಯ ಸಂಬಂಧಗಳನ್ನು ಒಪ್ಪುತ್ತಾರೆ. ಆ ದೇಶಗಳಲ್ಲಿ ಮದುವೆಯಾಗದೆ ಒಟ್ಟಿಗಿರುವ ಜೋಡಿಗಳಿಗೆ ಸ್ಥಾನಮಾನವಿದೆ. ಇವರ ಮಕ್ಕಳಿಗೂ ಉಳಿದವರಂತೆ ಜನ್ಮಜಾತ ಹಕ್ಕುಗಳು ಸಿಗುತ್ತವೆ.

ಅಂತೆಯೇ ನಮ್ಮ ದೇಶದಂತಹ ಸಂಪ್ರದಾಯಸ್ಥ ದೇಶದ ಮುಖ್ಯವಾಹಿನಿಯಲ್ಲಿ ಈ ಪದ್ಧತಿ ಸೇರುತ್ತಿರುವುದು ಬದಲಾಗುತ್ತಿರುವ ಕಾಲಧರ್ಮವನ್ನು ಒಪ್ಪಿಕೊಳ್ಳಬೇಕಾದ ಅಗತ್ಯಕ್ಕೆ ನಿದರ್ಶನವಾಗಿದೆ. ಜೊತೆಯಲ್ಲಿರುವ ಜೋಡಿಗಳು ಗೌರವಯುತವಾಗಿ ಬದುಕಿದರೆ ಮುಂದೊಂದು ದಿನ ಸಮಾಜದಿಂದಲೂ ಮಾನ್ಯತೆ ಪಡೆಯುವುದರಲ್ಲಿ ಸಂಶಯವಿಲ್ಲ. ಇಂದು ವಿಧವಾ ವಿವಾಹಗಳು ಸಮಾಜದಲ್ಲಿ ಸಾಮಾನ್ಯ ಎನ್ನಿಸಿವೆ. ಆದರೆ ಈ ಸಂಬಂಧದಲ್ಲಿ ಹುಟ್ಟುವ ಮಕ್ಕಳ ಸ್ಥಿತಿ-ಗತಿಯ ಕುರಿತು ಮತ್ತೊಂದು ತೀರ್ಪಿಗಾಗಿ ಕಾಯಬೇಕೇನೋ !

ಕೃತಯುಗದಲ್ಲಿ ಮದುವೆಗಳಿರಲಿಲ್ಲವಂತೆ. ಮಕ್ಕಳು ದೇಶದ ಆಸ್ತಿಯಾಗಿದ್ದವಂತೆ. ತ್ರೇತಾಯುಗದಲ್ಲಿ ಮದುವೆಗಳಿದ್ದರೂ ಮಕ್ಕಳು ಸಮಾಜದ ಆಸ್ತಿಯಾಗಿದ್ದವಂತೆ. ದ್ವಾಪರ ಯುಗದಲ್ಲಿ ಮದುವೆಗಳಿದ್ದು ಮಕ್ಕಳು ಕುಟುಂಬದ ಆಸ್ತಿಯಾಗಿದ್ದವಂತೆ. ಕಲಿಯುಗದಲ್ಲಿ ಮದುವೆಗಳಿರದೆ ಮಕ್ಕಳು ಸ್ವತಂತ್ರರಂತೆ.

– ಇದು ನಿಜವಾಗಬಹುದೇ ?

**ಪೂರ್ಣಪ್ರಜ್ಞ ಬೇಳೂರು**
ಅಂಚೆ : ಬೇಳೂರು- ೫೭೭೪೦೧, ಸಾಗರ ತಾ., ಶಿವಮೊಗ್ಗ ಜಿಲ್ಲೆ




ನವಕರ್ನಾಟಕ ಪ್ರಕಾಶನ ಮತ್ತು ಲಹರಿ ವಕೀಲರ ವೇದಿಕೆ ಜುಲೈ ೭ರಂದು ನಯನ ಸಭಾಂಗಣದಲ್ಲಿ ಏರ್ಪಾಟು ಮಾಡಿದ್ದ ಸಮಾರಂಭದಲ್ಲಿ ಶ್ರೀ ಎಸ್. ಆರ್. ಗೌತಮ್ ಅವರ 'ನಿತ್ಯಜೀವನದಲ್ಲಿ ಕಾನೂನು-ಪುಸ್ತಕ ೩' ಕೃತಿಯನ್ನು ನ್ಯಾಯಮೂರ್ತಿ ಶ್ರೀ ವಿ. ಗೋಪಾಲಗೌಡ ಬಿಡುಗಡೆ ಮಾಡಿದರು. ನ್ಯಾಯಮೂರ್ತಿ ಶ್ರೀ ಎ. ಜೆ. ಸದಾಶಿವ ಅಧ್ಯಕ್ಷತೆ ವಹಿಸಿದ್ದರು. ಡಾ॥ ಪ್ರಧಾನ್ ಗುರುದತ್ತ ಮುಖ್ಯ ಅತಿಥಿಯಾಗಿದ್ದರು. ನ್ಯಾಯ ಮೂರ್ತಿ ಶ್ರೀ ಚಂದ್ರಶೇಖರಯ್ಯ ಸೇರಿದಂತೆ ಬಹುಸಂಖ್ಯೆಯ ನ್ಯಾಯವಾದಿಗಳು, ಓದುಗರು ಸಮಾರಂಭದಲ್ಲಿ ಭಾಗವಹಿಸಿದ್ದರು.

# ಉಪದೇಶ – ಧರ್ಮ

ಬೆಳಗ್ಗೆದ್ದು ಒಂದು ಕಪ್ ಚಹಾದೊಡನೆ ದಿನಪತ್ರಿಕೆಯತ್ತ ಕಣ್ಣಾಡಿಸಿ. ಸಂಜೆ ಒಂದು ಉಪನ್ಯಾಸ ಕಾರ್ಯಕ್ರಮದಲ್ಲಿ ಭಾಗಿಯಾಗಿ. ಅಲ್ಲಿ ಕಾಣಿಸುವುದು ಕೇಳಿಸುವುದು ಉಪದೇಶಗಳು ! ಅವು ಸುಭಾಷಿತ, ನುಡಿಮುತ್ತು, ಬೋಧನೆ ಯಾವುದೇ ಹೆಸರಿನಲ್ಲಿರಬಹುದು. ನೀವು ಮನಸೋಲುವುದು ಮಾತ್ರ ಖಂಡಿತ. ಮತ್ತೆ ಅದೇ ವೇದಾಂತವನ್ನು ಪ್ರಚುರಪಡಿಸುವ ಮಾಧ್ಯಮವಾಗಿ ನೀವು ಕಾರ್ಯನಿರ್ವಹಿಸಲಿದ್ದೀರಿ ಎಂಬ ಅರಿವೂ ನಿಮಗಿರುವುದಿಲ್ಲ. ಏಕೆಂದರೆ ಅವುಗಳ ಇಂದಿನ ಕಾರ್ಯಸಾಧ್ಯತೆಯ ಕುರಿತು ನೀವೆಂದೂ ಯೋಚಿಸುವುದಿಲ್ಲ.

ಶಂಖದಿಂದ ಬಂದರೇ ತೀರ್ಥ ! ಮಹಾತ್ಮರ ಬಾಯಿಯಿಂದ ಹೊರಬಂದರೇ ನುಡಿಮುತ್ತು ! ಅದಕ್ಕೆಂದೇ ವರ್ಷಕ್ಕೊಮ್ಮೆ ಮಹಾತ್ಮರ ಜಯಂತಿಗಳು ಬರುತ್ತವೆ. ಸಾಂದರ್ಭಿಕವಾಗಿ ಅವರ ನುಡಿಮುತ್ತುಗಳನ್ನು ಸ್ಮರಿಸುತ್ತೇವೆ. ಅಷ್ಟೇ ಸುಲಭವಾಗಿ ಮರೆತೂಬಿಡುತ್ತೇವೆ. ಮರೆಯಲೇಬೇಕು. ಏಕೆಂದರೆ ಪ್ರತಿಯೊಬ್ಬ ಮಹಾತ್ಮನೂ ತನ್ನದೇ ಆದ ದೃಷ್ಟಿಕೋನವನ್ನಿಟ್ಟುಕೊಂಡಿರುತ್ತಾನೆ. ಮಹಾತ್ಮಾ ಗಾಂಧಿ ಅಹಿಂಸಾ ದೃಷ್ಟಿಕೋನವಿಟ್ಟುಕೊಂಡಿದ್ದರೆ ಸುಭಾಷ್‌ಚಂದ್ರ ಬೋಸರು ಸಶಸ್ತ್ರ ಹೋರಾಟವನ್ನು ಜೀವನವಿಧಾನವನ್ನಾಗಿಸಿಕೊಂಡಿದ್ದರು. ಈ ಇಬ್ಬರು ಮಹಾತ್ಮರ ಜನ್ಮದಿನ ದಂದೂ ''ಅವರ ಸಂದೇಶಗಳನ್ನು ಇಂದಿನ ದಿನಗಳಲ್ಲಿ ನಾವು ಅಳವಡಿಸಿಕೊಳ್ಳಬೇಕಾದ ಅಗತ್ಯವಿದೆ'' ಎಂಬ ಹೇಳಿಕೆಗಳು ರಾಷ್ಟ್ರ ನಾಯಕರಿಂದ ಘೋಷಿಸಲ್ಪಡುತ್ತವೆ. ಅಹಿಂಸಾ ಸತ್ಯಾಗ್ರಹ ವಿಧಾನವನ್ನೂ ಸಶಸ್ತ್ರ ಹೋರಾಟವನ್ನೂ ಏಕಕಾಲಕ್ಕೆ ಹೇಗೆ ಅಳವಡಿಸಿ ಕೊಳ್ಳಬೇಕು ? ಉತ್ತರವಿಲ್ಲ. ಆದರೂ ಹೇಳುವವರು ಹೇಳುತ್ತಲೇ ಇರುತ್ತಾರೆ. ನಾವು ಕೇಳಿಸಿಕೊಳ್ಳುತ್ತಲೇ ಇರುತ್ತೇವೆ.

ಧರ್ಮ ಗ್ರಂಥಗಳಂತೂ ಉಪದೇಶಗಳ ಅಮೃತವಾಹಿನಿಯಿಂದ ತುಂಬಿ ತುಳುಕುತ್ತಿರುತ್ತವೆ. ಖುರಾನ್ ಗ್ರಂಥದಲ್ಲಿ ಪ್ರವಾದಿ ಮಹಮ್ಮದರು ''ಧರ್ಮ ರಕ್ಷಣೆಗಾಗಿ ಹೋರಾಡು'' ಎನ್ನುತ್ತಾರೆ. ಏಸುಕ್ರಿಸ್ತ ''ಒಂದು ಕೆನ್ನೆಗೆ ಹೊಡೆದರೆ ಇನ್ನೊಂದನ್ನು ತೋರಿಸು'' ಎಂದಿದ್ದಾರೆ. ಮನುಸ್ಮೃತಿಯು ಹೆಣ್ಣನ್ನು ದೇವತೆಯೆಂದು ಹೇಳಿದೆ. ಅದೇ ರೀತಿ ಆಕೆಗೆ ಸ್ವಾತಂತ್ರ್ಯವನ್ನು ಕೊಡಲಾಗದೆಂದೂ ಹೇಳಿದೆ. ವೇದಗಳು ದೇವತೆಗಳಿಗೆ ಶರಣಾಗು ಎಂದು ಸಾರಿದರೆ ಉಪನಿಷತ್ತು ಅವರನ್ನು ಪ್ರಶ್ನಿಸು ಎನ್ನುತ್ತದೆ.

ಇಷ್ಟೆಲ್ಲಾ ವೈರುಧ್ಯಗಳಿದ್ದಾಗ ಎಲ್ಲಾ ಧರ್ಮಗಳು ಸಾರುವ ಸಂದೇಶ ಒಂದೇ ಎಂದು ಕೊಳ್ಳುವುದು ಒಂದು ಶ್ವೇತ ಸುಳ್ಳು. ಒಂದು ವೇಳೆ ಧರ್ಮಗಳೆಲ್ಲದರ ಸಾರ ಒಂದೇ ಆಗಿದ್ದರೆ ಹಿಂದೂ ಒಬ್ಬ ಮಸೀದಿಯಲ್ಲೇಕೆ ಪ್ರಾರ್ಥಿಸುವುದಿಲ್ಲ ? ಮುಸಲ್ಮಾನನೊಬ್ಬ ಸತ್ಯನಾರಾಯಣ ಪೂಜೆಯನ್ನೇಕೆ ನಡೆಸುವುದಿಲ್ಲ ? ಮತಾಂತರಕ್ಕೆ ಪ್ರೋತ್ಸಾಹ-ವಿರೋಧಗಳೇಕೆ ? ಅದರರ್ಥ ಇಷ್ಟೇ : ಎಲ್ಲಾ ಧರ್ಮಗಳೂ ಒಂದೇ ಎಂಬುದು ಸ್ವ-ವಂಚನೆಯ ವಿಧಾನ ಮಾತ್ರ ! ನಮ್ಮ ಧರ್ಮವೇ ಶ್ರೇಷ್ಠವೆಂದು ಮನಸ್ಸು ಮತ್ತೆ ಮತ್ತೆ ನೆನಪಿಸುತ್ತಿರುತ್ತದೆ. ಮನಸ್ಸನ್ನು ಕೆರಳಿಸಿ ಮತೀಯ ಮೇಲಾಟ ಹೋರಾಟಗಳು ನಡೆಯುವಂತೆ ಮಾಡಲು ಇಷ್ಟು ಸಾಕು.

ರಾಷ್ಟ್ರಗಳು ಏಕಾಂಗಿಯಾಗಿ ಒಂದು ಧರ್ಮದ ಆಧಿಪತ್ಯದಲ್ಲಿ ಬದುಕುತ್ತಿದ್ದಾಗ ಧಾರ್ಮಿಕ ಉಪದೇಶಗಳಲ್ಲಿ ಕೆಲವಾದರೂ ಬದುಕಿಗೆ ಹತ್ತಿರವಾಗಿದ್ದಿರಬಹುದು. ಆದರೆ ಇಂದು ನಾವು ಜಾಗತಿಕ ಸಮಾಜದಲ್ಲಿ ಜೀವಿಸುತ್ತಿದ್ದು ಪ್ರತಿಯೊಂದು ರಾಷ್ಟ್ರವನ್ನೂ ಒಂದಲ್ಲ ಒಂದು ಕಾರಣಕ್ಕಾಗಿ ಅವಲಂಬಿಸಿದ್ದೇವೆ. ಹೀಗಿರುವಾಗ ವ್ಯವಸ್ಥೆಯಲ್ಲಿ ಯಾವ ಧರ್ಮವೂ ತನ್ನ ಆಧಿಪತ್ಯವನ್ನು ಸ್ಥಾಪಿಸಲಾರದು. ಆದರೂ ಆಯಾ ಧರ್ಮಾಭಿಮಾನಿಗಳು ಆಧಿಪತ್ಯಕ್ಕಾಗಿ ನಿರಂತರ ಬಡಿದಾಟಗಳಲ್ಲಿ ತೊಡಗಿದ್ದಾರೆ.

ಎಂದೋ ಒಂದು ಕಾಲದಲ್ಲಿ ಧರ್ಮ ಒಂದು ದೇಶದ ಪ್ರಜೆಗಳನ್ನು ಒಗ್ಗೂಡಿಸಬಲ್ಲ ಸಾಮರ್ಥ್ಯವನ್ನು ಹೊಂದಿದ್ದಾಗ ನಮ್ಮ ಹಿರಿಯರು ಅಂದಿನ ಕಾಲಮಾನಕ್ಕೆ ಸೂಕ್ತವೆನ್ನಿಸಿದ ಉಪದೇಶಗಳನ್ನು ಕೊಟ್ಟಿರಬಹುದು. ಇಂದು ನಮ್ಮ ಸಮಾಜವು ಬಹು ಧರ್ಮಗಳ ಸಂಗಮ ವ್ಯವಸ್ಥೆಯಾಗಿ ರೂಪುಗೊಂಡಿರುವುದು ಗೊತ್ತಿರುವ ಸಂಗತಿ. ಈಗ ಒಂದು ದೇಶದ ಪ್ರಜೆ ಗಳೆಲ್ಲರನ್ನೂ ಒಗ್ಗೂಡಿಸಬಲ್ಲ ಸಾಮರ್ಥ್ಯ ಯಾವೊಂದು ಧರ್ಮಕ್ಕೂ ಇಲ್ಲ. ಹೀಗಿರುವಾಗ ಧರ್ಮಗಳು ಇಂದಿನ ಅವಶ್ಯಕತೆಗಳಿಗೆ ತಕ್ಕಂತೆ ಬದಲಾವಣೆಗೆ ಒಡ್ಡಿಕೊಳ್ಳಬೇಕಾದ್ದು ಅತ್ಯಂತ ಅಗತ್ಯ. ಆದರೆ ಆ ಬದಲಾವಣೆಯನ್ನು ಯಾರು ಮಾಡಬೇಕು ? ಹೇಗೆ ಮಾಡಬೇಕು ? ಈ ಬಗ್ಗೆ ಯಾವ ಧರ್ಮಗ್ರಂಥಗಳಲ್ಲೂ ಉಲ್ಲೇಖವಿಲ್ಲ !

ನಮ್ಮ ಸಂವಿಧಾನವನ್ನು ತೆಗೆದುಕೊಳ್ಳಿ. ಅದರ ೩೬೮ನೆಯ ವಿಧಿನಿಯಮವು ತಿದ್ದುಪಡಿಯ ವಿಧಿವಿಧಾನವನ್ನು ತಿಳಿಸುತ್ತದೆ. ಕಾಲಕಾಲಕ್ಕೆ ಆಗುವ ಬದಲಾವಣೆ ಗಳೊಂದಿಗೆ ಸಂವಿಧಾನವೂ ಬದಲಾಗಬೇಕೆಂಬ ಸತ್ಯವನ್ನು ಸಂವಿಧಾನದ ನಿರ್ಮಾತೃಗಳು ಕಂಡುಕೊಂಡಿದ್ದರು. ಇದೇ ಸತ್ಯವನ್ನು ಕಂಡುಕೊಳ್ಳುವುದಕ್ಕೆ ವಿಫಲರಾದ ಮತಸ್ಥಾಪಕರು, ಪ್ರವಾದಿಗಳು ಅಂದಿನ ದಿನಗಳಿಗಷ್ಟೇ ಅನ್ವಯಿಸಬಲ್ಲ ತತ್ವಗಳನ್ನು ಬೋಧಿಸಿ, ಬದಲಾವಣೆಗೆ ಅವಕಾಶವಿಲ್ಲದಂತೆ ಮಾಡಿ ನಮ್ಮನ್ನು ಕತ್ತಲೆಯಲ್ಲಿ ಕೆಡಹಿದ್ದಾರೆ.

ಒಂದೆಡೆ ಬದಲಾಗುತ್ತಿರುವ ಸಮಾಜ. ಇನ್ನೊಂದೆಡೆ ನಿಂತ ನೀರಾಗಿರುವ ಧರ್ಮ. ಇವೆರಡರ ನಡುವೆ ನಾವು ತೊಳಲಾಡುತ್ತಿದ್ದೇವೆ. ವೈಚಾರಿಕ ಕ್ರಾಂತಿಯ ಪ್ರತಿಪಾದಕರೆನ್ನಿಸಿಕೊಂಡವರೂ ತಮ್ಮ ವಾದಗಳ ಸಮರ್ಥನೆಗಾಗಿ ಧರ್ಮವನ್ನೇ ಮೊರೆ ಹೋಗುತ್ತಾರೆ. (ಪ್ರಶ್ನಾ ಮನೋಭಾವವನ್ನು ವೃದ್ಧಿಗೊಳಿಸಿಕೊಳ್ಳುವುದಕ್ಕೆ ಉಪನಿಷತ್ತುಗಳನ್ನು ಉದಾಹರಿಸುವುದು ಇತ್ಯಾದಿ.) ಧಾರ್ಮಿಕ ಮೂಲಭೂತವಾದಿಗಳೂ ಗಣಕಯಂತ್ರ, ದೂರದರ್ಶನ, ವಾಹನ ಸೌಕರ್ಯಗಳನ್ನು ಬಳಸಿಕೊಳ್ಳುವಲ್ಲಿ ಹಿಂದುಳಿದಿಲ್ಲ. ಅತ್ತಲೂ ಅಲ್ಲ ಇತ್ತಲೂ ಅಲ್ಲವಾಗಿದ್ದೇವೆ.

ಹೀಗಿರುವ ಒಂದು ವಿಷಮ ಪರಿಸ್ಥಿತಿಯಲ್ಲಿ ವಾಸ್ತವತೆಯನ್ನು ಆಧಾರವಾಗಿರಿಸಿಕೊಂಡ, ವಿಶ್ವ ಮಾನವತೆಯನ್ನು ಪ್ರತಿಪಾದಿಸಬಲ್ಲ ಧರ್ಮವನ್ನು ಕಂಡುಕೊಳ್ಳಬಾರದೇಕೆ ? ಈ ವಿಚಾರದ ಕುರಿತು ೧೮೦೬ರಿಂದ ೧೮೭೩ರ ತನಕ ಬದುಕಿದ್ದ ಅರ್ಥಶಾಸ್ತ್ರಜ್ಞ, ಜಾನ್ ಸ್ಟುವರ್ಟ್ ಮಿಲ್‌ನ ಅಭಿಪ್ರಾಯ ಉಲ್ಲೇಖನೀಯ. ಜಗತ್ತಿನಲ್ಲಿ ಧರ್ಮಗಳ ಇರುವಿಕೆಯ ಅವಶ್ಯಕತೆಯಿಲ್ಲ ಎನ್ನುವ ಆತನ ಹೇಳಿಕೆಗೆ ಪ್ರತಿಯಾಗಿ ಧರ್ಮಗಳು ಯಾವತ್ತೂ ತಪ್ಪಾಗಿಲ್ಲ, ಅವನ್ನು ಬಳಸಿಕೊಂಡಿರುವುದರಲ್ಲಿ ತಪ್ಪಾಗಿದೆಯೆಂಬ ವಾದ ಕೇಳಿಬಂತು. ಅದಕ್ಕೆ ಆತ ಮಾರ್ಮಿಕವಾಗಿ ಹೀಗೆ ಉತ್ತರಿಸುತ್ತಾನೆ : ''ಮನುಷ್ಯನನ್ನು ಸರಿದಾರಿಯಲ್ಲಿ ನಡೆಸುವುದಕ್ಕಾಗಿ ಧರ್ಮದ ಉಗಮವಾಯಿತು. ಮನುಷ್ಯನೇ ಅದನ್ನು ತಪ್ಪಾಗಿ ಬಳಸಿಕೊಳ್ಳುತ್ತಿದ್ದಾನೆ ಎಂದಾದರೆ ಅದು ತನ್ನ ಕಾರ್ಯದಲ್ಲಿ ಅಸಮರ್ಥವಾಗಿದೆಯೆಂದಾಯಿತು. ಅಸಮರ್ಥ ಧರ್ಮವೇಕಿರಬೇಕು ? ಆದ್ದರಿಂದ ಜಗತ್ತಿನಾದ್ಯಂತ ಮಾನವ ಧರ್ಮವೊಂದೇ ಇರಲಿ.''

ಮಾನವ ಧರ್ಮವನ್ನು ನಾವು ಒಪ್ಪಿಕೊಳ್ಳುವುದಾದರೆ ಎಲ್ಲಾ ಧರ್ಮಗಳನ್ನೂ ಒಂದುಮಾಡುವ ಕೆಲಸ ನಡೆಯಬೇಕಿದೆ. ಅದು ಸಾಧ್ಯವಾಗಬೇಕಾದರೆ ಮೊದಲನೆಯದಾಗಿ ಅಸ್ತಿತ್ವದಲ್ಲಿರುವ ಎಲ್ಲಾ ಧರ್ಮಗಳನ್ನೂ ಸಾರಾಸಗಟಾಗಿ ಪರಿಷ್ಕರಿಸಬೇಕು. ಆಯಾ ಧರ್ಮಗಳ ಉತ್ತಮ ಅಂಶಗಳನ್ನು ಕ್ರೋಢೀಕರಿಸಿ ಅದರೊಂದಿಗೆ ಇಂದಿನ ಅಗತ್ಯಗಳ ಹೊಸ ಅಂಶಗಳನ್ನು ಸೇರಿಸಿ ಮಾನವ ಧರ್ಮ ಸಂಸ್ಥಾಪನೆ ನಡೆಯಬೇಕು. ವಿವಿಧ ಧರ್ಮಗಳ ಮುಖಂಡರು ಒಂದೆಡೆ ಸೇರಿ, ಚರ್ಚಿಸಿ ಇಂಥದೊಂದು ಕ್ರಮಕ್ಕೆ ಮುಂದಾಗಬೇಕು. ಈ ಹೊಸ ಧರ್ಮವು ಸರ್ವಸಮ್ಮತವಾಗಿದ್ದು ಕಾಲಕ್ಕೆ ತಕ್ಕಂತೆ ಬದಲಾಗಬಲ್ಲ ಸ್ಥಿತಿಸ್ಥಾಪಕ ಗುಣವನ್ನು ಹೊಂದಿರಬೇಕು.

ಇದೊಂದು ಆದರ್ಶವಾದೀ ಕಲ್ಪನೆ ಎನ್ನಿಸಬಹುದು. ಆದರೆ ದೃಢಚಿತ್ತ, ನೈಜ ಮಾನವೀಯ ಕಳಕಳಿ ಇದ್ದಾಗ ಅಸಾಧ್ಯವೆಂದೇನೂ ಅಲ್ಲ. ಈ ನಿಟ್ಟಿನಲ್ಲಿ ನಮ್ಮೆಲ್ಲಾ ಧರ್ಮಗಳ ಧಾರ್ಮಿಕ ಗುರುಗಳು ಕಾರ್ಯಮಗ್ನರಾಗಬೇಕು. ಅವರೆಲ್ಲರೂ ತಮ್ಮ ಸಮುದಾಯಗಳ ಮೇಲೆ ಬಿಗಿಹಿಡಿತ ಹೊಂದಿರುವವರೆಂಬುದಕ್ಕೆ ಇಂದು ನಡೆಯುತ್ತಿರುವ ಧಾರ್ಮಿಕ ಅನಾಹುತಗಳೇ ಸಾಕ್ಷಿ. ಹೀಗಿರುವಾಗ ತಾವೇ ಹೊಸ ಧರ್ಮ ಸ್ಥಾಪನೆಯ ಕಾರ್ಯದಲ್ಲಿ ತೊಡಗಿದರೆ ಸಮಾಜದಿಂದ ವಿರೋಧವೇನೂ ಕಂಡುಬರಲಾರದು. ಹಾಗೊಂದು ವೇಳೆ ಕಂಡುಬಂದರೂ ಕಾಲಾನಂತರ ಎಲ್ಲವೂ ಸರಿಹೋಗುತ್ತವೆ. ಏಕಾಏಕಿ ಇಂಥ ವ್ಯವಸ್ಥೆ ಅವ್ಯವಸ್ಥೆಯನ್ನು ಸೃಷ್ಟಿಸಬಹುದೆಂದಾದರೆ ಅದನ್ನು ಹಂತಹಂತವಾಗಿ ಜಾರಿಗೊಳಿಸಬಹುದು. ಆದರೆ ನಮ್ಮ ಮುಂದಿರುವುದೊಂದೇ ಪ್ರಶ್ನೆ : ಧಾರ್ಮಿಕ ಮುಖಂಡರನ್ನು ಈ ಕೆಲಸಕ್ಕೆ ಸಜ್ಜುಗೊಳಿಸುವವರಾರು ? ರಾಜಕೀಯ ನೇತಾರರು ಈ ಕೆಲಸವನ್ನು ಕೈಗೆತ್ತಿಕೊಳ್ಳಬೇಕು. ಆದರೆ ಅವರುಗಳೇ ಧರ್ಮಾಂಧತೆಯ ಸುಳಿಯಲ್ಲಿ ಸಿಲುಕಿರುವಾಗ ಇದು ಸಾಧ್ಯವೇ ?

ಒಂದು ವೇಳೆ ಹೀಗೊಂದು ವ್ಯವಸ್ಥೆ ಅಸ್ತಿತ್ವಕ್ಕೆ ಬಂದಾಗ ಯಾವ ವಿಚಾರವಾದಿಯೂ ಅದನ್ನು ಪ್ರತಿಭಟಿಸಲಾರ. ಮೂಲಭೂತವಾದಿಗಳನ್ನೂ ವಿಚಾರವಾದಿಗಳನ್ನೂ ಏಕಛತ್ರದಡಿಯಲ್ಲಿ ತರುವುದಕ್ಕೆ ಇದೊಂದು ಸುಯೋಗ್ಯ ಮಾರ್ಗ. ಅದು ಬಿಟ್ಟು ಹಳಸಲು ಮತಧರ್ಮಗಳ ಬೋಧನೆಯನ್ನೇ ಉಣಬಡಿಸುತ್ತಿದ್ದರೆ, ಅದನ್ನೇ ಎಲ್ಲರೂ ಸವಿಯಬೇಕೆಂದರೆ, ಅದು ಯಾರಿಗೂ ಕ್ಷೇಮಕರವಲ್ಲ. ಬೊಗಳೆ ಉಪದೇಶಗಳಿಂದ ವೈಚಾರಿಕ ಚಿಂತನೆಯನ್ನು ಅದುಮಲು ಸಾಧ್ಯವಿಲ್ಲ. ಅದು ಭಾಸ್ಕರಾಚಾರ್ಯ, ಗೆಲಿಲಿಯೋ ಗೆಲಿಲಿ, ಅಂಥವರಿಂದ ಹಿಡಿದು ಇಂದಿನ ತನಕವೂ ಸತ್ಯಕ್ಕಾಗಿ ಹುಡುಕಾಟ ನಡೆಸುತ್ತಲೇ ಇದೆ. ಮುಂದೆಯೂ ನಡೆಸುತ್ತದೆ. ಸವಕಲು ಉಪದೇಶಗಳಿಂದ ಹೊರಬಂದು ಅನ್ವೇಷಣೆಯಲ್ಲಿ ತೊಡಗಿದರಾಗದೇ ? ಅಂದ ಹಾಗೆ ಇದೊಂದು ಉಪದೇಶವಲ್ಲ. ಮಾನವೀಯ ಕಳಕಳಿಯ ಬೇಡಿಕೆ.

ಸಿ. ಜೆ. ಅರವಿಂದ
ಅಧ್ಯಾಪಕರು, ಎಸ್ ಎನ್ ವಿ ಪ್ರೌಢಶಾಲೆ, ಕಾರ್ಕಳ - ೫೭೪ ೧೦೪

**HOSATHU** Kannada Monthly / August 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



... at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him ... Rangakrishna